ಗೀತಾ ಸಾಹಿತ್ಯ ಮಾಲೆ-೬.

# ಸಾಗರದಾಚೆ

(ಪ್ರವಾಸ ಸಾಹಿತ್ಯ)

ನಾಡಿಗ ಕೃಷ್ಣಮೂರ್ತಿ

ಗೀತಾ ಸಾಹಿತ್ಯ ಮಂದಿರ
ಮಲ್ಲೇಶ್ವರಂ : : ಬೆಂಗಳೂರು-೩.

# ಇದೇ ಲೇಖಕರ ಇತರ ಪುಸ್ತಕಗಳು

ಬಾ

ಬಾಪೂಜಿ

ಸರ್ದಾರ್ ಪಟೇಲ್

ಬಾಪೂ ದರ್ಶನ

ಕಮಲ ನೆಹರು

ಸರೋಜಿನಿ ನಾಯ್ಡು

ಜೈ ಪ್ರಕಾಶ್ ನಾರಾಯಣ್

ಕರ್ನಾಟಕದ ಆಗಸ್ಟ್ ವೀರರು

ಶಾಂತಿಯ ಸಾರ್ವಭೌಮರು

ನಮ್ಮ ಕಾಗದಗಳು

ರಾಷ್ಟ್ರೀಯ ಚಾರಿತ್ರ್ಯ

ಭಾರತದ ವೀರ ರಮಣಿಯರು

# ಅರಿಕೆ

**ಸಾಗರದೀಚೆ** ಬಂದು ನಾಲ್ಕು ವರ್ಷಗಳಾದರೂ, **ಸಾಗರದಾಚೆ** ಇನ್ನೂ ಏಕೆ ಬರಲಿಲ್ಲ ಎಂದು ಆಗಾಗ್ಗೆ ಕೇಳುತ್ತಿದ್ದ ನನ್ನ ಸ್ನೇಹಿತರಿಗೆ, "ಇಗೋ ಬಂತು, ತೆಗೆದುಕೊಳ್ಳಿ" ಎಂದು ಈ ಪುಸ್ತಕವನ್ನು ಕೊಡುತ್ತಿದ್ದೇನೆ. ಅನೇಕ ಕಾರಣಗಳಿಂದ ಈ ಪುಸ್ತಕವು ಜಾಗ್ರತೆಯಾಗಿ ಹೊರಬೀಳಲು ಅವಕಾಶವಾಗಲಿಲ್ಲ. ತಪ್ಪು ನನ್ನದೇ.

" **ನಮ್ಮ ಕಾಗದಗಳ** "ನ್ನು ಹರಸುತ್ತಾ, ಹಿರಿಯರಾದ ಶ್ರೀ **ಡಿ. ವಿ. ಗುಂಡಪ್ಪನವರು,** " ಅಮೇರಿಕದ ನೋಟಗಳ ಮತ್ತು ಅಮೇರಿಕನರ ನಡೆನುಡಿಗಳ ವರ್ಣನೆ ಹೆಚ್ಚಾಗಿರಬಹುದಾಗಿತ್ತು " ಎಂದಿದ್ದರು. ಅದೇ ಸ್ಫೂರ್ತಿ, ಅಮೇರಿಕದ ಜನ ಜೀವನದ ಬಗ್ಗೆ ನನ್ನಿಂದ ಹೆಚ್ಚು ಬರೆಯಿಸಿತು. ಆ 'ಹೆಚ್ಚು' ತುಂಬಾ ಹೆಚ್ಚಾಗಿದ್ದರೆ, ಹಿರಿಯರ ಆಶೀರ್ವಾದ ಬಲದಿಂದ ಬರೆದಿಪ್ಪೇನೆಂದು ಅವರ ಆಶ್ರಯ ಪಡೆಯುತ್ತೇನೆ. ಕಡಿಮೆಯಾಗಿದ್ದರೆ ಕ್ಷಮಿಸಿ.

ಮೊದಲಿನ ನೂರು ಪುಟಗಳನ್ನು ಬರೆಯುವಾಗ ಚಿ|| ಶಲ, ನನ್ನ ಸಹಾಯಕ್ಕೆ ಬಾರದಿದ್ದರೆ, ಈ ಪುಸ್ತಕವೇ ಹೊರ ಬರುತ್ತಿರಲಿಲ್ಲ. ಹಾಗೆಯೇ ಕೊನೆಯ ನೂರು ಪುಟದ ಬಗ್ಗೆ ಗೆಳೆಯ ಶ್ರೀ ನಮಿರಾಜರನ್ನು ಜ್ಞಾಪಿಸಿಕೊಳ್ಳಲೇ ಬೇಕು.

ನವೆಂಬರ್ ೧೪
ಮದರಾಸು

ಇತಿ ನಿಮ್ಮವ
**ನಾಡಿಗ ಕೃಷ್ಣಮೂರ್ತಿ**

# ವಿಷಯ ಸೂಚಿಕೆ

ಈ

ಪುಸ್ತಕವನ್ನು

ಗೌರವ ಪೂರ್ವಕವಾಗಿ

ಕನ್ನಡಿಗರಿಗೆ

ಅರ್ಪಿಸಿದ್ದೇನೆ.

ನಾಕೃಮೂ.

# ಸಾಗರದಾಚೆ

## ಕನಸು-ನನಸು

ಸಾಗರಾದಾಚೆ ಹೋಗಬೇಕೆಂಬ ಕನಸು ನನಗೆ ಮೂಡಿದ್ದು ನಾ ಲೋಯರ್ ಸೆಕೆಂಡರಿ ಪರೀಕ್ಷೆಗೆ ಓದುತ್ತಿದ್ದಾಗ. ಆಗಲೇ ಪುಸ್ತಕ ಭಂಡಾರ ದಿಂದ ಪುಸ್ತಕಗಳನ್ನು ತಂದು ಓದುವ ಅಭ್ಯಾಸ ನನಗೆ ಬಂದಿತ್ತು. ಒಂದು ದಿನ, **ಶ್ರೀ|| ರಾ. ವೆ. ಕರಗುದರಿಯವರು** ಬರೆದ **"ಡಾ|| ನಾರಾಯಣ ಸುಬ್ರಾಯ ಹರಡೀಕರ"** ಎಂಬ ಪುಸ್ತಕವನ್ನು ಓದಿದೆ. ತಾಯ್ನಾಡಿನ ಸೇವೆ ಮಾಡಲು ಡಾ|| ಹರಡೀಕರರು ಪಣತೊಟ್ಟು ಯಾವರೀತಿ ಬಹಳ ಕಷ್ಟ ಪಟ್ಟು, ಅಮೇರಿಕಕ್ಕೆ ಹೋಗಿ ಉಚ್ಚಶಿಕ್ಷಣವನ್ನು ಪಡೆದು, ಭಾರತದ ಸೇವೆ ಕೈಕೊಂಡರೆಂಬ ಅಂಶವನ್ನು ಓದ್ದಿದಾಗಿನಿಂದ ನಾನೂ ಅವರಂತಾಗಬೇಕು, ಅವರ ಹಾಗೆ ಸೇವೆಗೈಯಬೇಕು ಎಂಬ ಪ್ರಬಲವಾದ ಆಶೆ ತಲೆದೋರಿತು. ಆಗ ನಾನಿನ್ನೂ ಚಿಕ್ಕವನಿದ್ದುದರಿಂದ ಅದು ನನ್ನ ಮನಸ್ಸಿನಲ್ಲಿ ಹಾಗೆಯೇ ಬೀಡು ಬಿಟ್ಟು ಕೊಂಡಿತ್ತು.

ಕೆಲವು ವರ್ಷಗಳನಂತರ **ಶ್ರೀ|| ವಿ. ಕೃ. ಗೋಕಾಕರು** ಬರೆದ **"ಸಮುದ್ರದಾಚೆಯಿಂದ"** ಎಂಬ ಪುಸ್ತಕವನ್ನು ಓದಿದ ಮೇಲಂತೂ 'ಸೀಮೆ'ಗೆ ಹೋಗಿಯೇ ತೀರಬೇಕೆಂಬ ಆಕಾಂಕ್ಷೆ ತೀವ್ರಗತಿಯಲ್ಲಿ ಬೆಳೆಯ ತೊಡಗಿತು. ಆಗ ನಾನು ಶಿವಮೊಗ್ಗೆಯಲ್ಲಿ ಹೈಸ್ಕೂಲಿನಲ್ಲಿದ್ದೆನೆಂದು ಕಾಣು ತ್ತದೆ. ಆಗ ತಾನೇ ಪರದೇಶಕ್ಕೆ ಹೋಗಿ ಬಂದು ನಮಗೆ ಉಪಾಧ್ಯಾಯ ರಾಗಿದ್ದ **ಡಾ|| ನಾರಾಯಣರಾವ್ ನಿಕ್ಕಂ,** ಎಂಬುವರು ಆಗಾಗ್ಗೆ ತರಗತಿ ಯಲ್ಲಿ ತಮ್ಮ ಪರದೇಶದ ಅನುಭವಗಳನ್ನು ತಿಳಿಸುತ್ತಿದ್ದರು. ಹಾಗೆಯೇ ನಮ್ಮ ಮುಖ್ಯೋಪಾಧ್ಯಾಯರಾಗಿದ್ದ **ಡಾ|| ಟಿ. ಎಂ. ಜೇಕಬ್,** ಎಂಬು ವರು ಸೀಮೆಯ ತಮ್ಮ ಅನುಭವಗಳನ್ನು ಮನರಂಜಕವಾಗಿ ತರಗತಿಯಲ್ಲಿ ವರ್ಣಿಸುತ್ತಿದ್ದರು. ಈ ಮಾತುಗಳು ನನ್ನ ಮನದಲ್ಲಿ ಬೀಡುಮಾಡಿ ಕೊಂಡಿದ್ದ ಆಶೆಯನ್ನು ಪ್ರಚೋದಿಸುತ್ತಿದ್ದುವು.

## ಸಾಗರದಾಚೆ

ನಾನು ಬೆಂಗಳೂರಿಗೆ ಇಂಟರ್ ಓದುವುದಕ್ಕೆ ಬಂದಾಗ ಸೀಮೆಗೆ ಹೋಗುವ ಕನಸುಗಳು ಬೀಳಹತ್ತಿದುವು. ನನ್ನ ಬಡತನವು, ಇನ್ನೂ ಮುಂದುವರಿಯಬೇಕಾಗಿದ್ದ ನನ್ನ ಡಿಗ್ರಿ ವಿದ್ಯಾಭ್ಯಾಸ, ಮತ್ತು ನನ್ನ ಮನೆಯಲ್ಲಿನ ಅಡಚಣೆಗಳು, ನನ್ನ ಕನಸನ್ನು ಒಡೆದು ಬಿಡುತ್ತಿದ್ದುವು.

ಮೈಸೂರಿನಲ್ಲಿರುವ ಮಹಾರಾಜಾ ಕಾಲೇಜಿನಲ್ಲಿ ನಾನು ಬಿ. ಎ. ಡಿಗ್ರಿ ಪಡೆದುಕೊಂಡೆನು. ನಮಗೆ 'ಭಾರತೀಯ ಅರ್ಥಶಾಸ್ತ್ರ' (Indian Economics)ಕ್ಕೆ **ಡಾ|| ಆರ್. ಬಾಲಕೃಷ್ಣ** ಎಂಬುವರು ಅಧ್ಯಾಪಕರಾಗಿದ್ದರು. ಅವರೂ ಸೀಮೆಯನ್ನು ಸುತ್ತಿ ಬಂದವರು. ನಮಗೆ ಬೇಜಾರಾದಾಗ "**ಅರ್ಥಶಾಸ್ತ್ರ**"ದ ಬದಲು "**ಪ್ರಯಾಣಶಾಸ್ತ್ರ**"ದ ಬಗ್ಗೆ ವ್ಯಾಖ್ಯಾನ ಮಾಡುತ್ತಿದ್ದರು. ಅವರ ಸೀಮೆಯ ಅನುಭವಗಳು ನಮ್ಮನ್ನು ಹುರಿದುಂಬಿಸುತ್ತಿದ್ದುವು. ಹಿಟ್ಲರನು ಮ್ಯೂನಿಚ್‌ನಿಂದ ಬರ್ಲಿನ್‌ಗೆ ಹೋಗುವ ರೈಲಿನಲ್ಲಿ ಅವರೂ ಕುಳಿತು ಹೋಗುತ್ತಿದ್ದರೆಂಬ ವಿಷಯವನ್ನು ಹೇಳಿದಾಗ ನಮ್ಮ ಮೈ 'ಜುಂ' ಎಂದು 'ನಾವೂ ಆ ರೈಲಿನಲ್ಲಿದ್ದಿದ್ದರೆ' ಎಂಬ ಭಾವನೆಯುಂಟಾಗುತ್ತಿತ್ತು. ಆ ಭಾವನೆ ಸಾಧನೆಯಾಗುವ ಸಿದ್ಧಿ ಬರೀ ಕನಸಿನಂತಿತ್ತು. ಆಗ ಕನಸು ನನಸಾಗುವ ಬಗೆಯೇ ನನ್ನ ಬುದ್ಧಿಗೆ ತೋರುತ್ತಿರಲಿಲ್ಲ. ಆಗಿನ ನನ್ನ ಪರಿಸ್ಥಿತಿಗಳಲ್ಲಿ (ಸ್ಥಿತಿಯಲ್ಲಿ) ಅದು ಸಾಧ್ಯವೂ ಇರಲಿಲ್ಲ. ರಾತ್ರಿಯ ಊಟ ಎಲ್ಲಿಯಾಗುವುದೋ! ಎಂಬ ಶಂಕೆಯಲ್ಲಿದ್ದ ಕಾಲದಲ್ಲಿ, ಸೀಮೆಗೆ ಹೋಗುವ ಹುಚ್ಚು, ಕನಸಲ್ಲದೇ ಮತ್ತೇನು?

೧೯೪೨ರ ಆಗಸ್ಟ್ ಸ್ವಾತಂತ್ರ್ಯ ಚಳುವಳಿ, ೧೯೪೩ರ ಅಲೆದಾಟ, ೧೯೪೩-೪೬ರ ಉಪಾಧ್ಯಾಯಗಿರಿ, ಇವುಗಳ ಮಧ್ಯೆ ಪರದೇಶಕ್ಕೆ ಹೋಗುವ ನನ್ನ ಕನಸು ಕನಸಾಗಿಯೇ ಉಳಿದು, ಅದರ ಬಗ್ಗೆ ವಿಚಾರವೇ ಇರಲಿಲ್ಲ.

೧೯೪೭ ರಲ್ಲಿ ನಾನು ನ್ಯಾಯಶಾಸ್ತ್ರಾಭ್ಯಾಸಕ್ಕೆಂದು ಕರ್ನಾಟಕದ ಗಂಡುನಾಡಾದ **ಬೆಳಗಾವಿಗೆ** ಹೋದೆನು. ಅಲ್ಲಿ ನನ್ನ ಕನಸು ಗೋಪುರ ಕಟ್ಟತೊಡಗಿತು. ಕನಸಿನ ಗೋಪುರ, ಗಾಳಿಯಗೋಪುರವೆಲ್ಲಿ ಆಗುವುದೋ ಎಂಬ ಭಯ ಆಗಾಗ್ಗೆ ಮೂಡುತ್ತಿದ್ದರೂ, ಕನಸು, ನನಸಾಗಿ,

ಕಾರ್ಯಕ್ರಮನನ್ನಾಗಿ ಮಾಡಿಕೊಳ್ಳುವ 'ಜಿಗಟಿನ ಮನಸ್ಸು' ಬೆಳೆಯುತ್ತಲಿತ್ತು. ನನ್ನ ಆಸೆ ರೂಪುಗೊಂಡದ್ದು ಬೆಳಗಾವಿಯಲ್ಲಿ. ಸರ್ದಾರ್ ವಲ್ಲಭಭಾಯಿ ಪಟೇಲರ ಜೀವನ ಚರಿತ್ರೆಯನ್ನು ಚಿಕ್ಕ ಹೊತ್ತಿಗೆಯ ರೂಪದಲ್ಲಿ ಆಗ ಪ್ರಕಟಿಸಿದ್ದೆ. ಆ ಪುಸ್ತಕದ ಬಗ್ಗೆ ಅನೇಕ ಜನ ನನ್ನ ಬೆನ್ನು ತಟ್ಟಿದ್ದರು. ಆ ಭಾಷೆಯನ್ನೂ ಮೆಚ್ಚಿ ಹಿರಿಯರು ನನ್ನನ್ನು ಹರಸಿದ್ದರು.

ಸೀಮೆಗೆ ಹೋಗಬೇಕೆಂದು ಹೇಗೆ ಆಸೆ ಇತ್ತೋ ಹಾಗೆಯೇ ನಾನು ಪತ್ರಿಕೋದ್ಯಮಿಯಾಗಬೇಕೆಂಬ ಉತ್ಕಟಾಸೆ ನನ್ನಲ್ಲಿತ್ತು. ನನ್ನ ಬಿ. ಎ. ಆದಂದಿನಿಂದ ಯಾವುದಾದರೂ ಒಂದು ಪತ್ರಿಕೆಯಲ್ಲಿ ಸೇರಿ ಕೆಲಸಮಾಡಬೇಕೆಂಬ ಅಭಿಲಾಷೆ ಇತ್ತು. ನನ್ನ ಇಷ್ಟ, ಎಷ್ಟು ಪ್ರಯತ್ನ ಮಾಡಿದರೂ ನೆರವೇರ ಲಿಲ್ಲ. "**ಭಾರತದ ಸರ್ದಾರ್**" ಎಂಬ ಪುಸ್ತಕ ಹೊರಬಿದ್ದಾಗ, ಒಬ್ಬ ಮಹನೀಯರು ಅದನ್ನು ಓದಿ, ನನ್ನನ್ನು ಕರೆಸಿ, ಬೆನ್ನು ಚಪ್ಪರಿಸಿದರು. ನಾನು ಅಮೇರಿಕೆಗೆ ಹೋಗಲು ಹಣಸಹಾಯ ಮಾಡುವುದಾಗಿ ಹೇಳಿ, ಅಮೇರಿಕೆಯ ವಿಶ್ವವಿದ್ಯಾನಿಲಯದಲ್ಲಿ ಓದಲು ಜಾಗ ದೊರಕಿಸಲು ಹೇಳಿ, ಅದು ಬಂದಾಗ, ನನಗೆ ಸಹಾಯ ಮಾಡಲು ಹಿಂತೆಗೆದರು. ಆಗ ನಾನು ಹೇಗಾದರೂ ಮಾಡಿ ಅಮೇರಿಕೆಗೆ ಹೋಗಿಯೇ ತೀರಬೇಕು, ಪತ್ರಿಕೋದ್ಯಮದಲ್ಲಿಯೇ ಶಿಕ್ಷಣ ಪಡೆಯಬೇಕೆಂದು ಹಟ ತೊಟ್ಟೆನು.

ನನ್ನ ಈ ಹುಚ್ಚು ಹೊಳೆಗೆ ಹರಿಗೋಲು ಹಾಕಿದವರು ನನ್ನ ಜೊತೆಯಲ್ಲೇ ವಾಸಿಸುತ್ತಿದ್ದ ಶ್ರೀ ರಾಘವೇಂದ್ರರಾಯರೆಂಬ ಇಂಜನಿಯರು. ಇವರು ನನ್ನ ಹಂಬಲಕ್ಕೆ ತನಿಯೆರೆದು, 'ಪ್ರಯತ್ನ ಮಾಡಿರಿ, ಸಾಧ್ಯವಾದೀತು' ಎಂದು ಬೆಂಬಲ ಕೊಡುತ್ತಿದ್ದರು. ನನ್ನ ಬಡತನ ಅವರಿಗೆ ಗೊತ್ತಿದ್ದರೂ, ನನ್ನ ಬೆಳಗಾವಿಯ ಚಟುವಟಿಕೆಗಳನ್ನು ನೋಡಿ, ನನ್ನ ಸಾಹಸದಲ್ಲಿ ಧೈರ್ಯ ನಂಬಿಕೆಗಳನ್ನು ತಂದೊಡ್ಡಿದರು. ನನಗಿಂತ ಹಿರಿಯರಾದ ಅವರ ಸವಿಸ್ನೇಹ ನನಗಿರದಿದ್ದರೆ ನನ್ನ ಆಸೆ ಗಾಳಿಯ ಗೋಪುರವೇ ಆಗುತ್ತಿತ್ತು. ಕರುಣೆಯ ಕೈ ನೀಡಿದ ಈ ಜೀವ ನನ್ನ ಸ್ನೇಹನಿಧಿಯ ಪೈಕಿ ಒಬ್ಬರು.

## ಸಾಗರದಾಚೆ

ಸೀಮೆಗೆ ಹೋಗುವ ಕನಸನ್ನು ಕಂಡೆನು. ಆದರೆ ಆ ಕನಸನ್ನು ನನಸನ್ನು ಮಾಡುವ ರೀತಿ ಬಗೆಹರಿಯಲಿಲ್ಲ. ಮನಸ್ಸು ಚಿಂತೆಯ ಹುತ್ತವಾಯಿತು. ಯಾವಾಗಲೂ ಅದೇ ಯೋಚನೆಯಾಯಿತು. ಅಮೇರಿಕೆಗೆ ಹೋಗುವ ಬಗೆ ಎಂತು? ಈ ನನ್ನ ಸಾಹಸಕ್ಕೆ ಹಣವನ್ನುಎಲ್ಲಿಂದ ತರುವುದು? ಒಟ್ಟಿಗೆ ೫೦ ರೂಪಾಯಿ ಇಲ್ಲದ ನಾನು ಐದು ಸಹಸ್ರ ರೂಪಾಯಿ ಹೇಗೆ ಕೂಡಿ ಹಾಕುವುದು? ಈ ಸಾಹಸ, ಬಗೆಹರಿಯದ್ದಾಗಿ ಕಂಡು ಬಂದರೂ, ಹೇಗಾದರೂ ಮಾಡಬೇಕೆಂಬ ಧೃಡಸಂಕಲ್ಪವನ್ನು ಮಾಡಿದೆನು.

೧೯೪೬ನೇ ಇಸ್ವಿ ಫೆಬ್ರುವರಿ ತಿಂಗಳಲ್ಲಿ ನನ್ನ ಜೀವನದ ಅತಿಮಹತ್ವದ ನಿರ್ಣಯವನ್ನು ಕೈಕೊಂಡೆನು. ಮಾರ್ಚಿಯಲ್ಲಿ ಮೊದಲನೆಯ ಎಲ್. ಎಲ್. ಬಿ. ಪರೀಕ್ಷೆಯಿತ್ತು. ಪರೀಕ್ಷೆಗೆ ಹೋಗಿ ಪಾಸುಮಾಡಿ ವಕೀಲನಾಗಿ ಜೀವನ ಸಾಗಿಸಬೇಕೇ, ಅಥವಾ ಅಮೇರಿಕೆಗೆ ಹೋಗುವ ಸಾಹಸ ಕೈಕೊಂಡು ನನ್ನ ಗುರಿಯಲ್ಲಿ ಜಯಶಾಲಿಯಾಗಬೇಕೇ, ಎಂಬ ವಿಷಯದಲ್ಲಿ ಮನಸ್ಸಿನ ಹೊಯ್ದಾಟ ಪ್ರಾರಂಭವಾಗಿ, ಕೊನೆಗೆ ಅಮೇರಿಕೆಯ ಸಾಹಸವನ್ನೇ ಕೈಗೊಳ್ಳಬೇಕೆಂದು ತೀರ್ಮಾನಿಸಿದೆನು. ನನ್ನ ಈ ತೀರ್ಮಾನದಲ್ಲಿ ಅನೇಕ ತೊಂದರೆಗಳಿದ್ದುವು. ಜಯದ ಒಂದು ಎಳೆಯಾದರೂ ಆಗ ಕಣ್ಣಿಗೆ ಕಂಡಿರಲಿಲ್ಲ. ನನ್ನಲ್ಲಿದ್ದ ಹಟ ಮತ್ತು ಮುನ್ನುಗ್ಗುವ ಧೈರ್ಯ, ಇವೆರಡೇ ನನ್ನ ಆಯುಧಗಳಾಗಿದ್ದುವು. ಒಂದು ವೇಳೆ ನಾನು ಯಶಸ್ವಿಯಾಗದಿದ್ದರೆ, ಆಗುವ ಕಷ್ಟನಷ್ಟಗಳಿಗೆಲ್ಲಾ ತಯಾರಾಗಿದ್ದೆನು. ಹೆಚ್ಚೆಂದರೆ ನನ್ನ ಮುಂದಿನ ಭವಿತವ್ಯ ಜೀವನವೇ ಬೇರೆ ರೀತಿಯಲ್ಲಾಗುತ್ತಿತ್ತು. ಮೋಡಗಳ ಮಧ್ಯೆ ಬರುವ ಸೂರ್ಯ ತಲೆದೋರಿದಂತೆ, ನನ್ನ ನಿರಾಶೆಗಳ ತಂಡಗಳಲ್ಲಿ ಆಶಾಕಿರಣವನ್ನು ನನ್ನ ಸ್ನೇಹಿತರು ತೋರಿಸುತ್ತಿದ್ದರು. ಆಗ ಅವರೇ ನನ್ನ ಬೆಳಕಾಗಿದ್ದರು.

ನನ್ನ ಅಮೇರಿಕೆಯ ಯೋಜನೆಯನ್ನು ಸಿದ್ಧಗೊಳಿಸುವ ಸಲುವಾಗಿ ಏನು ಮಾಡಬೇಕೆಂಬ ಬಗ್ಗೆ ಸಲಹೆಗಳನ್ನು ಪಡೆಯಲು ಬೊಂಬಾಯಿಯಲ್ಲಿದ್ದ ನನ್ನ ಸ್ನೇಹಿತರಾದ **ಶ್ರೀ॥ ಸಂಜೀವರಾಯರ**ಲ್ಲಿ ಹೋದೆನು. ಸಂಜೀವ

ರಾಯರು ಆಗ 'ನ್ಯೂ ಇಂಡಿಯಾ ಇನ್ಸೂರೆನ್ಸ್ ಕಂಪೆನಿ'ಯಲ್ಲಿ ಕೆಲಸದಲ್ಲಿ ದ್ದರು. ಕಾಂಡಿವಿಲಿಯಲ್ಲಿ ವಾಸ. ಅವರ ಮನೆ ನಮ್ಮಂತಹ ನಿರಾಶ್ರಿತರಿಗೆಲ್ಲ ಬಿಡಾರವಾಗಿತ್ತು. ಸಂಜೀವರಾಯರಲ್ಲಿ ನನ್ನ ಯೋಜನೆಯನ್ನು ಮುಂದಿಟ್ಟೆನು. ನನ್ನ ಕರ್ತೃತ್ವ ಶಕ್ತಿಯಲ್ಲಿ ಅವರಿಗೆ ನಂಬುಗೆ ಇದ್ದಿತಾದರೂ, ಈ ಸಾಹಸ ಕೈಗೊಳ್ಳಲು ನನಗೆ ಸಾಧ್ಯವಾಗದೆಂದು ಹೇಳಿದರು. ಈ ಹುಚ್ಚು ಯೋ ಜನೆಯನ್ನು ಬಿಟ್ಟು ಎಲ್ಲಿಯಾದರೂ ಬೊಂಬಾಯಿನಲ್ಲಿ ಕೆಲಸಕ್ಕೆ ಸೇರು ವುದೇ ಒಳ್ಳೆಯದೆಂದು ಅವರು ಅಭಿಪ್ರಾಯ ಪಟ್ಟರು. ಏನೇ ಆದರೂ, ನಾನು ಅಮೇರಿಕೆಗೆ ಹೋಗಲು ತೀರ್ಮಾನಿಸಿರುವುದಾಗಿಯೂ, ಆ ಬಗ್ಗೆ ಏನಾದರೂ ಸಲಹೆ ನೀಡಬೇಕೆಂದೂ ಕೇಳಿದೆನು. ಮೌನವೇ ಅವರ ಉತ್ತರವಾಯಿತು. ಕೊನೆಗೆ, ನನಗೆ ನಾನೇ ಏನಾದರೂ ಉಪಾಯ ಕಂಡು ಹಿಡಿದುಕೊಳ್ಳಬೇಕೆಂದು ತೀರ್ಮಾನಿಸಿದೆನು. ಮೊದಲು ಬೊಂಬಾಯಿ ವಿಶ್ವ ವಿದ್ಯಾನಿಲಯದ ಕಚೇರಿಗೆ ಹೋಗಿ ಪರದೇಶದ ವಿಶ್ವವಿದ್ಯಾನಿಲಯಗಳ ಪರಿಚಯ ಮಾಡಿಕೊಂಡು ಬರಬೇಕೆಂದು ಮರು ದಿನ ಅಲ್ಲಿಗೆ ಹೊರಟೆನು. ನಾನು ವಿಶ್ವವಿದ್ಯಾನಿಲಯದ ಕಚೇರಿಗೆ ಹೋದಾಗ, ಇನ್ನೊಬ್ಬ ಗುಜರಾತಿ ವಿದ್ಯಾರ್ಥಿ ಇವೇ ವಿಷಯದ ಬಗ್ಗೆ ಮಾಹಿತಿ ದೊರಕಿಸಿಕೊಳ್ಳುವ ಸಲುವಾಗಿ ಬಂದಿದ್ದನು. ಆತನಲ್ಲಿ ನನ್ನ ಮನೋಗತವನ್ನು ಹೇಳಿಕೊಂಡೆನು. ಆತ ನನಗೆ ಬೊಂಬಾಯಿಯಲ್ಲಿ, ಪರದೇಶಕ್ಕೆ ವಿದ್ಯಾಭ್ಯಾಸಕ್ಕಾಗಿ ಹೋಗುವ ವಿದ್ಯಾರ್ಥಿಗಳಿಗೆ ಹಣಸಹಾಯ ದೊರಕಿಸಿ ಕೊಡುವ ವಿದ್ಯಾರ್ಥಿನಿಧಿ ಸಂಸ್ಥೆಗಳ ಪಟ್ಟಿಯೊಂದನ್ನು ಕೊಟ್ಟನು. ಅವರಿಂದ ತತ್ಕಾಲಕ್ಕೆ ಆನಂದವಾಯಿತು. ನನಗೆ ಹಣ ಸಹಾಯ ದೊರಕುತ್ತಿತ್ತೋ ಇಲ್ಲವೊ, ಆದರೆ ಪ್ರಯತ್ನ ಮಾಡಲು ದಾರಿಸಿಕ್ಕಿದ್ದು ಸಂತೋಷವಾಯಿತು.

ಮಾರನೆಯ ದಿವಸವೇ ಆ ಐದು ವಿದ್ಯಾರ್ಥಿನಿಧಿ ಸಂಸ್ಥೆಗಳಿಗೂ ಅರ್ಜಿ ಹಾಕಿದೆನು. ಪತ್ರಿಕೋದ್ಯಮದ ಅಭ್ಯಾಸಕ್ಕೆ ನಾನು ಅಮೇರಿಕೆಗೆ ಹೋಗ ಲಿರುವೆನೆಂದೂ, ನನಗೆ ಹಣದ ಸಹಾಯ ಬೇಕೆಂದೂ ನನ್ನ ಅರ್ಜಿಯಲ್ಲಿ ನಮೂದಿಸಿದ್ದೆನು. ಬಿ. ಎ. ಡಿಗ್ರಿಯಲ್ಲಿ ತೇರ್ಗಡೆ ಹೊಂದಿದ್ದೆನು ಅಷ್ಟೆ. ವಿದ್ಯೆ ಯಲ್ಲಿ ಅಷ್ಟೊಂದು ಪ್ರತಿಭೆಯನ್ನು ತೋರಿಸದಿದ್ದರೂ ಮಡ್ಡಿಯಂತೂ ಆಗಿರ

ಲಿಲ್ಲ. ನಾಲ್ಕಾರು ದಿನಗಳಲ್ಲಿ ಐದು ಸಂಸ್ಥೆಗಳಿಂದಲೂ ಉತ್ತರ ಬಂತು. ಮೂವರು, ಪತ್ರಿಕೋದ್ಯಮದ ಅಭ್ಯಾಸಕ್ಕೆ ಹಣ ಸಹಾಯಮಾಡುವುದಿಲ್ಲ ವಾಗಿ ಬರೆದರು. ಇನ್ನಿಬ್ಬರು, ನಾನು ಅಷ್ಟೇನೂ ಪ್ರತಿಭಾವಂತನಲ್ಲವೆಂದೂ, ನಾನು ಬಿ. ಎ. ಡಿಗ್ರಿಯಲ್ಲಿ ಮೂರನೆಯ ತರಗತಿಯಲ್ಲಿ ಉತ್ತೀರ್ಣನಾಗಿದ್ದು ದರಿಂದ ನನಗೆ ಆ ವಿದ್ಯಾರ್ಥಿವೇತನಗಳು ದೊರಕಲಾರವೆಂದೂ ಸ್ಪಷ್ಟವಾಗಿ ಬರೆದಿದ್ದರು. ಸಂಜೀವರಾಯರಿಗೆ ಈ ವಿಷಯ ಹೇಳಿದ ಮೇಲೆ ಅವರಿಗೆ ನನ್ನ ಹುಚ್ಚುತನದ ಬಗ್ಗೆ ಇನ್ನೂ ನಿಖರವಾಯಿತು. ಖಂಡಿತವಾಗಿಯೂ ನಾನು ಈ ಯೋಚನೆಯನ್ನು ಬಿಟ್ಟುಬಿಡಬೇಕೆಂದು ತಿಳಿಸಿದರು. ನನಗದು ಸಾಧ್ಯವೇ ಇರಲಿಲ್ಲ. ವಿದ್ಯಾರ್ಥಿವೇತನಸಂಸ್ಥೆಗಳಿಂದ ಬಂದ ಉತ್ತರಗಳೂ ನನ್ನನ್ನು ಕೆಣಕಿಸಿದ್ದುವು. ಬೊಂಬಾಯಿಯಲ್ಲಿ ಪ್ರಯತ್ನಗಳು ಪ್ರಾರಂಭವಾಯಿತು. ಜಯ ಸಿಕ್ಕಲಿಲ್ಲ. ಒಂದು ತಿಂಗಳು ಬೊಂಬಾಯಿಯಲ್ಲಿ ಕಾಲ ಕಳೆದೆನು. ಯೋಜನೆಗಳ ಮೇಲೆ ಯೋಜನೆಗಳನ್ನು ಹಾಕುತ್ತಾ, ಕೊನೆಗೊಂದು ದಿನ ಸಂಜೀವರಾಯರಿಗೆ ಸಲಾಮು ಹೊಡೆದು, ಸಂಜೆ ನಡೆದುಬಿಟ್ಟೆ ಮೈಸೂರಿಗೆ.

ಮರಳಿ ಮೈಸೂರಿಗೆ ಬಂದಾಗ ಎಪ್ರಿಲ್ ತಿಂಗಳು. ದಾರಿಯಲ್ಲಿ ಬೀರೂರಿನಲ್ಲಿ ನಮ್ಮಣ್ಣ ಸಿಕ್ಕಿ ನನ್ನನ್ನು ಚೆನ್ನಾಗಿ ತರಾಟೆಗೆ ತೆಗೆದುಕೊಂಡರು. ನನ್ನ ಅಲೆದಾಟಕ್ಕೆ ಛೀಮಾರಿ ಹಾಕಿದರು. ನಾನು ಅದಾವುದನ್ನೂ ಲೆಕ್ಕಿಸಲೇ ಇಲ್ಲ. ನನ್ನ ಧ್ಯೇಯಸಾಧನೆಯೇ ನನ್ನ ಮುಖ್ಯ ಗುರಿಯಾಗಿತ್ತು.

ಮೈಸೂರಲ್ಲಿ ಒಂದು ದಿನ ರಾತ್ರಿ ಒಂದು ಕನಸು ಕಂಡೆ. ಅದು ತಿರುಕನ ಕನಸಿನಂತಿತ್ತು. ಆ ಕನಸು ಹೀಗಿತ್ತು:— ನನಗೀಗ ೫೦೦೦ ರೂಪಾಯಿ ಬೇಕು. ಈ ಹಣವನ್ನು ನಾನು ಪುಸ್ತಕಗಳನ್ನು ಬರೆದು ಮಾರಿ ಸಂಪಾದಿಸಬೇಕು. ರಾಷ್ಟ್ರಪುರುಷರ ಹತ್ತು ಜೀವನಚರಿತ್ರೆ ಬರೆಯಬೇಕು. ಒಂದೊಂದು ಹೊತ್ತಿಗೆಗೆ ಎಂಟಾಣೆ ಬೆಲೆಯಿಡಬೇಕು. ಪ್ರತಿಯೊಂದು ಪುಸ್ತಕದ ೧೨೦೦ ಪ್ರತಿ ಹೊರಡಿಸಬೇಕು. ಇದರಿಂದ ನನಗೆ

ಒಟ್ಟು ೬೦೦೦ ರೂಪಾಯಿ ಬರುತ್ತದೆ. ಒಂದು ಸಾವಿರ ರೂಪಾಯಿ ಖರ್ಚು ಹೋಗಲಾಗಿ ೫೦೦೦ ರೂಪಾಯಿ ಉಳಿಯುತ್ತದೆ. ಈ ಪುಸ್ತಕಗಳನ್ನು ಹೇಗೆ ಮಾರಾಟ ಮಾಡಬೇಕು. ಮೈಸೂರು ಸಂಸ್ಥಾನದಲ್ಲಿ ೬೦ ತಾಲ್ಲೂಕುಗಳಿವೆ. ಪ್ರತಿಯೊಂದು ತಾಲ್ಲೂಕಿನಲ್ಲೂ ೧೫೦ ರೂಪಾಯಿನ ಪುಸ್ತಕಗಳನ್ನು ಮಾರಬೇಕು. ಅಂದರೆ ಹತ್ತು ಪುಸ್ತಕಗಳ ಒಂದು ಸೆಟ್ಟಿಗೆ ೫ ರೂಪಾಯಿ. ಕೇವಲ ಮೂವತ್ತು ಜನರನ್ನು ಭೇಟಿ ಮಾಡಿದರೆ ನನ್ನ ಕೆಲಸ ಮುಗಿಯುವುದು. ಈ ರೀತಿ ಮೂರು ನಾಲ್ಕು ತಿಂಗಳಲ್ಲಿ ನನ್ನ ಆಸೆ ನೆರವೇರಿಸಿಕೊಳ್ಳಬಹುದೆಂದು, ಕನಸು ಕಂಡೆ.

ಈ ಕನಸು ಕಾರ್ಯಕ್ರಮವಾಗುವುದು ಬಹಳ ಕಷ್ಟವಿತ್ತು. ಮೊದಲಿಗೇ ಪುಸ್ತಕಗಳನ್ನು ಅಚ್ಚು ಹಾಕಿಸಲು ಕನಿಷ್ಠವೆಂದರೂ ೫೦೦ ರೂಪಾಯಿಗಳು ಬೇಕಾಗಿದ್ದುವು. ಇಲ್ಲಿಯೂ ನನ್ನ ಸ್ನೇಹಿತರು ಅಭಯಹಸ್ತ ನೀಡಿದರು.

ನನ್ನ ತಿರುಕನ ಕನಸನ್ನು ನನ್ನ ಗೆಳೆಯರಾದ **ಶ್ರೀ ಹಾ. ಶ್ರೀ. ದೊರೆಸ್ವಾಮಿ**ಯವರಿಗೆ ತಿಳಿಸಿದೆ. ಸುಬ್ರಾಯನ ಕೆರೆಯ ಮೈದಾನದಲ್ಲಿ ನಮ್ಮ ಆಪ್ತಾಲೋಚನಸಭೆ ಸೇರಿತ್ತು. ದೊರೆಯವರು ನನ್ನ ಯೋಜನೆ ಕೇಳಿ ನಕ್ಕರು. ಸಾಧ್ಯವಿಲ್ಲದ ಮಾತೆಂದರು. ಅವರು ಆಗ ಸಾಹಿತ್ಯಮಂದಿರದ ಒಡೆಯರಾಗಿದ್ದರು. ಪುಸ್ತಕಗಳನ್ನು ಪ್ರಕಟಣೆ ಮಾಡುವ ಕೆಲಸದಲ್ಲಿ ತೊಡಗಿದ್ದರು. ನನ್ನ ಒಂದು ಪುಸ್ತಕವನ್ನು ಅಚ್ಚುಹಾಕಿಸಿಕೊಡಿ, ಎಂದೆ. ಅದಕ್ಕೆ ತಗಲುವ ಖರ್ಚೆಲ್ಲವೂ ನನ್ನದೇ ಆದರೂ, ಅವರ ಪ್ರಕಟಣೆಯ ಹೆಸರು ಬೇಕಾಗಿತ್ತು. ಆಗಿನ ಕಾಲದಲ್ಲಿ ಯುದ್ಧದ ಸಲುವಾಗಿ ಬಂದ ಕಾಗದದ ಹತೋಟಿ ಇನ್ನೂ ಹೋಗಿರಲಿಲ್ಲ. ನನ್ನ ಯೋಜನೆಗೆ ಅವರು ಬೆಂಬಲ ನೀಡದಿದ್ದರೂ, ನನ್ನ ಒಂದು ಪುಸ್ತಕ ಹಾಕಿಕೊಟ್ಟು ಪುಣ್ಯಕಟ್ಟಿಕೊಂಡರು.

ಅಂತೆಯೇ ನನ್ನ ಗೆಳೆಯರಾದ ಉಷಾ ಮುದ್ರಣಾಲಯದ **ಶ್ರೀ ರಾಘವೇಂದ್ರ ಹಬ್ಬು**ಅವರೂ ಮತ್ತು ಸಂಪತ್ಕುಮಾರ ಪ್ರೆಸ್‌ನ **ಶ್ರೀ ಟಿ. ನಾರಾಯಣ**ರವರೂ, **ಶ್ರೀ ಎಂ. ವಿ. ಜಂಬುನಾಥ**ರವರೂ ನನ್ನ ಉಳಿದ ಪುಸ್ತಕಗಳನ್ನು ಅಚ್ಚುಹಾಕಿಕೊಟ್ಟು ಉಪಕಾರಮಾಡಿದರು. ಅಂತೂ ಜುಲೈ

ತಿಂಗಳ ವೇಳೆಗೆ ನನ್ನ ಹತ್ತು ಪುಸ್ತಕಗಳೂ ತಯಾರಾಗಿದ್ದುವು. ನನ್ನ ಯೋಜನೆಯ ಮೊದಲನೆಯ ಹಂತ ಮುಗಿದಂತಾಗಿತ್ತು. ಇನ್ನು ಅವುಗಳನ್ನು ಮಾರಾಟಮಾಡುವುದು. ಒಂದು ಸೂಟ್‌ಕೇಸಿನಲ್ಲಿ ಪುಸ್ತಕಗಳನ್ನು ಇಟ್ಟುಕೊಂಡು ನನ್ನ ಕನಸಿನ ಕಾರ್ಯಕ್ರಮದಂತೆ ಊರಿಂದ ಊರಿಗೆ ತಿರುಗಾಡಲು ಪ್ರಾರಂಭಿಸಿದೆನು. ಮೊದಲು ಮೈಸೂರು ಜಿಲ್ಲೆಯಲ್ಲಿನ ಚಾಮರಾಜನಗರಕ್ಕೆ ಹೋದೆನು. ಅಲ್ಲಿ ನನ್ನ ಗೆಳೆಯರನೇಕರಿದ್ದರು. ಮನೆಮನೆ ತಿರುಗಿ ೩೦೦ ರೂಪಾಯಿಗಳ ಪುಸ್ತಕಗಳನ್ನು ಮಾರಿದೆನು. ನನಗಂತೂ ತುಂಬಾ ಸಂತೋಷವಾಯಿತು. ಚಾಮರಾಜನಗರದಲ್ಲಿ ಸಿಕ್ಕಿದ ಸ್ಫೂರ್ತಿ ನನ್ನನ್ನು ನಂಜನಗೂಡಿಗೆ ಕರೆತಂದಿತು. ಅಲ್ಲಿಯೂ ೨೦೦ ರೂಪಾಯಿ ಪುಸ್ತಕಗಳು ಮಾರಾಟವಾದುವು. ಹೀಗೆಯೇ ಟಿ. ನರಸೀಪುರ, ಕೃಷ್ಣರಾಜಸಾಗರ, ಸಿರಿಯಾಪಟ್ಣ, ಶ್ರೀರಂಗಪಟ್ಣಗಳನ್ನು ಸುತ್ತಿ ಸುಮಾರು ಒಂದೂವರೆಸಾವಿರ ರೂಪಾಯಿಗಳನ್ನು ೨೦ ದಿನಗಳಲ್ಲಿ ಸಂಪಾದಿಸಿದೆನು. ನನ್ನ ಆನಂದಕ್ಕೆ ಪಾರವೇ ಇರಲಿಲ್ಲ. ನನ್ನ ಜೀವನದಲ್ಲಿ ಅಷ್ಟು ಹಣ ನಾ ಕಂಡೇ ಇರಲಿಲ್ಲ. ೨೦ ದಿನಗಳಪ್ರವಾಸ ನನ್ನ ದೇಹವನ್ನು ಜರ್ಝರಿತವನ್ನಾಗಿ ಮಾಡಿತು. ತುಂಬಾ ಆಯಾಸಗೊಂಡಿದ್ದೆನು. ಮುಂದಿನ ಜಿಲ್ಲೆಗೆ ಹೋಗುವ ಉತ್ಸಾಹವಿದ್ದರೂ ತ್ರಾಣವಿದ್ದಂತೆ ಕಾಣಲಿಲ್ಲ. ಈ ಮಧ್ಯೆ ನನ್ನ ಚಿಕ್ಕ ಪುಸ್ತಕಗಳ ಬಗ್ಗೆ ವೃತ್ತಪತ್ರಿಕೆಗಳಲ್ಲಿ ಒಳ್ಳೆಯ ವಿಮರ್ಶೆಗಳೂ ಬಂದುವು. ಆಗ ದೇಶದಲ್ಲಿ ರಾಷ್ಟ್ರೀಯ ಮನೋಭಾವನೆ ಉಚ್ಛ್ರಾಯಸ್ಥಿತಿಯಲ್ಲಿತ್ತು. ಜನರು ರಾಷ್ಟ್ರಪುರುಷರ ಜೀವನ ಚರಿತ್ರೆಗಳನ್ನು ಓದಲು ಉತ್ಸುಕತೆ ತೋರಿಸುತ್ತಿದ್ದರು. ೨೦ ದಿನಗಳ ಅಲೆದಾಟದಲ್ಲಿ ಬಂದ ೧೫೦೦ ರೂಪಾಯಿನಲ್ಲಿ ಅಚ್ಚುಹಾಕಿಸುವುದಕ್ಕೆ ಮತ್ತು ಕಾಗದಕ್ಕೆ ತಗಲಿದ ವೆಚ್ಚವನ್ನು ಕೊಟ್ಟು, ಉಳಿದ ಹಣವನ್ನು ನನ್ನ ಅಮೇರಿಕೆಯ ಪ್ರವಾಸದ ಮೊದಲ ನಿಧಿಯನ್ನಾಗಿ ಮಾಡಿಕೊಂಡು ಬೊಂಬಾಯಿನಲ್ಲಿರುವ ಮೈಸೂರು ಬ್ಯಾಂಕಿನಲ್ಲಿ ಶೇಖರಿಸಿಟ್ಟೆನು. ನನಗೆ ಮೈಯಲ್ಲಿ ಸ್ವಲ್ಪ ದೇಹಾಲಸ್ಯ ತಲೆದೋರಿದ್ದರಿಂದ ನನ್ನ ಮುಂದಿನ ಜಿಲ್ಲೆಯ ಅಲೆದಾಟವನ್ನು ಸದ್ಯಕ್ಕೆ ನಿಲ್ಲಿಸಿದೆನು. ಆ ಸಮಯಕ್ಕೆ ಸರಿಯಾಗಿ ಬೆಂಗಳೂರಿನ ಸತ್ಯಶೋಧನ ಪುಸ್ತಕ ಭಂಡಾರದ **ಶ್ರೀ ನಿಟ್ಟೂರು ಶ್ರೀನಿವಾಸರಾಯರು** ನನ

ಗೊಂದು ಕಾಗದವನ್ನು ಬರೆದು ತಮ್ಮನ್ನು ನೋಡಬೇಕೆಂದು ಸೂಚಿಸಿದ್ದರು. ಬೆಂಗಳೂರಿಗೆ ಬಂದು ಅವರನ್ನು ಕಂಡೆ. ನನ್ನ ಪುಸ್ತಕಗಳ ಬಗ್ಗೆ ಮಾತು ಬಂದಿತು. ಉಳಿದ ಎಲ್ಲಾ ಪುಸ್ತಕಗಳನ್ನೂ ಅವರಿಗೆ ವಿಕ್ರಯಿಸಿ, ಅವರಿಂದ ೬೦೦ ರೂಪಾಯಿಗಳನ್ನು ಮುಂಗಡವಾಗಿ ತೆಗೆದುಕೊಂಡು ಮುಂದಿನ ಆಲೋಚನೆಯನ್ನು ಮಾಡತೊಡಗಿದೆನು. ನನ್ನಲ್ಲಿ ಆಗ ಖರ್ಚುಕಳೆದು ೧೫೦೦ ರೂಪಾಯಿಗಳು ಇದ್ದುವು. ನನ್ನ ಆಗಿನ ಲೆಖ್ಖದ ಪ್ರಕಾರ ಇನ್ನೂ ೩೫೦೦ ರೂಪಾಯಿಗಳು ಬೇಕಾಗಿದ್ದುವು. ಏನೂ ಬಗೆಹರಿಯದೆ ಪುನಃ ಬೊಂಬಾಯಿಗೆ ತೆರಳಿದೆನು.

ಸಂಜೀವರಾಯರಿಗೆ ನನ್ನ ೨೦ ದಿನದ ಸಂಪಾದನೆ ತಿಳಿಸಿದಾಗ ಅವರು ತುಂಬಾ ಹರ್ಷಪಟ್ಟರು. ಆಗ ನನ್ನ ಉದ್ಯಮಕ್ಕೆ ಹಾರ್ದಿಕ ಬೆಂಬಲ ವಿತ್ತರು. ಮುಂದಿನ ಕಾರ್ಯಕ್ರಮದ ಬಗ್ಗೆ ಇಬ್ಬರೂ ಚರ್ಚಿಸಿದೆವು. ಬೊಂಬಾಯಿನಲ್ಲಿರುವ ಕನ್ನಡದ ಶ್ರೀಮಂತರನ್ನು ವಿದ್ಯಾಭಿಕ್ಷೆ ಬೇಡಬೇಕೆಂತಲೂ, ಪುನಃ ವಿದ್ಯಾರ್ಥಿವೇತನಕ್ಕಾಗಿ ಪ್ರಯತ್ನಪಡಬೇಕೆಂತಲೂ ತೀರ್ಮಾನವಾಯಿತು. ಯಾವ ಎರಡು ಸಂಸ್ಥೆಗಳು ನನ್ನ ಅರ್ಜಿಯನ್ನು ತಿರಸ್ಕರಿಸಿದ್ದುವೋ ಆ ಸಂಸ್ಥೆಗಳ ಅಧ್ಯಕ್ಷರುಗಳನ್ನು ಪುನಃ ಕಂಡು, "ನೋಡಿ, ೨೦ ದಿನಗಳಲ್ಲಿ ೧೫೦೦ ರೂಪಾಯಿ, ಪುಸ್ತಕ ಬರೆದು, ಅಚ್ಚು ಹಾಕಿಸಿ, ನಾನೇ ಮಾರಿ ಸಂಪಾದಿಸಿದ್ದೇನೆ. ಬಿ. ಎ. ಡಿಗ್ರಿ ಪರೀಕ್ಷೆಯಲ್ಲಿ ಮೂರನೆಯ ತರಗತಿಯಲ್ಲಿ ಉತ್ತೀರ್ಣನಾದರೂ, ನನಗೆ ಓದುವ ಮತ್ತು ನನ್ನ ಧ್ಯೇಯ ಸಾಧಿಸುವ ಛಲ ಇವೆ. ಧೈರ್ಯ ಇದೆ. ಈಗಲಾದರೂ ನಿಮ್ಮ ಸಂಸ್ಥೆಯಿಂದ ಸಹಾಯಮಾಡಿ" ಎಂದು ಕೇಳಿಕೊಂಡೆನು. ಅವರು ನನ್ನ ಪ್ರಾರ್ಥನೆಯನ್ನು ಪರಿಶೀಲಿಸುವುದಾಗಿ ಹೇಳಿದರು. **ಶ್ರೀ ಅಮೃತಲಾಲ್ ಸೇಟ್ ವಿದ್ಯಾರ್ಥಿವೇತನ ಸಮಿತಿ" "ಶ್ರೀ ವಾಡಿಯಾ ವಿದ್ಯಾರ್ಥಿವೇತನ ಸಮಿತಿ"** ಇವೇ ಆ ಎರಡು ಸಂಸ್ಥೆಗಳು.

ವಿದ್ಯಾರ್ಜನೆಗಾಗಿ ಭಿಕ್ಷೆಬೇಡಬೇಕೆಂದು ತೀರ್ಮಾನಿಸಿದ್ದರಿಂದ ಮರುದಿನವೇ ನಾನು ಭಿಕ್ಷಾಪಾತ್ರೆಯನ್ನು ಹಿಡಿದು ಹೊರಟೆನು. ಮೊದಲು

ನಾ ಭೇಟಿಯಾದದ್ದು **ಶ್ರೀ ಬಿ. ಎಂ. ಶ್ರೀನಿವಾಸಯ್ಯ**ನವರನ್ನು. ಬೊಂಬಾಯಿಯಲ್ಲಿರುವ ಸುಪ್ರಸಿದ್ಧ ವ್ಯಾಪಾರಿಗಳು. ಸಯಾನ್‌ನಲ್ಲಿ ಸಾಬೂನಿನ ಕಾರ್ಖಾನೆ ಯೊಂದನ್ನಿಟ್ಟಿದ್ದಾರೆ. ಅವರು ತಕ್ಷಣವೇ ೨೦೦ ರೂಪಾಯಿಗಳನ್ನು ಕೊಟ್ಟರು. ಅಲ್ಲಿಂದ ಅದಾಯತೆರಿಗೆ ಕಚೇರಿಯಲ್ಲಿದ್ದ **ಶ್ರೀ ಆರ್. ಜೆ. ದೇಶಪಾಂಡೆ**ಯವರನ್ನು ಕಂಡೆ. ಅವರು ೧೦೦ ರೂಪಾಯಿಗಳನ್ನು ಅನುಗ್ರಹಿಸಿದರು. ಕೆಲವೊಂದು ಕಡೆ ಹೋದಾಗ, ನಿರಾಸೆಯೂ ಆಯಿತು. ಅಷ್ಟೊತ್ತಿಗಾಗಲೇ ಒಂದು ತಿಂಗಳು ಬೊಂಬಾಯಿಯಲ್ಲಿ ಕಳೆದಿದ್ದೆ. ಅಕ್ಟೋಬರ್ ೨ನೇ ತಾರೀಖು ಶ್ರೀ ಅಮೃತಲಾಲ್ ಸೇಟ್‌ರಿಂದ ಕಾಗದವೊಂದು ಬಂದಿತು. ತಮ್ಮನ್ನು ಕಾಣಬೇಕೆಂದು ಬರೆದಿದ್ದರು, ಅಂದು ಗಾಂಧೀಜಿಯ ಹುಟ್ಟಿದ ಹಬ್ಬ, ಶುಭ ಸೂಚನೆ ಎಂದುಕೊಂಡೆ. ಶ್ರೀ ಅಮೃತಲಾಲ್ ಸೇಟ್‌ಜಿಯವರು ತುಂಬಾ ಆದರದಿಂದ ನನ್ನನ್ನು ಬರಮಾಡಿಕೊಂಡು ನನ್ನ ಪುಸ್ತಕ ಸಾಹಸವನ್ನು ಮೆಚ್ಚಿದರು. ವಿದ್ಯಾರ್ಥಿವೇತನ ಸಂಸ್ಥೆಯವರು ನನಗೆ ೧೭೦೦ ರೂಪಾಯಿ (ಬೊಂಬಾಯಿನಿಂದ ನ್ಯೂಯಾರ್ಕ್‌ಗೆ ಹೋಗುವವರೆಗಿನ ಎರಡನೆ ತರಗತಿಯ ಹಡಗಿನ ಚಾರ್ಜು) ಗಳನ್ನು ಕೊಡಲು ನಿರ್ಧರಿಸಿರುವುದಾಗಿ ತಿಳಿಸಿ ನನ್ನ ಕೈಲಿ ಅಷ್ಟು ರೂಪಾಯಿಗಳಿಗೆ ಚೆಕ್ಕು ಕೊಟ್ಟರು. ಕೃತಜ್ಞತೆಯಿಂದ ಅದನ್ನು ಸ್ವೀಕರಿಸಿ ಶ್ರೀ ಅಮೃತಲಾಲ್‌ರಿಗೆ ನಮಸ್ಕಾರ ಹಾಕಿ ಅಲ್ಲಿಂದ ಕಾಂಡಿವಿಲಿಗೆ ಮನೆಗೆ ಬಂದು ಸಂಜೀವನಿಗೆ ಸಂತೋಷದ ಸುದ್ದಿ ತಿಳಿಸಿದೆ. ಸಂಜೀವರಾಯರು ಆನಂದಭರಿತರಾದರು. ಈ ವಿದ್ಯಾರ್ಥಿವೇತನ ಬರಲು ಸಹಾಯ ಮಾಡಿದ ಇನ್ನೊಬ್ಬ ಮಹನೀಯರನ್ನು ನಾನು ಇಲ್ಲಿ ನೆನಪು ಮಾಡಿಕೊಳ್ಳಬೇಕು. ಅವರೇ ಬೆಳಗಾವಿಯ ಕಾಂಗ್ರೆಸ್ ನಾಯಕರಾದ **ಶ್ರೀ ಕೇಶವರಾವ್ ಗೋಖಲೆ**ಯವರು. ನನ್ನ ಬಗ್ಗೆ ಶ್ರೀ ಸೇಟ್‌ರಿಗೆ ಶ್ರೀ ಕೇಶವರಾಯರು ಒಂದು ಕಾಗದ ಕೊಟ್ಟಿದ್ದರು. ಆ ಕಾಗದವೂ ನನಗೆ ಸಹಾಯಮಾಡಿತು.

ಈ ಸಂತೋಷದ ಸುದ್ದಿಯನ್ನು ಬೊಂಬಾಯಿನ **ಕಾಮರ್ಸ್** ಪತ್ರಿಕೆಯ ಸಂಪಾದಕರಾದ **ಶ್ರೀ ಆರ್. ವೆಂಕಟೇಶಮೂರ್ತಿ**ಯವರಿಗೆ ತಿಳಿಸಿದೆ.

ಅವರು ವಾಡಿಯ ವಿದ್ಯಾರ್ಥಿ ವೇತನಕ್ಕೂ ಏಕೆ ಪ್ರಯತ್ನ ಮಾಡಬ ರದು, ಎಂದರು. ಕೂಡಲೇ **" ಬಾಂಬೆ ಕ್ರಾನಿಕಲ್ "** ಪತ್ರಿಕೆಯ ಉಪ ಸಂಪಾದಕರಾದ **ಶ್ರೀ ಪ್ರಭು** ಅವರನ್ನು ಕಂಡು ಈ ಬಗ್ಗೆ ಸಹಾಯ ಮಾಡಲು ಕೇಳಿಕೊಂಡೆ. ಅವರು ನನ್ನ ಈ ಸಾಹಸವನ್ನು ಮೆಚ್ಚಿ, ಬೊಂಬಾಯಿನಲ್ಲಿರುವ ತಾತಾ ಸ್ಕೂಲ್ ಆಫ್ ಸೋಷಿಯಲ್ ವರ್ಕ್ (Tata School of Sccial Work)ನ ಸಂಚಾಲಕರಾದ **ಶ್ರೀ ಜೆ. ಎಂ. ಕುಮಾರಪ್ಪ**ನವರಿಗೆ ಒಂದು ಕಾಗದ ಕೊಟ್ಟರು. ನಾಗಪಾದದಲ್ಲಿರುವ ಶ್ರೀ ಕುಮಾರಪ್ಪನವರನ್ನು ನೋಡಿ ಅವರಿಂದ ವಾಡಿಯಾ ವಿದ್ಯಾರ್ಥಿ ವೇತನದ ಅಧ್ಯಕ್ಷರಾದ **ಸರ್ ರುಸ್ತುಂ ಮಸಾನಿ**(ಎಂ. ಆರ್. ಮಸಾನಿಯವರ ತಂದೆ) ಯವರನ್ನು ಶ್ರೀ ವೆಂಕಟೇಶ ಮೂರ್ತಿಗಳವರ ಸಹಾಯದಿಂದ ಭೇಟಿಮಾಡಿದೆ. ಸರ್. ರುಸ್ತುಂರು ತಕ್ಷಣವೆ ಆ ವರ್ಷದಲ್ಲಿ ಸಿಲ್ಕಿ ಉಳಿದ ೫೦೦ ರೂಪಾಯಿಗಳನ್ನು ನನಗೆ ದಯಪಾಲಿಸಿದರು. ಅಲ್ಲಿಗೆ ನನ್ನ ಹತ್ತಿರ ೪೦೦೦ ರೂಪಾಯಿಗಳಾದುವು. ಉಳಿದ ಸಾವಿರ ರೂಪಾಯಿಗಳನ್ನು ಹೇಗಾದರೂ ಮಾಡಿ ಮೈಸೂರಿನಲ್ಲಿ ಮಾಡಿಕೊಳ್ಳಬಹುದೆಂದು ಧೈರ್ಯ ತೆಗೆದುಕೊಂಡು ಸಂಜೀವನಿಗೆ ಸಂತೋಷದ ಸಲಾಮು ಹೊಡೆದು ಮೈಸೂರಿಗೆ ಗಾಡಿ ಬಿಟ್ಟೆ. ಇನ್ನೇನು ಅಮೇರಿಕೆಗೆ ಹೋದಂತೆಯೇ ಎಂದು ಭಾವಿಸಿಬಿಟ್ಟೆ. ಆಗ ಸ್ವರ್ಗಕ್ಕೆ ಇನ್ನು ಉಳಿದದ್ದು ಮೂರೇ ಮೆಟ್ಟಲು.

ನಾನು ಮೈಸೂರಿಗೆ ಬರುವ ವೇಳೆಗೆ ಅಮೇರಿಕೆಯ ಸಿರಾಕ್ಯೂಸ್ ವಿಶ್ವವಿದ್ಯಾನಿಲಯದಲ್ಲಿ ' ಪತ್ರಿಕೋದ್ಯಮ ' ಓದಲು ಕಾಲೇಜಿನಲ್ಲಿ ಅಪ್ಪಣೆ ದೊರಕಿತ್ತು. ಜೊತೆಗೆ ೩೦೦ ಡಾಲರಿನ ಒಂದು ವಿದ್ಯಾರ್ಥಿ ವೇತನವನ್ನೂ ಕೊಟ್ಟಿದ್ದರು. ನನ್ನ ಹಣದ ಕೊರತೆ ಎಲ್ಲವೂ ನೀಗಿತು ಎಂದುಕೊಂಡು ಮುಂದಿನ ಪ್ರಯತ್ನವಾದ ಪ್ಯಾಸ್ ಪೋರ್ಟ್, ಅಮೇರಿಕನ್ ವೀಸಾ ಮತ್ತು ಹಡಗನ್ನು ಗೊತ್ತುಮಾಡುವುದು, ಇವುಗಳಲ್ಲಿ ಆಸಕ್ತನಾದೆನು. ಇದೇ ಸಂದರ್ಭದಲ್ಲಿ ಮೈಸೂರು ಪ್ರಿಂಟಿಂಗ್ ಪ್ರೆಸ್‌ನ **ಶ್ರೀ ಜಿ. ಹೆಚ್. ರಾಮರಾಯರ** ಸಹಾಯದಿಂದ ಮೈಸೂರು ಪದವೀಧರರ ಸಹಕಾರಸಂಘದಿಂದ ೫೦೦ ರೂಪಾಯಿ ಸಾಲವೂ ದೊರಕಿತು.

**ಬೊಂಬಾಯಿಯಲ್ಲಿರುವ** ಅಮೇರಿಕನ್ ಎಕ್ಸ್‌ಪ್ರೆಸ್ ಕಂಪೆನಿಗೆ ಕಾಗದ ಬರೆದು, ಹಡಗಿನಲ್ಲಿ ಎರಡನೆಯ ತರಗತಿಯ ಜಾಗವನ್ನು ಅಮೇರಿಕೆಗೆ ಹೋಗಲು ಮೀಸಲಾಗಿಡಬೇಕೆಂದು ಕೇಳಿಕೊಂಡೆನು. ತಕ್ಷಣವೇ ಅಲ್ಲಿಂದ ಉತ್ತರಬಂತು. ಜನವರಿ ೨೬ನೇ ತಾರೀಖು ಹೊರಡುವ **ಮೇರಿನ್ ಆ್ಯಡರ್** ಎಂಬ ಹಡಗಿನಲ್ಲಿ ನನಗೊಂದು ಸ್ಥಳ ಕಾದಿರಿಸಿರುವುದಾಗಿಯೂ, ನಾನುನನ್ನ ರಹದಾರಿ, ಅಮೇರಿಕನ್ ವೀಸಾ, ಡಾಲರ್ ಎಕ್ಸ್‌ಚೇಂಜ್ ಪತ್ರ, ವೈದ್ಯಕೀಯ ಸರ್ಟಿಫಿಕೇಟ್, ಮುಂತಾದುವನ್ನು ಕಳುಹಿಸಿಕೊಡಬೇಕಾಗಿಯೂ ಬರೆದರು.

ರಹದಾರಿ (ಪ್ಯಾಸ್ ಪೋರ್ಟ್) ಬರಲು ಮೈಸೂರು ಸರ್ಕಾರದ ಮೂಲಕ ರೆಸಿಡೆನ್ಸಿಗೆ ಹೋಗಬೇಕಾಗಿತ್ತು. ಆಗಿನ್ನೂ ಬ್ರಿಟಿಷ್ ರೆಸಿಡೆಂಟರು ಇದ್ದರು. ಮೊದಲು ನನ್ನ ಜಿಲ್ಲೆಯ ಮುಖ್ಯಾಧಿಕಾರಿಗಳಿಂದ ಅರ್ಜಿಗೆ 'ಅಸ್ತು' ಅನ್ನಿಸಿಕೊಳ್ಳಬೇಕಾಗಿತ್ತು. ನಾನು ೧೯೪೨ನೆಯ ರಾಜಕೀಯ ಚಳುವಳಿಯಲ್ಲಿ ಭಾಗವಹಿಸಿ ಶಿಕ್ಷೆ ಅನುಭವಿಸಿದ್ದರಿಂದ, ನನಗೆಲ್ಲಿ ಅಧಿಕಾರಿಗಳು ರಹದಾರಿಗೆ ಚಕ್ಕರ್ ಕೊಡುವರೋ ಎಂಬ ಹೆದರಿಕೆ ಇತ್ತು. ಆದರೂ ಶಿವಮೊಗ್ಗೆಯ ಪತ್ರಿಕೋದ್ಯೋಗಿ ಸಂಘದ ಅಧ್ಯಕ್ಷರಾದ **ಶ್ರೀ ಜಿ. ಶ್ರೀನಿವಾಸ ಐಯ್ಯಂಗಾರ್ಯರು** ಮತ್ತು ನಮ್ಮ ಅಣ್ಣನವರ ಮಾವಂದಿರಾದ **ಶ್ರೀ ಎ. ಶ್ರೀನಿವಾಸರಾಯರ** ಸಹಕಾರದಿಂದ, ಆಗಿನ ಜಿಲ್ಲಾಧಿಕಾರಿಗಳಾಗಿದ್ದ **ಶ್ರೀ ಎಲ್. ಎಸ್. ಹಿರಿಯಣ್ಣಯ್ಯನವರು** ನನ್ನ ಅರ್ಜಿಗೆ 'ಅಸ್ತು' ಅಂದರು. ಆ ಅರ್ಜಿ ಮೈಸೂರು ಸರ್ಕಾರಕ್ಕೆ ಬಂದ ಕೆಲವು ದಿನಗಳಲ್ಲಿಯೇ ಯಾವ ತೊಂದರೆಯೂ ಇಲ್ಲದೆ ನನಗೆ ಅಮೇರಿಕೆಗೆ ಹೋಗಲು ರಹದಾರಿ ಸಿಕ್ಕಿತು.

ರಹದಾರಿ ಸಿಕ್ಕಿದ ಕೂಡಲೇ, ಸಿರಾಕ್ಯೂಸ್ ವಿಶ್ವವಿದ್ಯಾನಿಲಯದಿಂದ ಬಂದ ಅಪ್ಪಣೆ ಚೀಟಿಯೊಂದಿಗೆ ರಿಸರ್ವ್ ಬ್ಯಾಂಕಿಗೆ, ಡಾಲರ್ ಎಕ್ಸ್‌ಚೇಂಜ್‌ಗೆ ಅರ್ಜಿಹಾಕಿದೆನು. ಅದು ಸ್ವೀಕೃತವಾಗಿ, ನನಗೆ ಡಾಲರ್ ಎಕ್ಸ್‌ಚೇಂಜ್ ಕೂಡ ಏನೂ ತೊಂದರೆಯಿಲ್ಲದೆ ದೊರಕಿತು. ಇನ್ನು ನನಗೆ ಬೇಕಾದದ್ದು ಅಮೇರಿಕನ್ ವೀಸಾ ಒಂದೇ. ಅಲ್ಲೇ ಬಂತು ಪಿಕಲಾಟ. ಈ ವೀಸಾ ದೊರಕುವುದೇ ಒಂದು ದೊಡ್ಡ ರಾದ್ಧಾಂತವಾಯಿತು.

## ಕನಸು-ನನಸು

ಅಮೇರಿಕನ್ ವೀಸಾ ದೊರಕಿಸಲು ಪುನಃ ಬೊಂಬಾಯಿಗೇ ಹೋಗಬೇಕಾಯಿತು. ಅಲ್ಲಿ ಅಮೇರಿಕನ್ ಕಾನ್ಸಲ್ ರವರನ್ನು ಭೇಟಿಮಾಡಿ ನನ್ನಲ್ಲಿದ್ದ ಕಾಗದ ಪತ್ರಗಳನ್ನು ತೋರಿಸಿ, ಅಮೇರಿಕೆಗೆ ಹೋಗಿ ನೆಲಸಲು ಅಮೇರಿಕನ್ ಸರ್ಕಾರದ ರಹದಾರಿ ಬೇಕೆಂದೆನು. ನನ್ನ ವಿದ್ಯಾಭ್ಯಾಸದ ಅವಧಿ ಹತ್ತು ತಿಂಗಳಿತ್ತು. ತಿಂಗಳಿಗೊಂದು ಸಾವಿರದಂತೆ ಹತ್ತು ಸಾವಿರ ರೂಪಾಯಿ ನನ್ನಲ್ಲಿರದ ಹೊರತು ನನಗೆ ರಹದಾರಿ ಸಿಕ್ಕಲಾರದೆಂದು ತಿಳಿಸಿದರು. ಅಮೇರಿಕೆಗೆ ಹೋಗಲು ಇಷ್ಟೇ ಹಣಬೇಕೆಂದು ನನಗೆ ತಿಳಿದಿರಲಿಲ್ಲ. ೫,೦೦೦ ರೂಪಾಯಿ ಇದ್ದರೆ ಸಾಕೆಂದು ತಿಳಿದಿದ್ದೆನು. ಹತ್ತು ಸಾವಿರ ರೂಪಾಯಿ ಎಂದ ಕೂಡಲೇ ನನ್ನ ಎದೆ 'ಧಸಲ್' ಎಂದಿತು. ನನ್ನ ಶಕ್ತಿ, ಪ್ರಭಾವವನ್ನೆಲ್ಲಾ ವ್ಯಯಮಾಡಿ ೫,೦೦೦ ಸಾವಿರ ಮಾಡುವ ಹೊತ್ತಿಗೆ ನಾನು ಸಾಕು ಸಾಕಾಗಿ ಹೋಗಿದ್ದೆನು. ಕೇವಲ ಇನ್ನೆರಡು ತಿಂಗಳಲ್ಲಿ ಉಳಿದಿದ್ದ ಐದು ಸಾವಿರ ರೂಪಾಯಿಯನ್ನು ಹೇಗೆ ಮಾಡುವುದು? ಮನಸ್ಸು ಗೊಂದಲದಲ್ಲಿ ಬಿದ್ದಿತು. ಯಾವ ದಾರಿಯೂ ಹೊಳೆಯಲಿಲ್ಲ. ಈ ಅಮೇರಿಕೆಗೆ ಹೋಗುವ ಪ್ರಯತ್ನವನ್ನೇ ಬಿಟ್ಟು ಬಿಡಬೇಕೆಂದು ಕೂಡ ಆಲೋಚಿಸಿದೆನು. ನಿರಾಶನಾಗಿ ಕಾಂಡಿವಿಲಿಗೆ ಬಂದು ಸಂಜೀವರಾಯರಲ್ಲಿ ನನ್ನ ತೊಂದರೆ ತೋಡಿಕೊಂಡೆನು. ಸಂಜೀವ ನನ್ನನ್ನು ಹುರುಪು ಗೊಳಿಸಿದ. ಧೈರ್ಯಗುಂದಬಾರದೆಂದು ತಿಳಿಸಿದ. ಇನ್ನೆರಡು ತಿಂಗಳಲ್ಲಿ ಹೇಗಾದರೂ ಈ ಐದು ಸಾವಿರ ಮಾಡಿಯೇ ತೀರಬೇಕೆಂದು ಒತ್ತಾಯ ಮಾಡಿದ. ಹೇಗೆ ಸಾಧ್ಯ? ಎಂಬುದು ತಿಳಿಯಲಿಲ್ಲ. ಒಂದೇ, ಎರಡೇ, ೫,೦೦೦ ರೂಪಾಯಿ ಮಾಡಿಯಾಯಿತು. ಪುನಃ ಇನ್ನೈದು ಸಾವಿರ ಹೇಗೆ ತರಲಿ? ಆಗದ ಕೆಲಸವೆಂದಿತು ಮನಸ್ಸು. ಮಾಡಿಯೇ ತೀರಬೇಕೆಂದು ಸಂಕಲ್ಪ. ಈ ಹೊಯ್ದಾಟದಲ್ಲಿ ಮೂರು ದಿನ ಕಳೆದು ಬಡವಾಗಿ ಬಿಟ್ಟೆ. ಇನ್ನು ಈ ಪ್ರಯತ್ನ ಸಾಕೆಂದು ತೀರ್ಮಾನಿಸಿ, ಅವರವರ ಹಣ, ಅವರವರಿಗೆ ತಿರುಗಿ ಕೊಟ್ಟು ಸುಮ್ಮನಿರಬೇಕೆಂದು ಯೋಚಿಸಿ, ಆ ಮುಖದಲ್ಲಿ ಕಾರ್ಯಕ್ರಮ ಕೈಗೊಳ್ಳಬೇಕೆಂದು ಅಂದುಕೊಂಡೆ.

ನನಗೆ ಸ್ಫೂರ್ತಿಕೊಡಬೇಕೆಂದೋ ಏನೋ, ಅರಸೀಕೆರೆಯ ಕಾಂಗ್ರೆಸ್ ನಾಯಕರಾದ ಶ್ರೀ. **ಡಿ. ವಿ. ರಾಮಸ್ವಾಮಿ**ಯವರು ಒಂದು ಕಾಗದ ಬರೆದು

ತಾವು ಒಂದು ಸಹಸ್ರ ರೂಪಾಯಿ ಕೊಡುವುದಾಗಿಯೂ, ತಮ್ಮನ್ನು ಬಂದು **ಕಾಣಬೇಕೆಂದೂ** ಕೇಳಿಕೊಂಡ ಕಾಗದ ಬೊಂಬಾಯಿಗೆ ಬಂತು. ಮುರಿದ ರೆಕ್ಕೆ ಪುನಃ ಚಿಗುರಿದುವು. ಶ್ರೀ ರಾಮಸ್ವಾಮಿಯವರಿಗೆ ನಾನೇನೂ ಹಳಬ ನಾಗಿರಲಿಲ್ಲ. ಆಗಸ್ಟ್ ಚಳುವಳಿಯ ಕಾಲಕ್ಕೆ ಅವರೂ ನಾವೂ ಜೊತೆಯಲ್ಲಿ ಮೈಸೂರಿನ **ಸೆರೆಮನೆ**ಯಲ್ಲಿ ರಾಜರ ಅತಿಥಿಗಳಾಗಿದ್ದೆವು. ಈಗ **ನ್ಯಾಷನಲ್ ಸ್ಟ್ಯಾಂಡರ್ಡ್** ಪತ್ರಿಕೆಯ ಸುದ್ದಿವಿಭಾಗದ ಸಂಪಾದಕರಾದ ಶ್ರೀ. **ಹೆಚ್. ವೈ. ಶಾರದಾಪ್ರಸಾದ್**(ಆಗಿನ ವಿದ್ಯಾರ್ಥಿ ಮುಖಂಡರು)ಮತ್ತು ನನ್ನನ್ನು ಕಂಡರೆ ಅವರಿಗೆ ತುಂಬ ಅಭಿಮಾನವಿತ್ತು. ಆ ಅಭಿಮಾನ ನನಗೆ ಅವರು ಸಹಾಯಮಾಡುವಂತಾಯಿತು.

ಬೊಂಬಾಯಿನಿಂದ ಓಡಿದೆ ಅರಸೀಕೆರೆಗೆ. ಶ್ರೀ. ರಾಮಸ್ವಾಮಿ ಯವರು ಊರಿನಲ್ಲಿಯೇ ಇದ್ದರು. ನನ್ನನ್ನು ಬರಮಾಡಿಕೊಂಡು ನನ್ನ ಅಲೆ ದಾಟವನ್ನೆಲ್ಲಾ ಕೇಳಿದರು. ಒಳ್ಳೆಯ ಊಟಹಾಕಿಸಿದರು. ಆ ರಾತ್ರಿ ನಾಲ್ಕುದಿನದಿಂದ ಬಾರದ ನಿದ್ರೆ ಬಂದಿತು. ಮರುದಿನ ಬೆಳಿಗ್ಗೆ ೧೦೦೦ ರೂಪಾಯಿ ಕೈಯಲ್ಲಿ ಕೊಟ್ಟು ಆಶೀರ್ವದಿಸಿ ಕಳುಹಿಸಿಕೊಟ್ಟರು. ನನ್ನ ಭಾರ ೪೦೦೦ ಸಾವಿರ ರೂಪಾಯಿಗಳಿಗಿಳಿಯಿತು.

ಬೆಂಗಳೂರಿಗೆ ಬಂದೆ. ಇಲ್ಲಿ ಯಾರನ್ನೂ ಇನ್ನೂ ಕೇಳಿರಲಿಲ್ಲ. ಕೇಳುವ ಅವಶ್ಯಕತೆ ಇರಲಿಲ್ಲ. ಈಗ ಕೇಳದೇ ವಿಧಿ ಇರಲಿಲ್ಲ. **ಅಣ್ಣ ಕೃಷ್ಣಶರ್ಮ**ರನ್ನು ಮರೆಹೊಕ್ಕೆ. ಅವರು ನನ್ನ ಸಾಹಸವನ್ನು ನೋಡಿ ಮೆಚ್ಚಿ ತಾವು ತಮ್ಮ ಕೈಲಾದ ಸಹಾಯಮಾಡಿಸುತ್ತೇನೆಂದರು. ಆಗ ನವೆಂಬರ್ ತಿಂಗಳು. ಬೆಂಗಳೂರಿನಲ್ಲಿ ಸುಭಾಷ್ ನಗರದಲ್ಲಿ ಮೈಸೂರು ಕಾಂಗ್ರೆಸ್ಸಿನ ಏಳನೆಯ ಅಧಿವೇಶನ, **ಶ್ರೀ ಕೆ. ಚೆಂಗಲರಾಯರೆಡ್ಡಿ**ಯವರ ಅಧ್ಯಕ್ಷತೆಯಲ್ಲಿ ನಡೆಯುವದಿತ್ತು. ಅದಕ್ಕಾಗಿ ಎಲ್ಲ ಶ್ರೀಮಂತರೂ, ಬಡವರೂ ಹಣ ಕೊಟ್ಟಿದ್ದರು. ಅದೇ ಸಮಯದಲ್ಲಿಯೇ ನನ್ನ ಕೈಂಕರ್ಯವೂ ಆಗಬೇಕಾಗಿತ್ತು. ಯಾರನ್ನು ಕೇಳಿದರೂ ಸದ್ಯದಲ್ಲಿ ಏನೂ ಆಗುವುದಿಲ್ಲವೆಂದು ಹೇಳುತ್ತಿದ್ದರು.

ಒಂದು ದಿನ ಬೆಳಿಗ್ಗೆ ಆಯಾಸದಿಂದ ದೊಡ್ಡಣ್ಣ ಮಾರ್ಕೆಟ್ಟಿನ ಚೌಕದಲ್ಲಿ ಹೋಗುತ್ತಿದ್ದೆನು. ಮುಂದೇನು ಮಾಡಬೇಕೆಂಬುದೇ ಹೊಳೆ ದಿರಲಿಲ್ಲ. ದೂರದಿಂದ ಯಾರೋ ಒಬ್ಬರು, "ಕೃಷ್ಣಮೂರ್ತಿಗಳೇ, ಇಲ್ಲಿ ಬನ್ನಿ" ಎಂದು ಕರೆದರು. ನನಗಾಶ್ಚರ್ಯವಾಯಿತು "ನೀವೇನೋ ಅಮೇರಿಕಕ್ಕೆ ಪತ್ರಿಕೋದ್ಯಮ ಓದಲು ಹೋಗುವವರು," ಎಂದು ಪ್ರಶ್ನಿಸಿ ದರು. ಹೌದು, ಎಂದೆ. ಮರುದಿನ ಬೆಳಿಗ್ಗೆ ತಮ್ಮ ಮನೆಗೆ ಬರಬೇ ಕೆಂದೂ, ತಾವು ಒಂದು ಸಹಾಯಮಾಡುವುದಾಗಿಯೂ ತಿಳಿಸಿದರು. ನನಗೆ ತುಂಬಾ ಆನಂದವಾಯಿತು. ನಡುರಸ್ತೆಯಲ್ಲಿ ನಿಲ್ಲಿಸಿ ನನ್ನನ್ನು ಮಾತನಾಡಿಸಿದವರು, **ವೀರಕೇಸರಿ ಸೀತಾರಾಮಶಾಸ್ತ್ರಿ**ಗಳು.

ಮರುದಿನ ಬೆಳಿಗ್ಗೆ ಶಂಕರಪುರದ ಅವರ ಮನೆಗೆ ಹೋದೆನು. ಶಾಸ್ತ್ರಿಗಳು ನನ್ನನ್ನು ಬರಮಾಡಿಕೊಂಡು ನನ್ನ ಕಥೆಯನ್ನೆಲ್ಲಾ ಕೇಳಿ ದರು. ಶಾಸ್ತ್ರಿಗಳಿಗೆ ಆಗ ಕಣ್ಣು ಸ್ವಲ್ಪ ಮಂಜು ಮಂಜಾಗಿ ಕಾಣಿಸು ತ್ತಿತ್ತು. ತಕ್ಷಣ ನನಗೊಂದು ಸಲಹೆ ಇತ್ತರು. "ನೀವು ಹೈದರಾಬಾ ದಿಗೆ ಹೋಗಿಬರುತ್ತೀರಾ?" ಎಂದು ಕೇಳಿದರು. 'ಹೂಂ' ಎಂದೆ. ಶಾಸ್ತ್ರಿಗಳು ಸ್ಪಷ್ಟವಾಗಿ ಹೇಳಿದರು. ನೋಡಿ, ನಾನು ಹೈದರಾಬಾದಿನ ದಿವಾನರಾದ **ಸರ್ ಮಿರ್ಜಾ**ರವರಿಗೆ ಒಂದು ಕಾಗದ ಕೊಡುತ್ತೇನೆ. ನಿಮ್ಮ ಅದೃಷ್ಟವಿದ್ದರೆ, ಅವರು ಸಹಾಯ ಮಾಡುವರು. ಇಲ್ಲದಿದ್ದರೆ, ಖಾಲಿ ವಾಪಸು ಬರಬೇಕಾಗುವುದು. ನಿಮಗೆ ೫೦ ರೂ. ಖರ್ಚು ಆಗು ವುದು. ೫೦ ರೂಗೆ ೩೦೦೦ ರೂ ಸಿಕ್ಕರೂ ಸಿಗಬಹುದು. ನೀವು ಈ ಅವಕಾಶ ಉಪಯೋಗಿಸಿಕೊಳ್ಳುವ ಹಾಗಿದ್ದರೆ ಹೇಳಿ' ಎಂದರು. ಮರು ಮಾತನಾಡದೆ, ಕಾಗದ ಕೊಡಿ ಎಂದೆ. ಶಾಸ್ತ್ರಿಗಳು ಮಗನನ್ನು ಕರೆಸಿ, ಸರ್ ಮಿರ್ಜಾರವರಿಗೆ ಕಾಗದ ಬರೆಸಿದರು.

ಕಾಗದದೊಂದಿಗೆ ಆ ದಿನ ರಾತ್ರಿಯೇ ಭಾಗ್ಯನಗರಕ್ಕೆ ಪ್ರಯಾಣ ಬೆಳೆಸಿದೆನು. 'ಷಾಮಂಜಿಲ್' ನಲ್ಲಿದ್ದ ದಿವಾನರಾದ ಸರ್ ಮಿರ್ಜಾ ರವರನ್ನು ಭೇಟಿಮಾಡಿದೆನು.

ಭಾಗ್ಯನಗರವು ನನಗೆ ಭಾಗ್ಯನಗರವಾಗಲಿಲ್ಲ. ಮುಂದಿನ ಆಲೋಚನೆ ಯನ್ನು ಮಾಡುವ ಸಲುವಾಗಿ ಅಲ್ಲಿಂದ ಪುನಃ ಬೆಂಗಳೂರಿಗೆ ಮರಳಿದೆನು.

ಸುಭಾಷ್‌ನಗರದ ಕಾಂಗ್ರೆಸ್ ಅಧಿವೇಶನ ಮುಕ್ತಾಯವಾಯಿತು. ನವೆಂಬರ್ ತಿಂಗಳು ಸವೆಯುತ್ತಾ ಬಂದಿತು. ನನ್ನ ನಿಧಿಮಾತ್ರ ಇನ್ನೂ ಕೂಡಿರಲಿಲ್ಲ. ಯಾರೋ ಅಂದರು, ಮದರಾಸಿನ **ಇಂಡಿಯನ್ ಎಕ್ಸ್‌ಪ್ರೆಸ್** ಪತ್ರಿಕೆಯ ಮಾಲೀಕರಾದ **ಶ್ರೀ ರಾಮನಾಥ ಗೋಯೆಂಕ**ರವರನ್ನು ಕಾಣ ಬೇಕೆಂದು. ಹೊರಟೆ ಮದರಾಸಿಗೆ. ಮದರಾಸಿನಲ್ಲಿ ಶ್ರೀ ಕಾಂತೀಲಾಲ್ ಗಾಂಧಿ ಯವರ ಸ್ನೇಹಿತರಾದ **ಶ್ರೀ ಮೋಹನಲಾಲ್ ಮೆಹ್ತಾ**ರವರಲ್ಲಿ ಉಳಿದು, ಅಡಿಯಾರ್‌ನಲ್ಲಿರುವ ವಾರ್ಧಾಶಿಕ್ಷಣಕ್ರಮದ ಸಂಚಾಲಕರಾದ ತಿರುವಾಂ ಕೂರಿನ **ಶ್ರೀ ಜಿ. ರಾಮಚಂದ್ರನ್**ರವರನ್ನು ಕಂಡು ನನ್ನ ವಿವರವನ್ನೆಲ್ಲ ಹೇಳಿದೆನು. ಅವರು ತಕ್ಷಣವೇ ಶ್ರೀ ಗೋಯೆಂಕಾರವರಿಗೆ ಒಂದು ಪತ್ರ ಬರೆದು ಕೊಟ್ಟರು. ಆ ಪತ್ರ ತೆಗೆದುಕೊಂಡು ಶ್ರೀ ಗೋಯೆಂಕಾರವರನ್ನು ಭೇಟಿಮಾಡಿದೆ. ಭೇಟಿಯಕಾಲಕ್ಕೆ ಬೆಂಗಳೂರಿನ **"ಡೆಕ್ಕನ್ ಹೆರಾಲ್ಡ್"** ಪತ್ರಿಕೆಯ ಸಂಪಾದಕರಾದ **ಶ್ರೀ ಪೋತನ್ ಜೋಸೆಫ್**ರೂ ಇದ್ದರು. ಶ್ರೀ ರಾಮಚಂದ್ರನ್‌ರು ಕೊಟ್ಟ ಕಾಗದವನ್ನು ಓದಿ, ತಮ್ಮ ಕೈಲಿ ಸಹಾಯ ಮಾಡುವುದು ಸಾಧ್ಯವಿಲ್ಲವೆಂದರು. ಭಾರತೀಯ ವಿದ್ಯಾರ್ಥಿಗಳು ಅಮೇರಿ ಕೆಯಲ್ಲಿ ಪತ್ರಿಕೋದ್ಯಮದ ವಿಷಯವಾಗಿ ಕಲಿಯುವುದೇನೂ ಇಲ್ಲವೆಂದು ಎರಡು ನಿಮಿಷದಲ್ಲಿ ನನ್ನನ್ನು ನಿರುತ್ಸಾಹನನ್ನಾಗಿ ಮಾಡಿ ಕಳುಹಿಸಿಬಿಟ್ಟರು. ನಿರಾಶನಾಗಿ ಬಂದು ಶ್ರೀರಾಮಚಂದ್ರನ್‌ರವರಿಗೆ ನಡೆದ ವಿಷಯ ತಿಳಿಸಿದೆ. ಶ್ರೀರಾಮಚಂದ್ರನ್‌ರು ಖುದ್ದಾಗಿ ತಾವೇ ಶ್ರೀ ಗೋಯೆಂಕಾರವರನ್ನು ಕಂಡು ಮಾತನಾಡಿದರು. ಆಗಲೂ ಏನೂ ಸಾಧ್ಯವಾಗಲಿಲ್ಲ. ಅಲ್ಲಿಗೆ ಗೋಯೆಂಕಾ ಪ್ರಕರಣವನ್ನು ಮುಕ್ತಾಯ ಮಾಡಿದೆ.

ಮೈಸೂರಿನ ಸುಪ್ರಸಿದ್ಧ ಗ್ರಂಥಕರ್ತರಾದ **ಶ್ರೀ ವೈ. ಜಿ. ಕೃಷ್ಣ ಮೂರ್ತಿ**ಯವರು ಮದರಾಸಿನಲ್ಲಿದ್ದರು. ಅವರ ಸಲಹೆಯ ಮೇಲೆ ಮದ ರಾಸಿನ ಆಗಿನ ಮುಖ್ಯಮಂತ್ರಿ **ಶ್ರೀ ಟಿ. ಪ್ರಕಾಶಂ**ರವರನ್ನೂ, ನೋಡಿದೆ.

ಅಲ್ಲಿಯೂ ಏನೂ ಅನುಕೂಲವಾಗಲಿಲ್ಲ. ಕಾರಣ, ನನ್ನ ಬಗ್ಗೆ ಅವರಿಗೆ ಸಾಕಷ್ಟು ತಿಳಿವಳಿಕೆ ಇಲ್ಲದೇ ಇದ್ದುದೇ. ಅವರಾದರೂ ಸುಮ್ಮನೆ ನನ್ನ ಬಗ್ಗೆ ಯಾವ ಮಾಹಿತಿಯೂ ಇಲ್ಲದೆ, ಹೇಗೆ ಸಹಾಯ ಮಾಡಿಯಾರು? ನಾನಾದರೂ, ಮೈಸೂರಿನಿಂದ ಯಾರ ಪರಿಚಯ ಪತ್ರಗಳನ್ನೂ ತೆಗೆದು ಕೊಂಡು ಹೋಗಿರಲಿಲ್ಲ. ಕನ್ನಡದ ಮಂತ್ರಿಗಳಾಗಿದ್ದ **ಶ್ರೀ ಕೆ. ಆರ್. ಕಾರಂತ**ರನ್ನು ಭೇಟಿಮಾಡಬೇಕೆಂದು ಕೆಲವರು ಸಲಹೆ ಮಾಡಿದರು. ಆದರೆ ನನಗವರ ಪರಿಚಯವಿಲ್ಲದ್ದರಿಂದ, ಅವರನ್ನು ಭೇಟಿಮಾಡಲಿಲ್ಲ.

ಮದರಾಸಿನ ಪ್ರಯತ್ನಗಳು ಸಫಲವಾಗಲಿಲ್ಲ. ಮರುದಿನ ಬೆಂಗಳೂರಿಗೆ ಮರಳಬೇಕೆಂದು ನಿರ್ಧರಿಸಿ ಸಂಜೆ ಶ್ರೀರಾಮಚಂದ್ರನ್‌ರವರಿಗೆ ಹೇಳಿ ಹೋಗಲು ಮದರಾಸಿನ ಅಡಿಯಾರಿಗೆ ಬಂದೆನು. ಶ್ರೀರಾಮಚಂದ್ರನ್‌ರು ಮನೆಯಲ್ಲಿರಲಿಲ್ಲ. ಹತ್ತಿರದಲ್ಲಿಯೇ ಇದ್ದ ಸಮುದ್ರದ ದಂಡೆಯನ್ನು ನೋಡಿ ಕೊಂಡು ಬರೋಣವೆಂದು ಅಲ್ಲಿಗೆ ಹೋದೆನು. ಮನಸ್ಸಿನಲ್ಲಿ ಯೋಚನಾ ತರಂಗಗಳು ಏಳ ಹತ್ತಿದುವು. ಆ ಸಮುದ್ರದ ಪ್ರಶಾಂತವಾತಾವರಣದಲ್ಲಿ ಮನಸ್ಸು ಶಾಂತಿ ಸಾಗರವಾಯಿತು. ಹಾಗೆಯೇ ಮರಳಿನ ಮೇಲೆ ನಿದ್ದೆ ಹೋದೆನು. ಅರ್ಧ ಘಂಟೆಯ ಹೊತ್ತು ಮಲಗಿರಬಹುದು. ನಿದ್ರೆಯಿಂದ ಎದ್ದು ಕಣ್ಣು ಬಿಡುವವರೆಗೆ ಏನೋ ಒಂದು ಶಾಂತಿ ಸುಖ ದೊರೆತಿತ್ತು. ಅಲ್ಲಿ ಮತ್ತೊಂದು ಕನಸು ಕಂಡೆನು.

ಆ ಕನಸು ಈ ರೀತಿ ಇತ್ತು :

ನನಗೆ ಬೇಕಾಗಿರುವುದು ಕೇವಲ ನಾಲ್ಕು ಸಾವಿರ ರೂಪಾಯಿ. ಒಬ್ಬೊಬ್ಬರು ನಾಲ್ಕು ರೂಪಾಯಿ ಕೊಟ್ಟರೆ, ಒಂದು ಸಾವಿರ ಮಂದಿ ನನ್ನ ನಿಧಿ ಕೊಡಬಲ್ಲರು. ಸಾವಿರ ಜನಕ್ಕೆ ಒಂದು ಪ್ರಾರ್ಥನಾ ಪತ್ರ ಕಳುಹಿಸುವುದು. ಆ ಪ್ರಾರ್ಥನೆಗೆ ಓ ಗೊಟ್ಟರೆ ನನ್ನ ಕೆಲಸ ತೀರಿತು,

ಎಂದು ಬಗೆದು ಸಮುದ್ರದ ಸ್ಫೂರ್ತಿ ಪಡೆದು ಹೊರಟುಬಿಟ್ಟೆನು. ಸಂಜೆ ಶ್ರೀರಾಮಚಂದ್ರನ್ನರಿಗೆ ನಮಸ್ಕರಿಸಿ, ರಾತ್ರಿಯ ರೈಲಿನಲ್ಲಿಯೇ ಬೆಂಗಳೂರಿಗೆ ಬಂದೆನು. ಬಂದ ತಕ್ಷಣವೇ ಅಣ್ಣ ಶರ್ಮರಿಗೆ ವರದಿಯನ್ನರ್ಪಿಸಿ, ನನ್ನ ಹೊಸ ಕನಸನ್ನು ವಿವರಿಸಿದೆನು. ಅವರು 'ಭಲೆ' ಎಂದರು. ಅಲ್ಲಿಯೇ ಕುಳಿತು ಪ್ರಾರ್ಥನಾ ಪತ್ರವೊಂದನ್ನು ಬರೆದೆನು. ಇಂಡಿಯನ್ ಪ್ರೆಸ್ ಮಾಲೀಕರಾದ **ಶ್ರೀ ವಿ. ಎಸ್. ನಾರಾಯಣರಾಯರು** ಮತ್ತು ಶ್ರೀ ಸಿ. **ರಾಜಗೋಪಾಲಾಚಾರಿ**ಯವರು ನನ್ನ ಪ್ರಾರ್ಥನಾಪತ್ರವನ್ನು ಅಂದವಾಗಿ ಉಚಿತವಾಗಿ ಮುದ್ರಿಸಿಕೊಟ್ಟು ಸಹಾಯ ಮಾಡಿದರು.

ಕನ್ನಡ ಸಾಹಿತ್ಯ ಪರಿಷತ್ತಿಗೆ ಹೋಗಿ ಕನ್ನಡದ ಒಂದು ಸಾವಿರದ ಇನ್ನೂರು ಮಂದಿಯ ವಿಳಾಸವನ್ನು ತಂದು ಅವರೆಲ್ಲರಿಗೂ ಒಂದೊಂದು ಪ್ರಾರ್ಥನಾ ಪತ್ರದೊಂದಿಗೆ, ತಮ್ಮ ಕೈಲಾದಷ್ಟು ಸಹಾಯ ಮಾಡಬೇಕೆಂದು ಮನವಿ ಮಾಡಿಕೊಂಡೆನು. ಹಣವನ್ನು ನೇರವಾಗಿ ಬೊಂಬಾಯಿನಲ್ಲಿರುವ ಮೈಸೂರು ಬ್ಯಾಂಕಿಗೆ ಕಟ್ಟಲು ಕೇಳಿಕೊಂಡಿದ್ದೆನು. ಈ ಕನಸಿಗಾಗಿ ಸುಮಾರು ೬೦೦ ರೂ ಖರ್ಚು ಮಾಡಿದ್ದೆನು. ೧೫ ದಿವಸಗಳ ನಂತರ ನಾ ಬೊಂಬಾಯಿಗೆ ಹೋಗಿ ಎಷ್ಟು ಹಣ ಕೂಡಿದೆ ಎಂದು ನೋಡಲಾಗಿ ಕೇವಲ ೨೦೦ ರೂಪಾಯಿ ಮಾತ್ರ ಕೂಡಿತ್ತು, ಸಾವಿರದ ಇನ್ನೂರು ಜನಕ್ಕೆ ಕೇವಲ ೮ ಜನ ಮಾತ್ರ ನನಗೆ ಹಣ ಕಳುಹಿಸಿ ಕೊಟ್ಟಿದ್ದರು. ಈ ನಿವೇದನೆಯಿಂದ ಸ್ವಲ್ಪ ಹಣವೇ ಸೇರಿದ್ದರೂ, ಒಂದು ದೃಷ್ಟಿಯಿಂದ ನನಗೆ ಅನುಕೂಲವೇ ಆಗಿತ್ತು. ಯಾರನ್ನು ಬರೀ ಪ್ರಾರ್ಥನಾ ಪತ್ರದಿಂದ ಹಣ ಕೊಡುವಂತೆ ಮಾಡಲು ಸಾಧ್ಯವಾಗಿರಲಿಲ್ಲವೋ, ಅವರನ್ನು ಸ್ವತಃ ಹೋಗಿ ಕೇಳಿದ ಕೂಡಲೇ ಕೊಡುವಷ್ಟು ಪ್ರಭಾವ ಮಾಡಿಸಿತ್ತು, ಈ ನಿವೇದನೆ.

ತಾತ್ಕಾಲಿಕವಾಗಿ ಆದ ಸೋಲಿನಿಂದ ಮುಂದೇನು ಮಾಡಬೇಕೆಂದು ತಿಳಿಯದೆ ಚಿಂತಾಕ್ರಾಂತನಾಗಿದ್ದೆನು. ಒಂದು ದಿನ ಬೆಳಿಗ್ಗೆ ಅದು ನವೆಂಬರ್ ೨೬ನೇ ತಾರೀಖು ೧೯೪೯, ಎಂದು ಕಾಣುತ್ತದೆ, ಮದರಾಸಿನಿಂದ

ಒಂದು ಪತ್ರ ಬಂದಿತು. ಶ್ರೀ ಜಿ. ರಾಮಚಂದ್ರನ್ನರು ಬರೆದಿದ್ದರು. ಜೊತೆಗೆ ಶ್ರೀ ಗೋಯೆಂಕಾರವರು ಕಳುಹಿಸಿದ ಒಂದು ಸಾವಿರ ರೂಪಾಯಿಯ ಚೆಕ್ಕು ಇತ್ತು. ನನ್ನ ಸಂತೋಷಕ್ಕೆ ಪಾರವೇ ಇರಲಿಲ್ಲ. ನಾನು ಮದ ರಾಸಿನಿಂದ ಬಂದ ಮೇಲೆ ಶ್ರೀ ಗೋಯೆಂಕಾರವರಿಗೆ ಕನಿಕರ ಬರುವಂತೆ ಇನ್ನೊಂದು ಕಾಗದ ಬರೆದಿದ್ದೆ. ಆ ದಿನವೇ ಶ್ರೀರಾಮಚಂದ್ರನ್ನರು ಅವ ರನ್ನು ಭೇಟಿಯಾಗಿದ್ದರು. ಆಗ ಶ್ರೀ ಗೋಯೆಂಕಾರವರು ಆ ಚೆಕ್ಕು ಕೊಟ್ಟಿ ದ್ದನ್ನು ಶ್ರೀ ರಾಮಚಂದ್ರನ್ನರು ನನಗೆ ಕಳುಹಿಸಿ ಕೊಟ್ಟಿದ್ದರು.

ಸುಭಾಷ್ ನಗರದ ಅಧಿವೇಶನಕ್ಕೆ ಮೈಸೂರಿನಿಂದ **ಮೈಸೂರು ಪತ್ರಿಕೆಯ** ಸಂಪಾದಕರಾದ ಶ್ರೀ **ಟಿ. ನಾರಾಯಣರಾಯರು**ಬಂದಿದ್ದರು. ಅವ ರಿಗೆ ನನ್ನ ಬಗ್ಗೆ ವಿಶೇಷ ಕನಿಕರ ಹುಟ್ಟಿತ್ತು. ಮೈಸೂರಿಗೆ ಬಂದರೆ ತಾವು ತಮ್ಮ ಕೈಲಾದ ಸಹಾಯ ಮಾಡುವುದಾಗಿ ತಿಳಿಸಿದ್ದರು. ಅದರ ಮೇಲೆ ನಾನು ನವೆಂಬರ್ ೨೪ಕ್ಕೆ ಮೈಸೂರಿಗೆ ಹೋದೆ.

ಮೈಸೂರು ನನ್ನ ವಿದ್ಯಾರ್ಥಿ ದೆಸೆಯಿಂದ ರಾಜಕೀಯಕಾರ್ಯ ಕ್ಷೇತ್ರ ವಾಗಿತ್ತು. ಅಲ್ಲಿಯೇ ನನ್ನ ಪ್ರಥಮ ಕನಸನ್ನು ಕಾರ್ಯಕ್ರಮ ಮಾಡಲು ಪ್ರಾರಂಭಿಸಿದ್ದು. ಆರು ವರ್ಷದಲ್ಲಿ ನನ್ನ ಗೆಳೆತನ ಮತ್ತು ಬಾಂಧವ್ಯ ಚೆನ್ನಾಗಿ ಬೆಳೆದಿತ್ತು. ಸಾಮಾನ್ಯವಾಗಿ ಮೈಸೂರು ನಗರದಲ್ಲಿ ನನಗೆ ಬಹಳ ಮಂದಿ ಪರಿಚಿತರಿದ್ದರು. ನನಗಿನ್ನು ಮೂರು ಸಾವಿರ ರೂಪಾಯಿ ಬೇಕಾ ಗಿತ್ತು. ಡಿಸೆಂಬರ್ ೫ನೇ ತಾರೀಖಿನೊಳಗೆ ಹಣ ಕಟ್ಟದಿದ್ದರೆ ನನಗೆ ವೀಸಾ ಸಿಕ್ಕದೆ ನನ್ನ ಪ್ರಯಾಣವೇ ನಿಲ್ಲುವ ಸ್ಥಿತಿಯಲ್ಲಿತ್ತು. ಇನ್ನೆಂಟು ದಿನಗಳಲ್ಲಿ ಮೂರು ಸಾವಿರ ರೂಪಾಯಿ ಸಾಧಿಸಬೇಕಾಗಿತ್ತು. ಮೊದಲಿನಿಂದ ಮಾಡಿದ ಸಾಹಸದ ವಿವರವನ್ನೆಲ್ಲಾ ಶ್ರೀ ನಾರಾಯಣರಾಯರಿಗೆ ತಿಳಿಸಿದೆ. ಶ್ರೀ ರಾಯ ರನ್ನು ನಾನು ಪರಿಚಯ ಮಾಡಿಕೊಂಡಿರಲಿಲ್ಲ. ನಾನು ಚಳುವಳಿಯ ಕಾಲಕ್ಕೆ ಅವರ ವಿರುದ್ಧ ಜಗಳವಾಡಿದ್ದೆ. ನನಗೂ ಅವರಿಗೂ ಇದ್ದ ಒಂದೇ ಒಂದು ಸಂಬಂಧವೆಂದರೆ, ಅವರು ಪತ್ರಿಕೋದ್ಯಮಿಯಾಗಿದ್ದುದು, ನಾನು

ಪತ್ರಿಕೋದ್ಯಮವನ್ನು ಕಲಿಯಲಿಕ್ಕೆ ಹೋಗುತ್ತಿದ್ದುದು. ಈ ಸಂಬಂಧವೇ ನಮ್ಮಿಬ್ಬರನ್ನು ಹತ್ತಿರಕ್ಕೆ ತಂದಿತ್ತು.

ನವೆಂಬರ್ ೨೬, ೨೭, ೨೮ ಈ ಮೂರು ದಿನ ಇಬ್ಬರೂ ಸಿಥಿಗಾಗಿ ಅಲೆಯಬೇಕೆಂದು ತೀರ್ಮಾನವಾಯಿತು. ಸುಮಾರು ನಲವತ್ತು ಮಹನೀಯರ ಪಟ್ಟಿಯೊಂದನ್ನು ತಯಾರಿಸಿದೆವು. ಶ್ರೀ ರಾಯರ ಟಾಂಗವನ್ನೇ ಹತ್ತಿ ಮೂರು ದಿನವೂ, ಅನ್ನ ನೀರಿಲ್ಲದೆ ಮನೆಮನೆಗೆ ಅಲೆದೆವು. ಶ್ರೀ ರಾಯರ ಖ್ಯಾತಿಯಿಂದ ಮೂರು ದಿನಗಳಲ್ಲಿ ಎರಡು ಸಾವಿರ ರೂಪಾಯಿ ಹಣ ಕೂಡಿಸಿದೆವು. ನಲವತ್ತು ಜನರಿಗೂ ನಾನು ಮೊದಲೇ ಪ್ರಾರ್ಥನಾ ಪತ್ರವನ್ನು ಕಳುಹಿಸಿಕೊಟ್ಟಿದ್ದೆನು. ನಾವು ಹೋದಕೂಡಲೇ ನಮ್ಮನ್ನು ಬರೀ ಕೈಯಲ್ಲಿ ಹಿಂತಿರುಗಿ ಯಾರೂ ಕಳುಹಿಸಲಿಲ್ಲ. ಇಲ್ಲಿಗೆ ಒಂಭತ್ತು ಸಾವಿರ ರೂಪಾಯಿ ಸೇರಿತು. ಧೈರ್ಯ ಬಂದೊದಗಿತು. ಈ ವೇಳೆಗೆ ಪತ್ರಿಕೆಗಳಲ್ಲಿ ನಾನು ಮಾಡುತ್ತಿರುವ ಕೆಲಸದ ಬಗ್ಗೆ ಪ್ರಕಟವಾಗಿತ್ತು. ಅದರ ಮೇಲೆ ಶಿವಮೊಗ್ಗೆಯ ಗೆಳೆಯರೊಬ್ಬರು ನನ್ನನ್ನು ಅಲ್ಲಿಗೆ ಬರಬೇಕೆಂದು ಕರೆದರು.

ಶಿವಮೊಗ್ಗಿ ನನ್ನ ಜಿಲ್ಲೆ. ಭಾರತದ ಪಾರ್ಲಿಮೆಂಟಿನ ಸದಸ್ಯರಾದ **ಶ್ರೀ ಎಸ್. ವಿ. ಕೃಷ್ಣಮೂರ್ತಿರಾಯರು,** ಶಿವಮೊಗ್ಗಿಯವರ ಪರವಾಗಿ ೫೦೦ ರೂಪಾಯಿಗಳನ್ನು ಕೊಟ್ಟರು. ಅಲ್ಲಿಂದ ದಾವಣಗೆರೆಯಲ್ಲಿ **ಶ್ರೀ ದೀಕ್ಷಿತರು** ೫೦೦ ರೂಪಾಯಿಗಳನ್ನು ಹೊಂದಿಸಿಕೊಟ್ಟರು.

ಇಲ್ಲಿಯವರೆಗೆ ನಾನು ನನ್ನ ಹುಟ್ಟು ಊರಾದ ಆನವಟ್ಟಿಗೆ ಹೋಗಿರಲಿಲ್ಲ. ಅಲ್ಲಿಂದ ನನ್ನ ಲಂಗೋಟಿ ಗೆಳೆಯ **ವೆಂಕೋಬನ**ಕರೆ ಬಂದಿತು. ನನಗಾಗಿ ಅಲ್ಲಿಯೂ ಸಿಥಿ ಕೂಡಿಸಿಟ್ಟಿದ್ದರು. **ಶ್ರೀ ನಾರಾಯಣ ಭಟ್ಟರು, ಶ್ರೀ ಓಂಕಾರಪ್ಪ**ನವರು ತಲಾ ೫೦೦ ರೂಪಾಯಿ ಕೊಟ್ಟರು. ಇದಲ್ಲದೆ ಬೇರೆ ಸ್ವಲ್ಪ ಹಣವನ್ನು ಇತರರೂ ಕೊಟ್ಟರು.

ನನ್ನ ಕಷ್ಟ ಮುಗಿಯಿತೆಂದುಕೊಂಡೆ. ಯೋಚಿಸಿದ್ದಕ್ಕಿಂತ ಹೆಚ್ಚಾಗಿ ಒಂದು ಸಾವಿರ ರೂಪಾಯಿ ಶೇಖರವಾಗಿತ್ತು. ಇನ್ನು ಉಳಿದ ಸಿದ್ಧತೆಗಳನ್ನು ಮಾಡಿಕೊಳ್ಳಲು ಪ್ರಾರಂಭಮಾಡಿದೆ. ವೃತ್ತಪತ್ರಿಕೆಗಳಲ್ಲಿ ನನ್ನ ಬಗ್ಗೆ ಲೇಖನಗಳು ಬಂದವು. ನಾನು ಮಾಡುತ್ತಿರುವ ಕಾರ್ಯವನ್ನು ಪ್ರಶಂಶಿಸಿದ್ದರು. ನಾನು ಅಮೇರಿಕೆಗೆ ಹೋಗುವುದು ಖಂಡಿತವಾಯಿತು. ಅಮೇರಿಕನ್ ವೀಸಾವು ಕೂಡ ಹೊತ್ತಿಗೆ ಸರಿಯಾಗಿ ಬಂದಿತು.

ಸತ್ಕಾರ ಕೂಟಗಳು ನನ್ನ ಬಗ್ಗೆ ಏರ್ಪಾಡಾದುವು. ಮೈಸೂರಿನಲ್ಲಿ ಪತ್ರಿಕೋದ್ಯೋಗಿಗಳ ಸಂಘವು ನನ್ನನ್ನು ಬರಮಾಡಿಕೊಂಡು ಆದರಿಸಿತು. ಹಿರಿಯ ಪತ್ರಿಕೋದ್ಯಮಿಗಳಾದ **ಶ್ರೀ ಕೃಷ್ಣರಾಯರು, ಶ್ರೀ ಅಗರಂ ರಂಗಯ್ಯನವರು, ಶ್ರೀ ಟಿ. ನಾರಾಯಣರಾಯರು, ಶ್ರೀ ಗೋಪಾಲ ಕೃಷ್ಣಸೆಟ್ಟರು, ಶ್ರೀ ಎಂ. ಎನ್. ಜೋಯಿಸರು** ಮುಂತಾದವರು ನನ್ನ ಬಗ್ಗೆ ಮಾತನಾಡಿ ಆಶೀರ್ವದಿಸಿದರು. ಹಾಗೆಯೇ ಓರಿಯಂಟಲ್ ಇಂಡಸ್ಟ್ರೀಸ್ ಮಾಲಿಕರಾದ **ಶ್ರೀ ಬಿ. ಎಸ್. ಸುಬ್ಬರಾಯರೂ, ಶ್ರೀ ಎಂ. ಆರ್. ಸಿ. ಬಸಪ್ಪನ**ವರೂ ನನ್ನನ್ನು ಬರಮಾಡಿಕೊಂಡು ಉಪಚರಿಸಿದರು.

ಬೆಂಗಳೂರಿಗೆ ಬರಬೇಕೆಂದು ಕರೆಬಂತು. ಬೆಂಗಳೂರು ನಗರದ ಪತ್ರಿಕೋದ್ಯಮ ಸಂಘದ ಅಧ್ಯಕ್ಷರಾದ **ಶ್ರೀ ಕೆ. ಜೀವಣ್ಣರಾಯರ** ಮುಂದಾಳುತನದಲ್ಲಿ ನನಗೊಂದು ಸತ್ಕಾರಕೂಟವಾಯಿತು. ಅಖಿಲ ಮೈಸೂರು ಪತ್ರಿಕೋದ್ಯಮ ಸಂಘದ ಅಧ್ಯಕ್ಷರಾದ **ಶ್ರೀ ಗೌಸ್‌ಮೋಹಿಯುದ್ದೀನ್** ಸಾಹೇಬರು, ಶ್ರೀ ವಿ. ಎಸ್. ನಾರಾಯಣರಾಯರು ನನ್ನನ್ನು ಆಶೀರ್ವದಿಸಿದರು. ಬೆಂಗಳೂರು, ಮೈಸೂರು ಸ್ನೇಹಿತರುಗಳನ್ನು ಬೀಳ್ಕೊಂಡು ಬೊಂಬಾಯಿ ಅಭಿಮುಖವಾಗಿ ಶಿವಮೊಗ್ಗಿಗೆ ತೆರಳಿದೆನು.

ಶಿವಮೊಗ್ಗ ನನ್ನ ಹುಟ್ಟು ಜಿಲ್ಲೆ. ನನ್ನ ಚಿಕ್ಕಂದಿನ ದಿನಗಳನ್ನು—ನಾಲ್ಕು ವರ್ಷ—ಕಳೆದ ಊರು. ನನ್ನ ಸ್ನೇಹಿತರಾದ **ಶ್ರೀ ದಿನಕರ್,**

**ಶ್ರೀ ರಾಜಗೋಪಾಲ್, ಶ್ರೀ ನಾಗಪ್ಪಶೆಟ್ಟರು,** ನನ್ನನ್ನು ಬಿಡಲೇ ಇಲ್ಲ. ನನ್ನ ಬಗ್ಗೆ ವಿಶ್ವಾಸ ತೋರಿಸಿದರು. ನನಗಾಗಿ ನಿಧಿಯೊಂದನ್ನು ಕೊಟ್ಟರು.

ಶಿವಮೊಗ್ಗಿಯ ಪತ್ರಿಕೋದ್ಯೋಗಿ ಸಂಘದ ಅಧ್ಯಕ್ಷರಾದ ಶ್ರೀ ಜಿ. ಶ್ರೀನಿವಾಸ ಐಯ್ಯಂಗಾರ್ಯರು ನನ್ನನ್ನು ಸಂಘಕ್ಕೆ ಬರಮಾಡಿಕೊಂಡು ಹಾರ ತುರಾಯಿಗಳನ್ನರ್ಪಿಸಿದರು.

ಅಖಿಲ ಕರ್ನಾಟಕ ವಿದ್ಯಾರ್ಥಿ ಕಾಂಗ್ರೆಸ್ ಅಧಿವೇಶನ ಶಿವಮೊಗ್ಗಿಯಲ್ಲಿ ಕೂಡಿತ್ತು. ವಿದ್ಯಾರ್ಥಿ ಕಾಂಗ್ರೆಸ್ ಸಂಸ್ಥೆಯಲ್ಲಿ ನಾನು ಸ್ವಲ್ಪ ಸೇವೆ ಸಲ್ಲಿಸಿದ ಕಾರಣ, ಅಖಿಲ ಕರ್ನಾಟಕ ವಿದ್ಯಾರ್ಥಿ ಕಾಂಗ್ರೆಸ್ ಸಂಸ್ಥೆಯವರು ನನಗೆ ಶಿವಮೊಗ್ಗಿಯಲ್ಲಿ ಅಧಿವೇಶನದ ಕಾಲದಲ್ಲಿ ಸಾರ್ವಜನಿಕ ಸತ್ಕಾರ ಸಭೆಯೊಂದನ್ನು ಕರೆದರು. ಸುಪ್ರಸಿದ್ಧ ಪತ್ರಿಕೋದ್ಯಮಿಗಳಾದ ಶ್ರೀ ಸಿದ್ದವ್ವನಹಳ್ಳಿ ಕೃಷ್ಣಶರ್ಮರು ಅಧ್ಯಕ್ಷತೆ ವಹಿಸಿದ್ದರು. ಗೆಳೆಯರಾದ **ಶ್ರೀ ಖಾದ್ರಿ ಶಾಮಣ್ಣ, ಶ್ರೀ ಹೆಚ್. ಕೆ. ಕುಮಾರಸ್ವಾಮಿ** ಮಂಗಳೂರಿನ **ಶ್ರೀ ಎರ್. ಎಸ್. ಹೊಳ್ಳ,** ಬೆಳಗಾವಿಯ **ಶ್ರೀ ಕುಲಕರ್ಣಿ,** ವಿದ್ಯಾರ್ಥಿ ಕಾಂಗ್ರೆಸ್ ಪ್ರಧಾನ ಕಾರ್ಯದರ್ಶಿಗಳಾದ **ಶ್ರೀ ಹಾರ್‍ನಹಳ್ಳಿ ರಾಮಸ್ವಾಮಿ** ಮುಂತಾದವರು ನನ್ನ ಬಗ್ಗೆ ಮಾತನಾಡಿ ಪ್ರೀತಿ ವಿಶ್ವಾಸವನ್ನು ತೋರಿಸಿದರು. ಅಣ್ಣ ಕೃಷ್ಣಶರ್ಮರು ನನ್ನನ್ನು ಹರಿಸಿದರು. ನಾನೂ ತುಂಬಿದ ಹೃದಯದಿಂದ ನಾಲ್ಕು ಮಾತು ಆಡಿದೆ. ಆತ್ಮೀಯರ, ಗೆಳೆಯರ, ಹಿರಿಯರ ಮತ್ತು ವಿಶ್ವಾಸಿಗಳ ಮಮತೆ ನನ್ನನ್ನು ಮುಗ್ಧನನ್ನಾಗಿ ಮಾಡಿದವು. ಸಭೆಯಲ್ಲಿ ಸೇರಿದ ಹತ್ತು ಸಾವಿರ ಜನ ಚಪ್ಪಾಳೆ ಹೊಡೆದಾಗ ನನ್ನ ಕಂಠ ಬಿಗಿದು ಬಂದಿತ್ತು. ಈ ಜನರ ಹರಕೆಗೆ ನಾನು ಪಾತ್ರನಾಗುವಂತೆ ನಡೆದೇನೆ? ಎಂಬ ಭಯ ತಲೆದೋರಿದ್ದರೂ ಜನ ಕೊಟ್ಟ ನಂಬಿಕೆಗೆ ಕೃತಜ್ಞತೆಯನ್ನು ತೋರಿಸಿ ವಂದಿಸಿದೆನು. ಶಿವಮೊಗ್ಗಿಯಲ್ಲಾದ ಸಭೆಯ ಸನ್ಮಾನವನ್ನು ಎಂದೂ ನಾನು ಮರೆಯುವಂತಿಲ್ಲ.

## ಕನಸು-ನನಸು

ಜನವರಿ ೧೯ನೇ ತಾರೀಖು **ಆನವನಟ್ಟಿಗೆ**–ನನ್ನ ಹುಟ್ಟೂರಿಗೆ–ಬಂದೆನು. ನನ್ನ ಊರಿನವರ ಹೆಮ್ಮೆಗೆ ಮಿತಿಯೇ ಇರಲಿಲ್ಲ. ನಮ್ಮ ಮನೆಯಲ್ಲಂತೂ ಒಂದು ಕಡೆ ಸಂಭ್ರಮ, ಇನ್ನೊಂದು ಕಡೆ ದೂರ ದೇಶಕ್ಕೆ ಬಹಳ ಕಾಲ ಹೋಗುವುದರಿಂದಾಗುವ ಅಗಲಿಕೆಯ ದುಃಖ. ಈ ಉಭಯ ಸಂಕಟದಲ್ಲಿ ಸಿಕ್ಕಿದ ನನ್ನ ತಂದೆ ತಾಯಿಯವರ ಸ್ಥಿತಿಯನ್ನಂತೂ ನಾನು ವರ್ಣಿಸಲಾರೆ. ನನ್ನ ಈ ಓಡಾಟದಲ್ಲಿ ಆನವಟ್ಟಿಯಲ್ಲಿ ಒಂದು ದಿನವೂ ನಾನು ಹೆಚ್ಚಾಗಿ ನಿಂತುದಿಲ್ಲ. ಈಗಲೇ ಎರಡು ದಿನದ ಬಿಡುವಿತ್ತು. ನನ್ನ ತಾಯಿ ನನಗೆ ಇಷ್ಟವಾದ ಕೇಸರಿಭಾತ್, ಕೋಡಬಳೆ, ಮೊಸರುಭಜ್ಜಿ, ಟೋಮಾಟೊ ಸಾರು, ಕೆನೆಮೊಸರು ಅನ್ನ ಮುಂತಾದ ತಿಂಡಿಗಳನ್ನು ಮಾಡಿ ಹಾಕಿದರು. ನನ್ನ ಅತ್ತಿಗೆಯರು ಎಂದಿಗಿಂತ ಒಂದು ಲೋಟ ಹೆಚ್ಚು ಕಾಫಿಯನ್ನೇ ಕೊಡುತ್ತಿದ್ದರು. ಮನೆಯ ಹುಡುಗರಂತೂ ನಾನು ಇನ್ನು ಬರುವುದೇ ಇಲ್ಲವೆಂದು ತಿಳಿದು ಆಗಲೇ ಕಾಸು ಕೇಳುವುದಕ್ಕೆ ಪ್ರಾರಂಭಿಸಿದ್ದರು. ನನ್ನ ಸ್ನೇಹಿತ **ವೆಂಕೋಬ** ನನಗೊಂದು ಸನ್ಮಾನ ಸಭೆಯನ್ನು ನೆರೆಯಿಸಿದ. ಊರಿನ ಹಿರಿಯರಾದ **ಶ್ರೀ ಭೀಮರಾಯರು** ಅಧ್ಯಕ್ಷರಿದ್ದರು. ಹಳ್ಳಿಯ ಕಡೆಯಿಂದ ಅನೇಕರು ನನ್ನನ್ನು ಬೀಳ್ಕೊಡಲು ಬಂದಿದ್ದರು. ವಿದ್ಯಾರ್ಥಿ ದೆಸೆಯಿಂದಲೂ ನನ್ನ ಗೆಳೆಯರಾದ **ಶ್ರೀ ಮಾಧವ ರಾಯರು,** ಶ್ರೀ ನಾರಾಯಣ ಭಟ್ಟರು, ನಮ್ಮೂರಿನ ಜನಪ್ರಿಯ ಡಾಕ್ಟರರಾದ **ಶ್ರೀ ಜಿ. ಶ್ರೀನಿವಾಸ ಅಯ್ಯರ್** ರವರು ನನ್ನನ್ನು ಪ್ರಶಂಶಿಸಿ ಮಾತನಾಡಿದರು. ನಮ್ಮ ತಂದೆಯವರಾದ **ಶ್ರೀ ನರಸಿಂಗರಾಯರು** ನನ್ನ ಪಕ್ಕದಲ್ಲಿಯೇ ಕುಳಿತಿದ್ದರು. ಅವರ ಅಭಿಮಾನವಂತೂ ಹೇಳತೀರದು. ಅವರಿಗೆ ಹೆಮ್ಮೆಯೇನೋ ಇತ್ತು. ಆದರೆ ಮಗ ವಿಲಾಯಿತಿಗೆ ಹೋಗಿ ಎಲ್ಲಿ ಜಾತಿಗೆಡುವನೋ ಎಂಬ ಭಯವಿತ್ತು. ನಾನು ಅವರಿಗಾಗಿ **ಶ್ರೀ ಮಂತ್ರಾಲಯಕ್ಕೆ** ಹೋಗಿ, **ಶ್ರೀ ರಾಘವೇಂದ್ರಸ್ವಾಮಿಗಳವರ** ಅಪ್ಪಣೆ ಪಡೆದು ಬಂದಿದ್ದೆ. ಅದಷ್ಟು ಅವರಿಗೆ ಶಾಂತಿ ಕೊಟ್ಟಿತ್ತು. ಮತ್ತು ನಾನು ಅವರಿಗೆ ಮಾತು ಕೊಟ್ಟಿದ್ದೆ, ಮದ್ಯ, ಮಾಂಸ, ಮಾನಿನಿ ಮುಂತಾದುವುಗಳನ್ನು ಮುಟ್ಟುವು

ದಿಲ್ಲವೆಂದು. ಅದೂ ಅವರಿಗೆ ಸ್ವಲ್ಪ ಶಾಂತಿ ತಂದಿತ್ತು. ಬಿಗಿದ ಕಂಠದಿಂದ ಸಭೆಯಲ್ಲಿ ಮಾತನಾಡಿದೆ. ಆತ್ಮೀಯತೆಯ ತುಟ್ಟತುದಿ ಅಲ್ಲಿ ಮುಟ್ಟಿತ್ತು. ಹುಟ್ಟು ನಾಡಿನ ಅಂತಃಕರಣ ಉಕ್ಕಿ ಬಂದಿತ್ತು. ಮನೆಯವರ ಮಮತೆ ಕೂಡಿ ಮೂಡಿತ್ತು.

ನಮ್ಮೂರಿನ ಜನರನ್ನುದ್ದೇಶಿಸಿ ಅಂದು ಮಾತನಾಡಿದ ಘಳಿಗೆ ನನಗಿನ್ನೂ ಜ್ಞಾಪಕದಲ್ಲಿದೆ. ಸುಮಾರು ಎರಡು ಘಂಟೆಗಳ ಕಾಲ ಮಾತನಾಡಿದ್ದಿರಬಹುದು. ನಾನು ಅಮೇರಿಕೆಯ ಸಾಹಸಕ್ಕೆ ಪಟ್ಟ ಶ್ರಮವನ್ನೆಲ್ಲಾ ವಿವರವಾಗಿ ತಿಳಿಯಪಡಿಸಿ, ಊರವರ ಆಶೀರ್ವಾದವನ್ನು ಪಡೆದೆನು. ನನ್ನ ಜೀವನದಲ್ಲಿ ಆ ಸಭೆಯ ನೆನಪು ಅಚ್ಚಳಿಯದೆ ನಿಲ್ಲುವುದು.

ಮರುದಿನ ಬಸ್ಸಿನಲ್ಲಿ ನಾನು ಹುಬ್ಬಳ್ಳಿಯ ಮಾರ್ಗವಾಗಿ ಬೊಂಬಾಯಿಗೆ ಹೋಗುವುದಿತ್ತು. ನನ್ನ ಗೆಳೆಯ ವೆಂಕೋಬ, ನನ್ನ ಹಿರಿಯಣ್ಣ ಬೊಂಬಾಯಿಯವರೆಗೂ ಜೊತೆಯಲ್ಲಿಯೇ ಬಂದರು. ಆನವಟ್ಟಿಯಲ್ಲಿ ಬಸ್ಸು ಹತ್ತುವ ವೇಳೆಗೆ ನಮ್ಮೂರೇ ಬಸ್ಸು ನಿಲ್ದಾಣದಲ್ಲಿತ್ತು. ನಮ್ಮ ತಾಯಿ ತುಂಬಿ ಬಂದ ದುಃಖ ನುಂಗಿಕೊಂಡು, ನಗು ತೋರಿಸುವ ನೆಪದಲ್ಲಿ ಶಾಂತವದನರಾಗಿ ಮಂಕರಾಗಿ ನಿಂತುಬಿಟ್ಟಿದ್ದರು. ನಮ್ಮ ತಂದೆ ನನ್ನನ್ನು ಕಳುಹಿಸಿಕೊಡಲು ಮೈಸೂರು ಗಡಿಯವರೆಗೂ ಬಂದರು. ಊರಿನವರಿಗೆಲ್ಲಾ, ಹಿರಿಯರು, ಕಿರಿಯರು, ಗೆಳೆಯರು, ಎಲ್ಲರಿಗೂ, ಹೇಳಿ ಕೇಳಿ ಆದಮೇಲೆ, ಬಸ್ಸು 'ಜೈ' ಕಾರಗಳ ಮಧ್ಯೆ ಊರು ಬಿಟ್ಟಿತು. ಕುತ್ತಿಗೆಯ ತುಂಬಾ ಭಾರವಾಗಿದ್ದ, ನವಿರಾದ ಮಲ್ಲಿಗೆ ಮಾಲೆಗಳನ್ನು ಬದಿಗಿಟ್ಟು, ನಮ್ಮ ತಾಯಿಗೆ ನಮಸ್ಕರಿಸಿ, ತಿರುಗಿ ಬರುವೆನೆಂದು ಭರವಸೆಕೊಟ್ಟು, ಮತ್ತೊಮ್ಮೆ ನೆರೆದಿದ್ದವರೆಲ್ಲರಿಗೂ ನಮಸ್ಕರಿಸಿ ನನ್ನ ಪ್ರಯಾಣ ಬೆಳೆಸಿದೆನು.

ಅಂದು ಬಸ್ಸಿನಲ್ಲಿ ಸುಮಾರು ೬೦ ಜನ ಇದ್ದರು. ಎಲ್ಲರೂ ನನ್ನನ್ನು ಬೀಳ್ಕೊಡಲು ಗೊಂದಿಯವರೆಗೆ ಬಂದರು. **ಗೊಂದಿಯ** ಬಳಿ **ವರದಾನದಿ** ಹರಿಯುವುದು. ಅದೇ ಮೈಸೂರು ನಾಡಿನ ಕೊನೆಯ ಸರಹದ್ದು.

ಅಲ್ಲಿಂದ ಪ್ರಾರಂಭವಾಗುವುದು ಬೊಂಬಾಯಿ ರಾಜ್ಯದ ಧಾರವಾಡ ಜಿಲ್ಲೆ. ನಮ್ಮ ಮನೆತನಕ್ಕೆ ತುಂಬಾ ಹತ್ತಿರದವರಾದ **ಶ್ರೀ ಅಗಸನಹಳ್ಳಿ ವೆಂಕಟ ರಾಯರು** ತಮ್ಮ ವೃದ್ಧಾಪ್ಯವನ್ನು ಲೆಕ್ಕಿಸದೆ ಬಂದವರಲ್ಲಿ ಒಬ್ಬರಾಗಿದ್ದರು. ಗೊಂದಿಯಲ್ಲಿ ನಮ್ಮ ಆಪ್ತರಾದ **ಶ್ರೀ ಹನುಮಂತರಾಯರು** 'ಚಹಾ' ಏರ್ಪಡಿಸಿದ್ದರು. ಅರ್ಧಗಂಟೆಯ ಹೊತ್ತಿಗೆ ಹುಬ್ಬಳ್ಳಿಗೆ ನಮ್ಮನ್ನು ಕರೆದೊಯ್ಯುವ ಬಸ್ಸು ಬಂದಿತು. ಅದರಲ್ಲಿ ಕುಳಿತು ಇನ್ನೊಮ್ಮೆ ನನ್ನ ಹಿರಿಯರಾದ ತಂದೆಯವರಿಗೆ ನಮಸ್ಕರಿಸಿ, ಹೊರಟೆನು.

ಹುಬ್ಬಳ್ಳಿಯಲ್ಲಿ ನೋಡುವವರನ್ನು ನೋಡಿ, ಧಾರವಾಡಕ್ಕೆ ಬಂದು ಅಲ್ಲಿ ನಮ್ಮ ಸೋದರಮಾವನವರಾದ, ನಿವೃತ್ತ ಜಿಲ್ಲಾ ನ್ಯಾಯಾಧೀಶ, **ಶ್ರೀ ನಾಡಗೀರ ರಾಮನಾಥರಾಯರ** ಹರಕೆಯನ್ನು ಹೊತ್ತು ಬೆಳಗಾವಿಗೆ ಪ್ರಯಾಣ ಬೆಳೆಸಿದೆನು.

ಬೆಳಗಾವಿ ನನ್ನ ನಿಜವಾದ ಕಾರ್ಯರಂಗ ಸ್ಥಳ. ಬೆಳಗಾವಿಯ ಗೆಳೆಯರು, ಅಲ್ಲಿನ ವಿದ್ಯಾರ್ಥಿ ವಿದ್ಯಾರ್ಥಿನಿಯರು ಅದ್ಭುತವಾದ ಸ್ವಾಗತವನ್ನು ನೀಡಿದರು. ಅಮೇರಿಕೆಯ ಕನಸನ್ನು ಕಂಡಿದ್ದು ನಾನು ಬೆಳಗಾವಿಯಲ್ಲಿ. ಅದರ ಸವಿರೂಪು ಕೊಟ್ಟಿದ್ದು ಅಲ್ಲಿ. ಅದು ಕಾರ್ಯರೂಪವಾಗಿ ಹೋಗುವಾಗ ಬೆಳಗಾವಿಯ ಮೇಲೆ ನನಗೆಷ್ಟು ಅಭಿಮಾನ ಬರಬೇಡ! ಬೆಳಗಾವಿಯ ಗೆಳೆಯರ ಪೈಕಿ, ಮೂವರನ್ನು ಮರೆಯಲಾರೆ. ಕುಲಕರ್ಣಿ ಬಂಧುಗಳು ನನಗೆ ನೆರವಾಗದಿದ್ದರೆ, ಬೆಳಗಾವಿಯಲ್ಲಿ ನಾವು ನಮ್ಮ ಕನ್ನಡದ ಚಟುವಟಿಕೆಗಳನ್ನು ಮಾಡಲು ಸಾಧ್ಯವಿರಲಿಲ್ಲ. ಅವರೇ **ಶ್ರೀ ಆರ್. ಹೆಚ್. ಕುಲಕರ್ಣಿ, ಶ್ರೀ ವೆಂಕಟೇಶ ಕರಗುಪ್ಪಿ ಕುಲಕರ್ಣಿ, ಶ್ರೀ ಶ್ರೀನಿವಾಸ ಕುಲಕರ್ಣಿ.**

ಶ್ರೀ ಗೋಖಲೆ ಕೇಶವರಾಯರ ಅಧ್ಯಕ್ಷತೆಯಲ್ಲಿ ನನಗೆ ಸನ್ಮಾನ ಸಭೆ ನಡೆಯಿತು. ಬೆಳಗಾವಿಯ ಕಾಂಗ್ರೆಸ್ ಭವನ ಜನರಿಂದ ಕಿಕ್ಕಿರಿದು ತುಂಬಿತ್ತು. **ಶ್ರೀ ಜಯದೇವ ಕುಲಕರ್ಣಿ**, ಶ್ರೀ ಆರ್. ಹೆಚ್. ನನ್ನ

ಬಗ್ಗೆ ಮಾತನಾಡಿದರು. ಶ್ರೀ ಗೋಖಲೆ ಕೇಶವರಾಯರು ಬೆನ್ನು ತಟ್ಟಿದರು. ಬೆಳಗಾವಿಯ ಜನರ ಅಂತಃಕರಣ, ನಾನು ಎಂದೂ ಮರೆಯಲಾರೆ.

ಬೆಳಗಾವಿಯಿಂದ ಮರುದಿನ ಹೊರಟು, ಜನವರಿ ೨೨ನೇ ತಾರೀಖು ಬೆಳಿಗ್ಗೆ ನಾವು ಬೊಂಬಾಯಿ ಸೇರಿದೆವು. ನನ್ನ ಗೆಳೆಯ ಶ್ರೀ ಹಾರ ಹಳ್ಳಿ ರಾಮಸ್ವಾಮಿ ಬೆಳಗಾವಿಯಿಂದ ನನ್ನೊಡನೆ ಬೊಂಬಾಯಿಗೆ ಹೊರಟರು. ರೈಲ್ವೆ ನಿಲ್ದಾಣಕ್ಕೆ ನನ್ನ ಗೆಳೆಯರಾದ ಸಂಜೀವರಾಯರು ಬಂದಿದ್ದರು. ನೇರವಾಗಿ **ಕೃಷ್ಣಕುಂಜಕ್ಕೆ** ಹೊರಟೆವು. ಮರುದಿನ **ನೇತಾಜಿ ಸುಭಾಷ ಚಂದ್ರರ** ಹುಟ್ಟಿದ ದಿನವಿತ್ತು. ಬೊಂಬಾಯಿನಲ್ಲಿ ನಡೆದ ಅಂದಿನ ಸಭೆಯನ್ನು ಮುಗಿಸಿಕೊಂಡು ಕೆಲವು ಸಾಮಾನುಗಳನ್ನು ಕೊಂಡು, ಪ್ರಥಮ ಸಲ ಬೊಂಬಾಯಿಗೆ ಬಂದಿದ್ದ ಹಿರಿಯಣ್ಣನವರಿಗೆ ಬೊಂಬಾಯಿ ತೋರಿಸಿ, ಕಾಲ ಕಳೆದೆವು.

ನನಗಿನ್ನೂ ಮದರಾಸಿನಿಂದ ಅಮೇರಿಕನ್ ವೀಸಾನೇ ಬಂದಿರಲಿಲ್ಲ. ಅಮೇರಿಕನ್ ಎಕ್ಸ್‌ಪ್ರೆಸ್ ಕಂಪೆನಿಗೆ ಹೋಗಿ ವಿಚಾರಿಸಲಾಗಿ ಅಲ್ಲಿಯೂ ಬಂದಿರಲಿಲ್ಲ. ಹಡಗು ಹತ್ತಲು ಇನ್ನು ಮೂರೇ ದಿನಗಳಿತ್ತು. ಏನೂ ತೋಚದಾಯಿತು. ಸರಿ, ಸಂಜೀವನನ್ನು ವಿಮಾನದ ಮೂಲಕ ಮದರಾಸಿಗೆ ಕಳುಹಿಸಿ ವೀಸಾ ತರಿಸಬೇಕೆಂದು ನಿರ್ಧರಿಸಿದೆನು. ಸಂಜೀವನೂ ಹೋಗುವುದಾಗಿ ಒಪ್ಪಿದನು. ಆದರೆ ಅವನಿಗೆ ಅದೇ ಪ್ರಥಮ ವಿಮಾನ ಪ್ರಯಾಣ. ಮೊದಲು ಸ್ವಲ್ಪ ಹಿಂತೆಗೆದನಾದರೂ, ನನ್ನ ಮೇಲಿನ ವಿಶ್ವಾಸದಿಂದ ಹೋಗಲು ಒಪ್ಪಿದನು. ಇನ್ನೇನು ನಾವು ಅವನ ವಿಮಾನ ಪ್ರಯಾಣವನ್ನು ಗೊತ್ತುಮಾಡುವುದರಲ್ಲಿದ್ದೆವು. ಆಗ ಶೌರಿಯು ಬಂದು ನಮ್ಮನ್ನು ಕೂಡಿದನು. ನಮ್ಮ ಗಡಿಬಿಡಿಯನ್ನು ನೋಡಿ ಅವನು ಮರುದಿನದವರೆಗೆ ತಡೆಯಬೇಕೆಂದು ಸಲಹೆಯಿತ್ತನು. ಮರುದಿನ ಅಮೇರಿಕನ್ ವೀಸಾ ಅಮೇರಿಕನ್ ಎಕ್ಸ್‌ಪ್ರೆಸ್, ಕಚೇರಿಗೆ ಬಂದಿತ್ತು. ನಮ್ಮ ಗಾಬರಿ ತಣ್ಣಗಾಯಿತು. ಶೌರಿಯ ಸಲಹೆಯಿಂದ, ಶ್ರಮ ಕಡಿಮೆಯಾಯಿತು.

ಬೊಂಬಾಯಿ ಕರ್ನಾಟಕ ಸಂಘದಲ್ಲಿ ೨೪ನೇ ತಾರೀಖು ನನಗೊಂದು ಸನ್ಮಾನ ಸಭೆ ಇಟ್ಟಿದ್ದರು. ಧಾರವಾಡದ ಸುಪ್ರಸಿದ್ಧ ವಕೀಲರಾದ **ಶ್ರೀ ನಲವಡಿಯವರು** ಅಧ್ಯಕ್ಷರಾಗಿದ್ದರು. **ಶ್ರೀ ವಿ. ಎಂ. ಇನಾಂದಾರ್ ಶ್ರೀ ಇವಾರತಿ ಹನುಮಂತರಾಯರು, ಶ್ರೀ ವರದರಾಜ ಅದ್ಯರವರು, ಶ್ರೀ ಹೆಚ್. ಎಸ್ ಪಾಟೀಲರು,** ಸಭೆಯಲ್ಲಿ ಮಾತನಾಡಿದರು. ಅದೇ ನನ್ನ ಸನ್ಮಾನ ಸಭೆಗಳಲ್ಲಿ ಕೊನೇ ಸಭೆ. ಬೊಂಬಾಯಿ ಕನ್ನಡಿಗರು ಇತ್ತ ಸತ್ಕಾರಕ್ಕೆ ಅಭಿವಂದಿಸಿ, ಅಮೇರಿಕೆಯಲ್ಲೂ ಕನ್ನಡ ಪತಾಕೆಯನ್ನು ಹಾರಿಸುವೆನೆಂದು ತಿಳಿಸಿದೆನು. ನನ್ನ ಹೃದಯ ತುಂಬಿ ಬಂದಿತ್ತು. ಬೊಂಬಾಯಿ ಮಹಾ ನಗರ, ನನ್ನ ಸಾಹಸದ ಬೀಡಾಗಿದ್ದು, ನಾನು ಯೋಚಿಸಿದ ಯೋಜನೆಗಳ ತವರಾಗಿತ್ತು. ಅರಬ್ಬೀ ಸಮುದ್ರದ ದಂಡೆಯ ಮೇಲೆ ಕುಳಿತು ಭಾವನಾಪರವಶನಾಗಿ, ಕೆಲವು ಸಲ ಸ್ಫೂರ್ತಿಯನ್ನು ಪಡೆದದ್ದು. ಇನ್ನು ಕೆಲವು ಸಲ ನಿರಾಶೆಯನ್ನು ಹೋಗಲಾಡಿಸಿಕೊಂಡದ್ದು, ಮತ್ತೆ ಕೆಲವು ಸಲ ಶಾಂತತೆಯನ್ನು ಪಡೆದದ್ದು, ಬೊಂಬಾಯಿಯಲ್ಲಿಯೇ. ಆ ಸವಿ ನೆನಪು ಯಾವಾಗಲೂ ಅಲ್ಲಿ ಆಗುತ್ತಿತ್ತು.

ಈ ಸಂದರ್ಭದಲ್ಲಿ **ಕಾಮರ್ಸ್** ಪತ್ರಿಕೆಯ ಸಂಪಾದಕರಾದ **ಶ್ರೀ ಆರ್. ವೆಂಕಟೇಶಮೂರ್ತಿ**ಯವರನ್ನು ನಾನು ಮನಸಾರೆ ನೆನಸಿಕೊಳ್ಳುತ್ತೇನೆ. ನಾನು ಯಾವಾಗ ಬುದ್ಧಿವಾದ ಕೇಳಲು ಹೋದಾಗಲೂ, ಆದರದಿಂದ ಬರಮಾಡಿಕೊಂಡು ಸಲಹೆ ನೀಡುತ್ತಿದ್ದರು. ನನ್ನ ಅಮೇರಿಕಾ ಪ್ರವಾಸಕ್ಕೆ ಸ್ಫೂರ್ತಿ ತುಂಬಿದವರಲ್ಲಿ ಅವರೂ ಒಬ್ಬರು. ಅವರೂ ನನ್ನನ್ನು ಊಟಕ್ಕೆ ಕರೆದು ಸತ್ಕರಿಸಿದರು.

ಕೊನೆಗೂ ಬಂದೇ ಬಿಟ್ಟಿತು ಆ ದಿನ. ನಾನು ಅಮೇರಿಕೆಗೆ ಹೊರಡುವ ದಿನ. ನನ್ನ ಪ್ರಯಾಣದಲ್ಲಿ ಶುಭಕೋರಿ ನೂರಾರು ಪತ್ರಗಳು ಬಂದಿದ್ದುವು. **ಶ್ರೀ ರಂಗನಾಥ ದಿವಾಕರರು** ಮತ್ತು **ಶ್ರೀ ನಿಜಲಿಂಗಪ್ಪನವರು** ನವದೆಹಲಿಯಿಂದ ಪತ್ರ ಬರೆದು ನನ್ನನ್ನು ಆಶೀರ್ವದಿಸಿದ್ದರು. ಅಮೇರಿಕೆಯ

ರಾಯಭಾರಿಗಳಾದ **ಶ್ರೀ ಅಸಫ್ ಅಲ್ಲಿ**ಯವರಿಗೆ ಪರಿಚಯ ಪತ್ರ ಬರೆದು ಕಳುಹಿಸಿಕೊಟ್ಟಿದ್ದರು. ಮೈಸೂರಿನಿಂದ **ಶ್ರೀ ಕೆ. ಟಿ. ಭಾಷ್ಯಂ ಐಯ್ಯಂಗಾರ್ಯರು, ಶ್ರೀ ಕೆ ಸಿ. ರೆಡ್ಡಿ**ಯವರು, **ಶ್ರೀ ಗೊರೂರು ರಾಮಸಾಮಿ ಐಯ್ಯಂಗಾರ್ಯರು, ಶ್ರೀ ಎ. ಆರ್. ಕೃಷ್ಣಶಾಸ್ತ್ರಿ**ಗಳು, **ಶ್ರೀ ಎಸ್. ವಿ. ಕೃಷ್ಣಮೂರ್ತಿರಾಯರು** ಮುಂತಾದವರು ನನ್ನ ಪ್ರಯಾಣಕ್ಕೆ ಶುಭ ಕೋರಿ ಕಾಗದ ಬರೆದಿದ್ದರು. ಎಲ್ಲರಿಗೂ ಉತ್ತರವನ್ನು ಬರೆದು, ಅವರಿತ್ತ ಹರಕೆಗಳಿಗೆ ವಂದಿಸಿ, ಆಶೀರ್ವಾದವನ್ನು ಹೊತ್ತು ಅಮೇರಿಕೆಯತ್ತ ಪ್ರಯಾಣ ಮಾಡಲು ಹಡಗನ್ನೇರುವ ಸಿದ್ಧತೆಯಲ್ಲಿ ತೊಡಗಿದೆನು.

ಭಾರತಾದ್ಯಂತವೂ ನಡೆಯುತ್ತಿರುವ ಪವಿತ್ರವಾದ **ಸ್ವಾತಂತ್ರ್ಯ ದಿನಾಚರಣೆ**ಯ ದಿನವೇ ನಾನು ಅಮೇರಿಕೆಗೆ ಹೋಗಲು ಹಡಗು ಹತ್ತಿದೆ. ಸ್ವಾತಂತ್ರ್ಯ ಸುಧೆಯನ್ನು ಸವಿಯುತ್ತಿರುವ ನಾಡಾದ ಅಮೇರಿಕೆಗೆ ನಾನು ಹೊರಟೆ. ವ್ಯಕ್ತಿ ಸ್ವಾತಂತ್ರ್ಯ, ಪತ್ರಿಕಾ ಸ್ವಾತಂತ್ರ್ಯ ಉಚ್ಛ್ರಾಯ ಸ್ಥಿತಿಯಲ್ಲಿರುವ ಅಮೇರಿಕೆಯಲ್ಲಿ ನಾನು ಪತ್ರಿಕಾ ವ್ಯವಸಾಯದ ಬಗ್ಗೆ ಉಚ್ಚ ಶಿಕ್ಷಣ ಹೊಂದಲು ಒಂದು ವಿಶೇಷ ಜವಾಬ್ದಾರಿಯನ್ನು ಹೊತ್ತೇ **ಸಾಗರದಾಚೆ** ನಾನು ಸಾಗಿದ್ದೆ.

ನನ್ನ ಕಣ್ವಾಶ್ರಮವಾಗಿದ್ದ ಕೃಷ್ಣಕುಂಜವನ್ನು ಬಿಟ್ಟು ಬರುವಾಗ ನನಗದೆಷ್ಟು ವ್ಯಥೆಯಾಯಿತೋ ! ಗೆಳೆಯ ಸಂಜೀವ ನನ್ನ ಕನಸಿಗೆ ಕಾವು ಕೊಟ್ಟು ತನಿ ಎರೆದಿದ್ದ. ಅಮೇರಿಕೆಯ ಪ್ರವಾಸದ ಕಾರ್ಯಕ್ರಮ, ಸಿದ್ಧತೆ ಮಾಡಿಕೊಂಡ ಕಾರ್ಯಭೂಮಿ ಅದಾಗಿತ್ತು. ಕೃಷ್ಣಕುಂಜ ನನ್ನ ಸಾಧನ ಮಂಟಪವಾಗಿತ್ತು. ಸಂಜೀವ ಮತ್ತು ಶೌರಿ ನನ್ನ ಎರಡೂ ಕಣ್ಣು ಆಗಿದ್ದರು. ಕೈದೀವಿಗೆಯನ್ನವರು ಹಿಡಿದು ತೋರಿದತ್ತ ನಡೆಯುತಲಿದ್ದ ವಿಧಿಯ ಕೈ ಗೊಂಬೆ ನಾನಾಗಿದ್ದೆ.

ಕೃಷ್ಣಕುಂಜದಲ್ಲಿ ನನಗಾಗಿ ಹಬ್ಬ, ಸಂಭ್ರಮವೇ ಸಂಭ್ರಮ. ಸಂಜೀವ, ಗೆಳೆಯ **ಲಕ್ಷ್ಮಣರಾಯರು** ಸಂಪೂರ್ಣ ಅಡುಗೆಯ ಭಾರವನ್ನು

ಹೊತ್ತು ನನಗೆ ಇಷ್ಟ ಬರುವ ಪದಾರ್ಥಗಳನ್ನೇ ಮಾಡಿದ್ದರು. ನೀರುಳ್ಳಿ ಹುಳಿ, ಟೊಮಾಟೋ ಮೊಸರು ಭಜ್ಜಿ, ಕೋಸುಗಡ್ಡೆಯ ಪಲ್ಯ, ನಿಂಬೆ ಕಾಯಿಯ ಉಪ್ಪಿನಕಾಯಿ, ಇಂದು ಎಂದಿಗಿಂತ ರುಚಿಯಾಗಿದ್ದುವು. ಸಂಜೀವ ಖುದ್ದು ನನ್ನ ಎದುರಿಗೇ ಕುಳಿತು ಬಡಿಸಿ, ನಾನು ಊಟಮಾಡು ವುದನ್ನು ನೋಡಿ ಸಂತೋಷಪಟ್ಟ. ನನ್ನ ಊಟ ಸ್ವಲ್ಪ ಭರ್ಜರಿಯೇ. ಅಂದಿನ ಊಟಕ್ಕೆ ಆತ್ಮೀಯತೆಯ, ಅಂತಃಕರಣ ಅಗಲಿಕೆಯ ಅಚ್ಚ ಕಳೆ ಬಂದಿತ್ತು. ನನ್ನ ಬೊಂಬಾಯಿನ ಏಳೆಂಟು ಗೆಳೆಯರು ಆ ದಿನ ಕಾಂಡಿ ವಿಲಿಗೆ ಬಂದಿದ್ದರು. ಬಹಳ ತಮಾಷೆಯಾಗಿ ನಾವೆಲ್ಲರೂ ಕುಳಿತುಕೊಂಡು ಊಟ ಮಾಡಿದೆವು. ಆ ದಿನ ಪುನಃ ಬಂದೀತೆ? ಕಳೆದ ದಿನವು ಮರಳಲುಂಟೇ ?

ನನ್ನ ವಿದ್ಯಾರ್ಥಿ ಕಾಂಗ್ರೆಸ್ಸಿನ ಸಹಪಾಟಿ, ಹಾರ್ನಹಳ್ಳಿ ರಾಮಸ್ವಾಮಿ. ಬೊಂಬಾಯಿಗೆ ಬಂದಂದಿನಿಂದ ಮೂಕನೇ ಆಗಿಬಿಟ್ಟಿದ್ದ. ನಾವಿಬ್ಬರೂ ಬೆಳಗಾವಿಯಲ್ಲಿ "**ಕನ್ನಡದ ಮೈಸೂರು ತುಂಟ**"ರ ಗುಂಪಿಗೆ ಸೇರಿದ ಜೋಡಿ. ನಾನಿಲ್ಲದ ಒಂಟಿ ರಾಮು ಬೆಳಗಾವಿಗೆ ತಿರುಗಬೇಕಾಗಿತ್ತು. ಆತ ಕೊಂಚ ಹಾಗಿದ್ದದ್ದು ಏನೂ ಆಶ್ಚರ್ಯವಿಲ್ಲ.

ಶೌರಿ, ತುಂಬು ಉತ್ಸಾಹದಿಂದ, ನಗುನಗುತ್ತಾ, ನನ್ನನ್ನು ಹಾಸ್ಯ ಮಾಡುತ್ತಾ, ಕೆಲವೊಂದು ವೇಳೆ ಗಂಭೀರವಾಗಿ ನನಗೆ ಆಗಾಗ್ಯೆ ಕೆಲವು ಸಲಹೆಗಳನ್ನೀಯುತ್ತಾ, ಚುರುಕು ಮಾತಿನಿಂದ ನೆರೆದ ಗೆಳೆಯರನ್ನು ನಗಿ ಸುತ್ತಾ, ನಮ್ಮ ಗುಂಪಿಗೇ ಕಳೆ ಕಟ್ಟಿದ್ದ. ಆದರೂ ಆತನ ಕಣ್ಣುಗಳಲ್ಲಿ 'ಅಗಲಿಕೆ' ಕಾಣಿಸುತ್ತಿತ್ತು. ಆತ ಹೊರಗೆ ಆ ತರಹ ಎಂದೂ ತೋರಿಸಿ ಕೊಳ್ಳುವ ವ್ಯಕ್ತಿಯಲ್ಲ, ಆ ಗಂಭೀರ ಜೀವ. ತುಂಬಾ ಆತ್ಮೀಯ ಗೆಳೆಯರ ಬಗ್ಯೆ ಮಾತನಾಡುವಾಗ ಲೇಖನಿ ಓಡುವುದಿಲ್ಲ. ಒಂದು ಕ್ಷಣ, ಆತ ನನ್ನ ಆತ್ಮೀಯ ಗೆಳೆಯನೆಂಬುದನ್ನು ಮರೆತು, ಹೇಳುವುದಾದರೆ, ಆತ "**ತುಂಬಿದ ಕೊಡ**".

## ಸಾಗರದಾಚೆ

ನನ್ನ ಹಿರಿಯಣ್ಣ, **ರಾಘಣ್ಣ,** ನಮ್ಮ ಮನೆಯವರ ಪರವಾಗಿ ಬೀಳ್ಕೊಡಲು ಬಂದಿದ್ದರು. ಅವರಂತೂ ಮಾತು ಬಾರದ ಮೂಕರಾಗಿದ್ದರು. ಅವರು ಬೊಂಬಾಯಿಗೆ ಬಂದದ್ದೇ ಹೊಸದು. ನನ್ನ ಗೆಳೆಯರಬಳಗ ಕಂಡು ಅವರು ಚಕಿತರಾಗಿದ್ದರು.

ಮಧ್ಯಾನ್ಹ ೧೨ ಘಂಟೆಗೆ ಕೃಷ್ಣಕುಂಜ ಬಿಟ್ಟು, ಕಾಂಡಿವಿಲಿಯಿಂದ ರೈಲುಹತ್ತಿ, ನಮ್ಮ ಹಡಗು ನಿಂತ ನಿಲ್ದಾಣವಾದ **"ಬ್ಯಾಲರ್ಡ್ ಪೀರ್"**ಗೆ (Ballard Pier) ನಾವು ಬಂದಾಗ ೧ ಘಂಟೆ ಆಗಿ ೩೦ ನಿಮಿಷ ಸರದಿತ್ತು. ಬಂದೊಡನೆಯೇ ನನ್ನ ಸಾಮಾನಿನ ತೂಕವಾಗಿ, ನನಗೆ ತೆಗೆದುಕೊಂಡು ಹೋಗಲು ೩೦೦ ಪೌಂಡು ಭಾರ ಅವಕಾಶವಿದೆ ಎಂದು ತಿಳಿಸಲಾಯಿತು. ಆದ್ದರಿಂದ ಹೆಚ್ಚಿಗೆ ಲಗ್ಗೇಜ್ ಮಾಡಿಸಿ ಹಣಕೊಡುವ ಪ್ರಮೇಯ ಬರಲಿಲ್ಲ.

ಇಂದು ಹಡಗೇರಿದ ನಾವೆಲ್ಲಾ ನೇರವಾಗಿ ಅಮೇರಿಕಕ್ಕೆ ಹೋಗುವವರೇ ಇದ್ದೆವು. ನಮ್ಮೆಲ್ಲರ ವೈದ್ಯ ಪರೀಕ್ಷೆಯು ೨ ಘಂಟೆಗೆ ಪ್ರಾರಂಭವಾಯಿತು. ಸರದಿ ಪ್ರಕಾರ ನಮ್ಮ ಪರೀಕ್ಷೆ. ನಾನು ಮೊದಲೇ ಬಂದಿದ್ದುದರಿಂದ ೧೫ ನೇಯವನಾಗಿದ್ದೆ. ಕಾಲರಾ, ಟೈಫಾಯಿಡ್, ವ್ಯಾಕ್ಸಿನೇಷನ್, ಸರ್ಟಿಫಿಕೆಟ್ಟುಗಳನ್ನು ನೋಡಿ ಬಿಟ್ಟು ಬಿಟ್ಟರು. ನಾನು ಟೈಫಾಯಿಡ್ ಇನಾಕ್ಯುಲೇಶನ್ ಹಾಕಿಸಿಕೊಂಡ ಸರ್ಟಿಫಿಕೆಟ್ ತಂದೇ ಇರಲಿಲ್ಲ. ನಾನು ತಂದಿಲ್ಲವೆಂದು ಬರೆದುಕೊಂಡು ನಂತರ ನನ್ನ ಪ್ಯಾಸ್‌ಪೋರ್ಟ್ ಮತ್ತು ಅಮೇರಿಕನ್ ವೀಸಾ ಪರೀಕ್ಷೆ ಮಾಡಿದರು. ಪೋಲೀಸ್ ಸರ್ಟಿಫಿಕೇಟ್ ಬೇರೆ ಬೇಕಾಗಿತ್ತು. ನಾನು ಆಗಿನ್ನೂ ಸಂಸ್ಥಾನದ ಪ್ರಜೆಯಾಗಿದ್ದುದರಿಂದ ಅದನ್ನು ತಂದಿರಲಿಲ್ಲ. ಪರೀಕ್ಷೆ ನಡೆಸುತ್ತಿದ್ದ ಅಮೇರಿಕನ್ ವೈಸ್ ಕಾನ್ಸಲ್ ಪೋಲೀಸ್ ಸರ್ಟಿಫಿಕೆಟ್‌ಗೆ ಹೆಚ್ಚು ಗಮನಕೊಡದೆ ವೀಸಾ ನೋಡಿ ನನ್ನ ಕಾಗದಗಳಿಗೆಲ್ಲಾ ರುಜು ಹಾಕಿ ನನಗೆ ಹಡಗುಹತ್ತಲು ಅಪ್ಪಣೆ ಕೊಟ್ಟರು. ನಂತರ ತೆರಿಗೆಯ ಕಚೇರಿಯವರಿಂದ ನನ್ನ ಸಾಮಾನುಗಳ ಪರೀಕ್ಷೆ ನಡೆಯಿತು. ಸಾವಿರ ಪ್ರಯಾಣಿಕರ ಸಾಮಾನುಗಳನ್ನು

## ಕನಸು-ನನಸು

ನಾಲ್ಕಾರು ಘಂಟೆಗಳಲ್ಲಿ ಐದಾರು ನೌಕರರು ಪರೀಕ್ಷಿಸಲು ಸಾಧ್ಯವೇ? ಒಂದೊಂದು ಪೆಟ್ಟಿಗೆಯನ್ನು ಬಾಗಿಲು ತೆಗೆಸಿ ನೋಡಿ, ಎಲ್ಲ ಸಾಮಾನು ಗಳನ್ನು ನಂಬಿಕೆಯ ಮೇಲೆ ಬಿಟ್ಟು ಬಿಡುತ್ತಿದ್ದರು. ಅಕಸ್ಮಾತ್ ಏನಾ ದರೂ ಇದ್ದರೂ, ಸಣ್ಣದಕ್ಕೆ ಹೆಚ್ಚು ಗಮನವೀಯುತ್ತಿರಲಿಲ್ಲ.

ನನ್ನ ಸಾಮಾನುಗಳಲ್ಲಿ ಕರಹಾಕುವುದೇನೂ ಇರಲಿಲ್ಲ. ಆದರೆ ನಾನಿಟ್ಟುಕೊಂಡಿದ್ದ **ರಾಷ್ಟ್ರೀಯ ತ್ರಿವರ್ಣ ಧ್ವಜ**ವನ್ನು ಎಲ್ಲಿ ಕಿತ್ತುಕೊಳ್ಳು ವರೋ ಎಂಬ ಭಯವಿತ್ತು. ಆಗಿನ್ನೂ ಭಾರತಕ್ಕೆ ಪೂರ್ಣ ಸ್ವಾತಂತ್ರ್ಯ ಬಂದಿರಲಿಲ್ಲ. ಕಾರಣ ಆ ಬಗ್ಗೆ ಯೋಚನೆ ಮಾಡಬೇಕಾಗಿತ್ತು. ಆದರೆ ನನಗೆ ಭಯವಾಗುವ ಸಂಭವ ಬರಲಿಲ್ಲ. ಇಷ್ಟೊತ್ತಿಗೆ ಗಂಟೆ ಐದಾಗಿತ್ತು.

ನಮ್ಮಣ್ಣ, ಶೌರಿ, ಸಂಜೀವ, ರಾಮು, ಎಲ್ಲರೂ ನನ್ನನ್ನು ಆಲಂಗಿಸಿ ಬೀಳ್ಕೊಟ್ಟರು. ನಮ್ಮಣ್ಣನಿಗೆ ಅಗಲಿಕೆಯ ದುಃಖ ತಡೆಯಲಾಗಲಿಲ್ಲ. ಗದ್ಗದ ಕಂಠದಿಂದ 'ಹೋಗಿಬಾ ಜೋಕೆ', ಎನ್ನುವ ಮಾತು ಕೇಳಿಸಿತು. ಅಂತಃಕರಣ ಉಕ್ಕಿ ಬಂದುದು ಅಸಹಜವೇನೂ ಅಲ್ಲ. ಶೌರಿ ಕೈಮುಂದು ಮಾಡಿ, **"ಜೈಹಿಂದ್"** ಎಂದು ಘೋಷಿಸಿದ. ರಾಮು, ಸ್ಫೂರ್ತಿಯಲ್ಲಿ **"ಜೈ ಕರ್ನಾಟಕ"** ಎಂದ. ನಾನು ಕೂಗಿಗೆ **"ಓ"** ಕೊಟ್ಟೆ. ಅವರೆಲ್ಲರೂ ತೆರಳಿದರು. ನಾನು ನನ್ನ ಹೊಸ ಜೀವನದ ಸವಿ ಅನುಭವಿ ಸಲು ಹಡಗಿನ ಏಣಿಯನ್ನು ಹತ್ತಿದೆನು.

ಆನವಟ್ಟಿಯಲ್ಲಿ ನಾನು ಲೋಯರ್ ಸೆಕೆಂಡರಿ ಪರೀಕ್ಷೆಗೆ ಓದುತ್ತಿ ದ್ದಾಗ ಬಿದ್ದ ಕನಸು, ಬೆಳಗಾವಿಯಲ್ಲಿ ನೆನಪಾಗಿ, ಬೊಂಬಾಯಿಯಲ್ಲಿ ನನ ಸಾಗಿ, **"ನನ್ನ ಕನಸು ಅಂತೂ ನನಸಾಯಿತು"** ಎಂದು ಹೇಳಿಕೊಳ್ಳುತ್ತಾ ಸಂಭ್ರಮದಿಂದ ಹಡಗನ್ನೇರಿದನು.

---

# ಹಡಗಿನ ದಿನಚರಿ

೨೬--೧--೪೭

**ಬ್ಯಾಲರ್ಡ್ ಪೀರ್,ಬೊಂಬಾಯಿ.**

ನಾನು ಹತ್ತಿದ ಹಡಗಿನ ಹೆಸರು ಎಸ್. ಎಸ್. ಮೆರೀನ್ ಲ್ಯಡರ್ ಎಂದು. ಅಮೇರಿಕಾದವರು ಯುದ್ಧಕಾಲದಲ್ಲಿ, ರಣರಂಗಕ್ಕೆ ಸೈನಿಕರನ್ನು ರವಾನಿಸಲು ಕಟ್ಟಿದ ಹಡಗು. ಅವರ ಅನುಕೂಲಕ್ಕೆ ತಕ್ಕಂತೆ ಆ ಹಡಗನ್ನು ನಿರ್ಮಿಸಲಾಗಿತ್ತು. ಯುದ್ಧಾನಂತರ ಆ ಹಡಗನ್ನೇ ಪ್ರವಾಸಿಕರ ಅನುಕೂಲಕ್ಕೆ ಉಪಯೋಗಿಸುತ್ತಿದ್ದರು.

ಹಡಗನ್ನು ಹತ್ತಿದ ಕೂಡಲೆ, ಹಡಗಿನ ಸೇವಕನೊಬ್ಬ ಬಂದು ನನ್ನ ಜೊತೆಗೆ ಇಟ್ಟುಕೊಳ್ಳಲು ತಂದ ಸಾಮಾನುಗಳನ್ನು ಎತ್ತಿಕೊಂಡು ನನ್ನನ್ನು ನನ್ನ **ಕ್ಯಾಬಿನ್** (Cabin)ಗೆ ಕರೆದುಕೊಂಡು ಹೋದನು. ನನ್ನ ಉಳಿದ ಸಾಮಾನುಗಳನ್ನು ಇತರರ ಸಾಮಾನುಗಳೊಂದಿಗೆ ಹಡಗಿನ ಗಡಂಗಿನೊಳಗೆ ಹಾಕಿದ್ದರು. ಅವು ಇವೆಯೋ ಇಲ್ಲವೋ, ಎಂಬುದು ನನಗೆ **ಸ್ಯಾನ್‌ಫ್ರಾನ್ಸಿಸ್ಕೋ**ನಲ್ಲಿಯೇ ತಿಳಿಯುವುದಾಗಿತ್ತು.

ನನ್ನ ಕ್ಯಾಬಿನ್ನಿನ ನಂಬರು **೨೫೪.** ನನ್ನ ಬರ್ತ್ (Berth) ನಂಬರು **೧೮.** ಈ ನಂಬರು ನೋಡಿದ ಕೂಡಲೇ ನನಗೆ ಸೆರೆಮನೆಯಲ್ಲಿ ಖೈದಿಗಳಿಗೆ ನಂಬರು ಕೊಡುವುದು ಜ್ಞಾಪಕ ಬಂದಿತು. ನಮ್ಮ ಕ್ಯಾಬಿನ್ನಿನಲ್ಲಿ ಸುಮಾರು ೨೦ ಜನರಿಗೆ ಇರಲು ಅನುಕೂಲವಿತ್ತು. ಹಡಗಿನಲ್ಲಿ ಜೀವನ ನಡೆಸುವ ಮಟ್ಟಿಗೆ ಜಾಗ ಪ್ರಶಸ್ತವಾಗಿಯೇ ಇತ್ತು ಎಂದು ಹೇಳಬಹುದು. ನಮ್ಮ ಬರ್ತ್‌ನಲ್ಲಿ ಹಾಸಿಗೆಯನ್ನು ಹಾಸಿ, ಎರಡು ಟವಲ್ಲುಗಳನ್ನು ಇಟ್ಟಿದ್ದರು. ಹಡಗಿನವರೇ ಇಲ್ಲಿ ಎಲ್ಲ ಪ್ರಯಾಣಿಕರಿಗೂ ಹಾಸಿಗೆಯನ್ನು ಒದಗಿಸಿ ಕೊಡುತ್ತಾರೆ. ಆದ್ದರಿಂದ ನಾನು ತಿಳಿಯದೆ, ತೆಗೆದುಕೊಂಡು ಹೋಗಿದ್ದ ನನ್ನ ಹಾಸಿಗೆಯನ್ನು ಅಲ್ಲಿಯೇ ಸುತ್ತಿಟ್ಟು ಅದನ್ನು ಗಡಂಗಿಗೆ ಸೇರಿಸಿಬಿಟ್ಟೆನು. ಪ್ರಯಾಣಿಕರು ಬಂದು ತಮ್ಮ ತಮ್ಮ ಜಾಗೆಯನ್ನು ಆರಿಸಿಕೊಂಡು ತಾತ್ಕಾಲಿಕವಾಗಿ ಅಲ್ಲಿ ನೆಲೆಸುವ ಗದ್ದಲ ನಡೆದಿತ್ತು.

## ಹಡಗಿನ ದಿನಚರಿ

ಈ ಹಡಗಿನಲ್ಲಿ ಪ್ರಯಾಣಿಕರಿಗೆ ಮೂರು ಬೇರೆಬೇರೆ ತರಗತಿಗಳಿದ್ದುವು. ಮೊದಲನೆಯ ತರಗತಿಯ ಪ್ರಯಾಣಿಕರು ಬೊಂಬಾಯಿನಿಂದ ಸ್ಯಾನ್‌ಫ್ರಾನ್‌ಸಿಸ್ಕೋಗೆ ಹೋಗಲು ೨೧೦೦ ರೂಪಾಯಿಗಳನ್ನು ಕೊಡಬೇಕಿತ್ತು. ಅದಕ್ಕೆ ತಕ್ಕಂತೆ ಅನುಕೂಲಗಳೂ ಇದ್ದವು. ವಾಸಕ್ಕೆ ಪ್ರತ್ಯೇಕವಾಗಿ ಕೊಠಡಿ. ರುಚಿರುಚಿಯಾದ ಹೊಸ ಆಹಾರ, ವಾಸ, ನೀರಿನಮೇಲಿರುವ ಕೊಠಡಿಗಳಲ್ಲಿ. ಆದ್ದರಿಂದ ಯಾವಾಗಲೂ ಹೊಸಗಾಳಿ ಸೇವನೆಯಾಗುತ್ತಿತ್ತು. ಎರಡನೆ ಮತ್ತು ಮೂರನೆ ತರಗತಿಯ ಕೊಠಡಿಗಳು ನೀರಿನಲ್ಲಿ ಮುಳಗಿದ್ದವು. ನಮಗೆ ಕೃತಕವಾದ ಗಾಳಿ ಬರುತ್ತಿತ್ತು. ಎರಡನೆಯ ತರಗತಿಯ ಪ್ರಯಾಣಿಕರ ಪ್ರವಾಸದ ಖರ್ಚು ೧೭೨೨ ರೂಪಾಯಿ. ಈ ಪ್ರಯಾಣಿಕರಿಗೆ, ಮೊದಲನೆಯವರಿಗಿಂತ ಆಹಾರದಲ್ಲಿ ವಿಧಗಳು, ರುಚಿ ಕಡಿಮೆ. ಮೂರನೆಯ ತರಗತಿಯವರಿಗೆ ಸಾದಾ ಆಹಾರ. ಹಡಗಿನ ಕೆಳಗೆ ಪಾತಾಳದಲ್ಲಿ ಅವರ ವಾಸ.

ಎಲ್ಲಾ ತರಗತಿಯ ಪ್ರಯಾಣಿಕರೂ ಬೆಳಗಿನಿಂದ ಹಿಡಿದು ಸಂಜೆಯವರೆಗೂ ಹಡಗಿನ ಮೇಲ್ಭಾಗ (Deck) ದಲ್ಲಿಯೇ ಇರುವುದು ವಾಡಿಕೆ. ರಾತ್ರಿ ಮಾತ್ರ ಮಲಗಲು ತಮ್ಮ ತಮ್ಮ ಕೊಠಡಿಗಳಿಗೆ ಹೋಗುತ್ತಾರೆ.

ಹಡಗಿನಲ್ಲಿ ಸಂಜೆ ೬ ಘಂಟೆಗೇನೇ ಊಟ. ಹಡಗಿನಲ್ಲಿರುವ ಮೂರು ಬೇರೆ ಬೇರೆ ತರಗತಿಗಳಿಗೂ ಬೇರೆ ಬೇರೆ ಊಟದ ಮನೆಗಳಿದ್ದು, ಆಹಾರವೂ ಸಹಿತ ಬೇರೆಬೇರೆಯಾಗಿರುತ್ತದೆ. ಅಡುಗೆ ಮನೆಯ ಮೇಲ್ವಿಚಾರಕ ಕಾಲಕ್ಕೆ ಸರಿಯಾಗಿ ಗಂಟೆ ಹೊಡೆದ ಕೂಡಲೇ ಗಂಡಸರು, ಹೆಂಗಸರು ಆದಿಯಾಗಿ ಎಲ್ಲರೂ ಹೋಗಬೇಕು. ಮಾಂಸಾಹಾರಿಗಳೂ ಶಾಖಾಹಾರಿಗಳೂ ಒಂದೇ ಕಡೆ ಕುಳಿತು ಊಟಮಾಡಬೇಕು. ಆದರೆ ಒಂದೊಂದು ಟೇಬಲ್ಲಿನ ಮೇಲೆ ಶಾಖಾಹಾರಿಗಳಿಗೂ, ಮಾಂಸಾಹಾರಿಗಳಿಗೂ ಬೇರೆ ಬೇರೆ ಬಡಿಸುತ್ತಾರೆ. ಮೈಸೂರಿನ ಕೆಲಸರಾದ ನಾವು ಶಾಖಾಹಾರದ ಟೇಬಲ್ಲನ್ನೇ ತೆಗೆದುಕೊಂಡು, ಬರೀ ಶಾಖಾಹಾರದ ಪದಾರ್ಥಗಳನ್ನೇ ಬಡಿಸಿಕೊಳ್ಳುತ್ತಿದ್ದೆವು. ರೇಷನ್ ಊಟ ಮಾಡುತ್ತಿದ್ದ ನಮಗೆ ಅಲ್ಲಿ ಕೊಟ್ಟ ಊಟ

ಉಂಡುನೋಡಿ ಆಶ್ಚರ್ಯವಾಯಿತು. ಒಬ್ಬೊಬ್ಬರಿಗೆ ಕೊಡುವ ಊಟ ನಾಲ್ಕು ಜನರಿಗಾಗುವಷ್ಟು ಇರುತ್ತಿತ್ತು. ನಮಗೆ ಕೊಡುತ್ತಿದ್ದ ಆಹಾರದ ವಿವರ ಈ ರೀತಿ ಇರುತ್ತಿತ್ತು. ಅನ್ನ, ಬೇಯಿಸಿದ ಆಲೂಗಡ್ಡೆ, ಬಟಾಣಿ, ಬೆಣ್ಣೆ, ಗೋಧಿಯ ರೊಟ್ಟಿ (Bread), ಜಾಮ್ ಬಿಸ್ಕತ್ತು, ಎಪ್ರಿಕಾಟ್ ಹಣ್ಣು, ಟೊಮಾಟೊ ರಸ, ಚೀಸ್, ಐಸ್‌ಕ್ರೀಮ್, ಕಿತ್ತಳೆ ಹಣ್ಣು, ಅಥವಾ ಸೇಬು ಹಣ್ಣು, ಈ ರೀತಿಯಾಗಿ ಇನ್ನೂ ನಾನಾ ವಿಧವಾದ ಆಹಾರಗಳಿಂದ ಕೂಡಿತ್ತು. ಪ್ರತಿ ಊಟಕ್ಕೂ ಕಾಫಿ ಅಥವಾ ಚಹಾ ಇದ್ದೇ ಇರುತ್ತಿತ್ತು.

ನಮಗೆ ದಿನವೂ ಬಡಿಸುತ್ತಿದ್ದ ಬಟ್ಲರನ ಹೆಸರು, **ಮಿ|| ಚಾರ್ಲ್ಸ್** (Mr. Charles) ಎಂದು. ಆತ ಬಹು ಶ್ರದ್ಧೆಯಿಂದ ನಮ್ಮೆಲ್ಲರನ್ನೂ ನೋಡಿಕೊಳ್ಳುತ್ತಿದ್ದ. ನಾವು ಶಾಖಾಹಾರಿಗಳೆಂದು ತಿಳಿದ ಮೇಲಂತೂ ಆತ ನಾವು ದಿನವೂ ಉಪವಾಸ ಮಾಡುತ್ತಿದ್ದೇವೆಂದು ತಿಳಿದು, ಹಾಲು ಹಣ್ಣುಗಳನ್ನು ಜಾಸ್ತಿಯಾಗಿ ಕೊಟ್ಟು ಸಮೃದ್ಧಿ ಮಾಡುತ್ತಿದ್ದ. ನಾವು ಊಟಕ್ಕೆ ಬಂದ ಕೂಡಲೇ ಆತ, 'I have specially kept all Vegetarian dishes for you,' (ನಿಮಗಾಗಿ ನಾನು ಬರೀ ಶಾಖಾಹಾರದ ಪದಾರ್ಥಗಳನ್ನೇ ಇಟ್ಟಿದ್ದೇನೆ) ಎಂದು ಹೇಳುತ್ತಿದ್ದ.

ಸಂಜೆ ಊಟ ಮಾಡಿಕೊಂಡು, ಬಲು ಆಯಾಸವಾಗಿದ್ದರಿಂದ ನಮ್ಮ ಕ್ಯಾಬಿನ್‌ಗೆ ಬಂದು ಮಲಗಿಬಿಟ್ಟೆ. ನಾವು ೨೬ಕ್ಕೆ ಹಡಗು ಹತ್ತಿದರೂ, ಅಂದು ಹಡಗು ಹೊರಡಲಿಲ್ಲ. ಹಡಗು ಹೊರಟದ್ದು ಮರುದಿನ ಸಂಜೆಯೇ.

೨೭-೧-೧೯೪೭

**ಬ್ಯಾಲರ್ಡ್ ಪೀರ್,** ಬೊಂಬಾಯಿ.

ಬೆಳಗ್ಗೆ ಜಾಗ್ರತೆ ಎಚ್ಚರವಾಯಿತು. ಹಡಗಿನ ರಾಜ್ಯವೇ ಒಂದು ವಿಧ. ಇಲ್ಲಿಯ ಜೀವನವೇ ಒಂದು ರೀತಿ. ಪ್ರಥಮವಾಗಿ ಪ್ರಾತರ್ವಿಧಿ ಪ್ರಾರಂಭವಾಯಿತು. ಇದು ಸೈನಿಕರಿಗಾಗಿ ಕಟ್ಟಲ್ಪಟ್ಟ ಹಡಗು. ಸುಮಾರು ನಲವತ್ತು ಕಕ್ಕಸುಗಳಿದ್ದುವು. ಆದರೆ ಒಂದಕ್ಕೂ ಬಾಗಿಲುಗಳೇ ಇರಲಿಲ್ಲ.

ಎಲ್ಲರೂ ಕಕ್ಕಸು ಮಾಡಲು ಎದುರು ಬದುರು ಕುಳಿತುಕೊಳ್ಳಬೇಕಾಗಿತು. ಇಂಗ್ಲೀಷ್ ರೀತಿಯ ಕಕ್ಕಸುಗಳಾದ್ದರಿಂದ ಯಾವ ಭಯವೂ ಇರಲಿಲ್ಲ. ಆದರೂ ಅನೇಕ ಭಾರತೀಯರಿಗೆ ಇದು ಸ್ವಲ್ಪ ಅಸಹ್ಯವೇ ಆಯಿತು. ಉಳಿದವರು ಏಳುವುದಕ್ಕಿಂತ ಮುಂಚೆಯೇ ಎದ್ದು ಈ ಪ್ರಾತರ್ವಿಧಿಯನ್ನು ನಾವು ತೀರಿಸಿಕೊಳ್ಳಬೇಕಾಗಿತ್ತು.

ಇಲ್ಲಿಯ ಸ್ನಾನ ಗೃಹಗಳೂ ಅದೇ ರೀತಿಯ ಬಹಿರಂಗ ಸ್ಥಳಗಳಾಗಿದ್ದುವು. ಮರೆ ಎಂಬುದೇ ಇಲ್ಲಿ ಇದ್ದಂತೆ ಕಾಣಲಿಲ್ಲ. ಅದೊಂದು ಬಿಟ್ಟು ಉಳಿದ ಅನುಕೂಲಗಳು ಬಹಳ ಚೆನ್ನಾಗಿದ್ದುವು. ಪ್ರತಿಯೊಂದು ಸ್ನಾನ ಗೃಹದ ಮುಂದೂ, ಒಂದೊಂದು ಕನ್ನಡಿ, ಹಲ್ಲುಜ್ಜಿಕೊಳ್ಳಲು ಬೇಸಿನ್, ಮುಂತಾದುವು ಇದ್ದುವು. ಕ್ಷೌರ ಮಾಡಿಕೊಳ್ಳಲು ಇಲ್ಲೇ ಅನುಕೂಲವಿತ್ತು. ಹಡಗು ಹತ್ತಿದ ಕೂಡಲೆ ಫರಂಗಿ ಪದ್ಧತಿ ಅನುಸರಿಸಿದ ಕೆಲವರು, ನಾಲ್ಕು ದಿನಕ್ಕೊಮ್ಮೆ ಕ್ಷೌರ ಮಾಡಿಕೊಳ್ಳುತ್ತಿದ್ದವರು, ಇಲ್ಲಿ ದಿನವೂ ಮಾಡಿಕೊಳ್ಳಲು ಪ್ರಾರಂಭಿಸಿದರು.

ಹಡಗಿನ ಪ್ರಯಾಣಿಕರು ಜಾಸ್ತಿ ಇದ್ದುದರಿಂದ ದಿನವೂ ಬೆಳಗಿನ ಫಲಹಾರಕ್ಕೆ, (Break fast) ಮಧ್ಯಾಹ್ನದ ಊಟಕ್ಕೆ (Lunch) ಮತ್ತು ರಾತ್ರಿಯ ಭೋಜನಕ್ಕೆ (Dinner) ಎರಡೆರಡು ಸರ್ತಿ ಕೂಡಬೇಕಾಗಿತ್ತು. ನಮ್ಮ ಸರದಿ ಎರಡನೆಯ ಸರದಿಯಲ್ಲಿ.

ಇಂದು ಬೆಳಿಗ್ಗೆ ಪ್ರಥಮ ಬೆಳಗಿನ ಫಲಾಹಾರದ ಅನುಭವವಾಯಿತು. ಮೇಜಿನ ಮೇಲೆ ಆಹಾರ ಮತ್ತು ಪಾನೀಯಗಳೇನೋ ಹೇರಳವಾಗಿದ್ದುವು. ಕೋಳಿಮೊಟ್ಟೆ, ರವೆಗಂಜಿ, ಬ್ರೆಡ್, ಜಾಮ್, ಕಿತ್ತಳೆಹಣ್ಣಿನ ರಸ, ಹಾಲು, ಕಾಫಿ, ಟೀ, ನಂತರ ಹಣ್ಣುಗಳು. ರವೆ ಗಂಜಿ ಸಪ್ಪಗೆ ಮಾಡಿದ್ದರು. ಹಾಲು ಸಕ್ಕರೆ, ಅಥವಾ ಉಪ್ಪು ಹಾಕಿಕೊಂಡು ನಮ್ಮ ರುಚಿಗೆ ತಕ್ಕಂತೆ ಹೊಂದಿಸಿಕೊಂಡು ನಾವು ಅದನ್ನು ತಿನ್ನಬೇಕಾಗಿತ್ತು.

ನಮ್ಮ ಹಡಗು ಇನ್ನೂ ಬೊಂಬಾಯಿ ಬಂದರಿನಲ್ಲಿಯೇ ಇತ್ತು. ಸಿಂಗಪುರ, ಹಾಂಕಾಂಗ್, ಷಾಂಘೈಗಳಿಗೆ ಹೋಗುವ ಪ್ರಯಾಣಿಕರು ಇಂದು ಹಡಗು ಹತ್ತಿದರು. ಅವರಲ್ಲಿ ಚೈನಾ ದೇಶದವರೇ ಜಾಸ್ತಿ ಇದ್ದರು.

ಹಡಗಿನ ಪ್ರಯಾಣಿಕರನ್ನು ಬಿಳ್ಕೋಡುವ ಸಮಾರಂಭ, ಸಂಭ್ರಮ. ತಂದೆ ತಾಯಿಯರು, ಅಣ್ಣ ತಮ್ಮಂದಿರು, ಅಕ್ಕ ತಂಗಿಯರು, ಹೆಂಡಂದಿರು, ಸ್ನೇಹಿತರು, ಸಂಬಂಧಿಗಳು ತಂಡ ತಂಡವಾಗಿ ಬಂದಿದ್ದರು. ನನ್ನ ಗೆಳೆಯರಾದ ಶೌರಿ, ಸಂಜೀವರೂ ಬಂದಿದ್ದರು. ಶೌರಿ, ಗೋಡಂಬಿ, ಕೊಬ್ಬರಿ ಮಿಠಾಯಿ, ಕಿತ್ತಲೆಹಣ್ಣು ತಂದಿದ್ದ. ಮೂವರು ಅವನ್ನು ತಿಂದೆವು. ಕೊನೆಯಬಾರಿ ಮಾತುಕಥೆಯಾಡಿ ಶೌರಿ, ಸಂಜೀವರು ಹೊರಟರು. ಶೌರಿ, 'ನಮ್ಮೆಲ್ಲರ ಪರವಾಗಿ ಜಯಶಾಲಿಯಾಗಿ ಬಾ' ಎಂದು ಹೇಳಿದ. ನಿಜಕ್ಕೂ ನನ್ನ ಗೆಳೆಯರೆಲ್ಲರ ಪ್ರತಿನಿಧಿಯೇ ಆತ ಆಗಿದ್ದ. ಗೆಳೆಯರ ವಿಶ್ವಾಸಕ್ಕಾಗಿ ನನ್ನ ಹೃದಯ ತುಂಬಿಬಂದಿತು. ಹಡಗಿನ ಏಣಿಯ (Ladder) ಮೇಲೆ, ಅವರು ಹೋಗುತ್ತಿರುವುದನ್ನು ನೋಡುತ್ತಾ ಹಾಗೆಯೇ ನಿಂತಿದ್ದೆ. ಅದೆಷ್ಟು ಕಾಲ ಹಾಗೆ ನಿಂತಿದ್ದೆನೋ !

ಇನ್ನೇನು ಹಡಗು ಪ್ರಯಾಣ ಬೆಳೆಸುವ ಸಮಯ, ಬಂದೇ ಬಂದಿತು. ನೆರೆದಿದ್ದ ಜನ ಸಮೂಹ ಕೈಯಲ್ಲಿ ಕರವಸ್ತ್ರವನ್ನು ಹಿಡಿದು ಎಲ್ಲರನ್ನೂ ಬೀಳ್ಕೊಡುತ್ತಿದ್ದರು. ಹಡಗಿನ ಏಣಿಯನ್ನು ತೆಗೆದು ನಮಗೂ ಬೊಂಬಾಯಿಗೂ ಇದ್ದ ಸಂಬಂಧವನ್ನು ಕಡಿದುಹಾಕಿದರು. ನಗೆ, ಅಗಲಿಕೆಯ ದುಃಖ, ಮತ್ತು ಶಾಂತವಾದ ಬೀಳ್ಕೊಡುಗೆಯ ಮಧ್ಯೆ ನಮ್ಮ 'ಮೆರೀನ್ ಲ್ಯಾಡರ್' ನಿಧಾನವಾಗಿ ಚಲಿಸತೊಡಗಿತು. ನಾವು ಬೊಂಬಾಯಿ ಬಿಟ್ಟಾಗ ಸರಿಯಾಗಿ ೪ ಘಂಟೆ ಹೊಡೆದು ಹತ್ತು ನಿಮಿಷವಾಗಿತ್ತು.

ಗಂಭೀರವಾದ ಅರಬ್ಬಿ ಸಮುದ್ರದ, ವಿಶಾಲವಾದ ಅಲೆಗಳ ಮಧ್ಯದಲ್ಲಿ ನಮ್ಮ ಹಡಗು ನಿಧಾನವಾಗಿ ಯಾನ ಮಾಡುತ್ತಿತ್ತು. ಹಡಗು ದಕ್ಷಿಣಾಭಿಮುಖವಾಗಿ ಹೊರಟಿದ್ದು, ಸಿಂಹಳ ದ್ವೀಪವನ್ನು ಹಾದು, ಹಿಂದೂ

ಸಾಗರವನ್ನು ದಾಟಿ, ಬಂಗಾಳ ಕೊಲ್ಲಿಯ ಅಂಚನ್ನು ತಗಲಿ, ಅಂಡಮಾನ್ ನಿಕೋಬಾರ್ ದ್ವೀಪಗಳನ್ನು ವೀಕ್ಷಿಸಿಕೊಂಡು ಸಿಂಗಪುರವನ್ನು ತಲುಪುವ ವೇಳಾ ಪತ್ರಿಕೆ ಹಡಗಿನದಿತ್ತು.

ಹಡಗಿನ ಪ್ರತಿಯೊಂದು ಭಾಗವನ್ನೂ ನೋಡಿಕೊಂಡು ಬಂದಾಯಿತು. **ತೀರ್ಥಹಳ್ಳಿಯ ಗೆಳೆಯ ಪದ್ಮನಾಭ** ನನ್ನ ಪ್ರಯಾಣ ಸುಖವಾಗಲೆಂದು ತಂತಿಯೊಂದನ್ನು ಕಳುಹಿಸಿದ್ದ.

ಬೆಂಗಳೂರಿನಿಂದ ಬಂದು ಅದೇ ಹಡಗಿನಲ್ಲಿದ್ದ **ಡಾ|| ಬಿ. ಜಿ. ಎಲ್. ಸ್ವಾಮಿ, ಶ್ರೀ ಡಿ. ಎಂ. ಗೋಪಿನಾಥ್** ಇವರ ಪರಿಚಯವಾಯಿತು. ಸಂಜೆ ನಾವೆಲ್ಲರೂ ಹಡಗಿನ ಡೆಕ್ಕಿನ ಮೇಲೆ ಕುಳಿತು ಸಂಧ್ಯಾ ಸಮಯದ ಪ್ರಕಾಶಮಾನವಾದ ಸೂರ್ಯ, ತನ್ನ ಕಿರಣಗಳನ್ನು ಒಂದೊಂದಾಗಿ ಮೆಲ್ಲಗೆ ಎಳೆದುಕೊಳ್ಳುತ್ತಿದ್ದುದನ್ನು ನೋಡಿ ಸವಿದೆವು. ಆ ಚಿತ್ರ ಆಗುಂಬೆಯ ಸೂರ್ಯ ಮುಳುಗುವ ದೃಶ್ಯ ನೆನಪಿಗೆ ತಂದಿತು. ನಿಜಕ್ಕೂ ಆ ವೇಳೆಗೆ ನಮ್ಮ ಹಡಗು ಕನ್ನಡನಾಡಿನ ಅಂಚಿಗೇನೆ ಬಂದಿತ್ತು. ಮಂಗಳೂರು ಇನ್ನು ಸ್ವಲ್ಪ ದೂರವೇ ಇತ್ತು.

ರಾತ್ರಿ ಊಟ ಮಾಡಲಿಲ್ಲ. ಗೋಪಿನಾಥ ಮನೆಯಿಂದ ತಂದ ಕೋಡಬಳೆ, ಚಕ್ಕುಲಿ, ಖಾರಾಸೇವು ತಿಂದೆವು. ಈ ವೇಳೆಗೆ ಕನ್ನಡ ದಂಪತಿಯೊಂದು ನಮಗೆ ಪರಿಚಯವಾಯಿತು. ಅವರೇ **ಶ್ರೀ ಮತ್ತು ಶ್ರೀಮತಿ ಎಂ. ಬಿ. ರಾಮಚಂದ್ರರಾಯರು.** ಮೈಸೂರಿನ ಭೂಗರ್ಭ ಇಲಾಖೆಯಲ್ಲಿದ್ದರು. ಹೆಚ್ಚಿನ ಪರಿಶೋಧನೆಗಾಗಿ ಅಮೇರಿಕೆಯತ್ತ ನಡೆದಿದ್ದರು.

೨೮-೧-೪೭
**ಅರಬ್ಬಿ ಸಮುದ್ರ.**

ಈ ವೇಳೆಗಾಗಲೆ, ಕನ್ನಡದ ಕಾರವಾರವನ್ನು ದಾಟಿ ಭಟ್ಕಳದ ಸಮೀಪಕ್ಕೆ ನಡೆದಿತ್ತು ನಮ್ಮ ಹಡಗು. ಭಟ್ಕಳಕ್ಕೂ, ನಮ್ಮೂರಾದ ಆನ

ವಟ್ಟೆಗೂ ಕೇವಲ ೫೦ ಮೈಲಿ. ಆದರೂ ನನಗೂ, ನಮ್ಮೂರಿಗೂ ಸಾಗರದ ಅಂತರವೇ ಇತ್ತು. ಭಟ್ಕಳ, ಕನ್ನಡನಾಡಿನ ಸುಪ್ರಸಿದ್ಧ ಬಂದರು ಆಗುವ ಸೂಚನೆಗಳು ಆಗಲೇ ಕಾಣಬರುತ್ತಿದ್ದವು. ಭಟ್ಕಳ, ಬಂದರಾದಾಗ ಕನ್ನಡ ನಾಡಿನ ಯುವಕರು ತಮ್ಮದೇ ಆದ ಬಂದರಿನ ಮುಖಾಂತರ ಪರದೇಶಗಳಿಗೆ ಪ್ರಯಾಣ ಮಾಡಬಹುದಲ್ಲವೇ ? ಎಂದು ಅ ದುಕೊಂಡೆ. ಕನ್ನಡನಾಡು ಒಂದಾದಾಗ, ಕನ್ನಡನಾಡಿನ ಉಜ್ವಲ ಭವಿತವ್ಯ ಭಟ್ಕಳ ಬಂದರಿನ ನಿರ್ಮಾಣವನ್ನೇ ಅವಲಂಬಿಸಿರುವುದು.

ಈ ಬೆಳಿಗ್ಗೆ ೧೧ ಘಂಟೆಗೆ ಒಂದು ಆಶ್ಚರ್ಯ ನಡೆಯಿತು. ಹಡಗಿನ ಕ್ಯಾಪ್ಟನ್ನನು ಇದ್ದಕ್ಕಿದ್ದಹಾಗೆಯೇ 'ಅಪಾಯ ಸೂಚನೆ, (Danger signal) ಕೊಟ್ಟುಬಿಟ್ಟನು. ಪ್ರಯಾಣಿಕರೆಲ್ಲರೂ ತಮತಮಗೆ ಕೊಟ್ಟಿದ್ದ ಜೀವದ (Life Belt) ಪಟ್ಟಿಯನ್ನು ಕಟ್ಟಿಕೊಂಡು ಡೆಕ್ ಮೇಲೆ ಹೋಗಲು ಆಜ್ಞೆ ಯಾಯಿತು. ಡೆಕ್ಕಿನ ಮೇಲೆ ನಾಲ್ಕಾರು ಜೀವ ಉಳಿಸುವ ದೋಣಿ (Life Boats) ಗಳನ್ನೂ ಇಟ್ಟಿದ್ದರು. ಅವುಗಳನ್ನು ನೀರಿನೊಳಕ್ಕೆ ಬಿಡುವ ಪ್ರಯತ್ನ ನಡೆಯಿತು. ಅರ್ಧ ಘಂಟೆಯ ನಂತರ ನಮ್ಮ ಜೀವದ ಪಟ್ಟಿ ಯನ್ನು ಬಿಚ್ಚಿದೆವು. ಹೀಗೆ ಪ್ರತಿಯೊಂದು ಹಡಗಿನಲ್ಲಿಯೂ ಅಪಾಯ ಸೂಚನೆಯು ಕಂಡರೆ, ಜೀವದೋಣಿಗಳಲ್ಲಿ ಹತ್ತಿ ನೀರಿನೊಳಕ್ಕೆ ಇಳಿದು ಸುರಕ್ಷಿತವಾಗಿ ದಡ ಮುಟ್ಟುವ ಪ್ರಯತ್ನ, ಈ ತರಹದ ತರಬೇತಿನಿಂದ ಪರೀಕ್ಷೆ ಮಾಡಲಾಗುವುದೆಂದು ಆಮೇಲೆ ನಮಗೆ ತಿಳಿಯಿತು. ಈ ಅನು ಭವ ನಮಗೆ ಹೊಸದಾಗಿತ್ತು.

ಪ್ರತಿ ದಿನವೂ ಹಡಗಿನ ನೋಟೀಸ್ ಬೋರ್ಡ್ ಮೇಲೆ, ಹಿಂದಿನ ದಿನ ಹಡಗು, ಘಂಟೆಗೆ ಎಷ್ಟು ಮೈಲಿ ಓಡುತ್ತದೆ ಎಂಬುದನ್ನು ಬರೆದು ಅಂಟಿಸುತ್ತಿದ್ದರು. ಇಂದಿಗೆ ೩೪೫ ಮೈಲಿ ಬಂದಿದೆ ಎಂದು ತಿಳಿಸಲಾಗಿತ್ತು.

ಹಡಗುಗಳಲ್ಲಿ ಸಾಮಾನ್ಯವಾಗಿ ಅಂಗಡಿಗಳು, ಕ್ಯಾಂಟೀನ್‌ಗಳು, ಕ್ಷೌರದ ಅಂಗಡಿ, ಧೋಬಿ ಅಂಗಡಿ, ಆಸ್ಪತ್ರೆ ಇರುತ್ತವೆ. ಈ ಹಡಗಿನ

ಅಂಗಡಿಯನ್ನು ಮಧ್ಯಾಹ್ನ ೨ ರಿಂದ ೪ ಘಂಟೆಯವರೆಗೆ ಮಾತ್ರ ತೆರೆಯು ಲಾಗುತ್ತಿತ್ತು. ಅಂಗಡಿಯಲ್ಲಿ ಸಿಕ್ಕುವ ಸಾಮಾನುಗಳು, ಅದರ ಬೆಲೆ, ಎಲ್ಲವನ್ನು ನೋಟೀಸ್ ಬೋರ್ಡ್ ಮೇಲೆ ಚೀಟಿ ಅಂಟಿಸಿದ್ದರು. ಈ ಅಂಗಡಿಯಲ್ಲಿ ಪಾನೀಯಗಳ ಪೈಕಿ, ಕಾಫಿ, ಟೀ, ಇರಲಿಲ್ಲ. ಮಾದಕ ದ್ರವ್ಯಗಳೆಲ್ಲ ಸಿಕ್ಕುತ್ತಿದ್ದವು. **"ಕೋಕೊ, ಕೋಲಾ"** ಎಂಬ ಪಾನೀಯ ಮಾತ್ರ ಮದ್ಯದಿಂದ ಹೊರತಾಗಿ, ನಮ್ಮಲ್ಲಿಯ ಸೋಡಾಗಳಂತಿದ್ದು, ಅದು ಸಿಕ್ಕುತ್ತಿತ್ತು.

ಇದು ಅಮೇರಿಕನ್ ಹಡಗು. ಇಲ್ಲಿಯ ಚಲಾವಣೆಯಲ್ಲಾ ಅಮೇರಿಕನ್ ನಾಣ್ಯಗಳೇ. ಹಡಗು ಹತ್ತುವಾಗಲೇ ನಮಗೆ ೫೦ ಡಾಲರುಗಳವರೆಗೆ ಪ್ರಯಾಣದಲ್ಲಿ ಖರ್ಚು ಮಾಡಲು ಹಡಗಿನ ಕಂಪೆನಿಗಳಲ್ಲಿ ಎಕ್ಸ್‌ಚೇಂಜ್ (Exchange) ಕೊಡುತ್ತಾರೆ. ಆಗ ಒಂದು ಡಾಲರಿಗೆ ಮೂರು ರೂಪಾಯಿ ಆರಾಣೆ, ಬೆಲೆ ಇತ್ತು. ಈಗ ನಾಲ್ಕು ರೂಪಾಯಿ ಚಿಲ್ಲರೆ ಇದೆ.

ಪ್ರಯಾಣಿಕರ ಅನುಕೂಲಕ್ಕಾಗಿ ಒಂದು ರೇಡಿಯೋ ಇದೆ. ಸಾಯಂಕಾಲ ಯಾವಾಗಲೂ ಸಂಗೀತ, ಸುದ್ದಿ, ಹಾಕುತ್ತಾರೆ. ರಾತ್ರಿ ಫರಂಗಿಯರಿಗೆ ನರ್ತನಕ್ಕನುಕೂಲವಾಗುವಂತೆಯೂ ಹಾಡುಗಳನ್ನು ಹಾಕುತ್ತಾರೆ.

ಹಡಗಿನಿಂದಲೇ **"ರೇಡಿಯೋ ಗ್ರಾಮ್"** ಕಳುಹಿಸಿ, ನಮ್ಮ ಕ್ಷೇಮ ಸಮಾಚಾರ ತಿಳಿದುಕೊಳ್ಳಬಹುದು. ಒಂದು ಡಾಲರಿಗೆ ಮೂರು ಶಬ್ದಗಳನ್ನು ಕಳುಹಿಸಬಹುದು.

೨೯—೧—೪೭

**ಹಿಂದೂ ಸಾಗರ.**

ಬೆಳಿಗ್ಗೆ ಏಳುವುದರಲ್ಲಿಯೇ ನಾವು ಹಿಂದೂ ಸಾಗರವನ್ನು ಮುಟ್ಟಿ, ರಾಮೇಶ್ವರದ ಅಂಚಿನಲ್ಲಿರುವೆವೆಂದು ತಿಳಿಸಲಾಯಿತು. ಭಾರತದ ದಡ ಇನ್ನೂ ಕಾಣುತ್ತಲೇ ಇತ್ತು. ಮರಗಳು, ಗುಡ್ಡಬೆಟ್ಟಗಳು, ದೂರದಲ್ಲಿ ಮಿಣುಕುವ ದೀಪಗಳು ನಮಗೆ ಕಾಣುತ್ತಿದ್ದವು.

ಹಡಗಿನ ಊಟ ದಿನ ದಿನಕ್ಕೂ ಬೇಜಾರಾಗುತ್ತ ಬಂದಿತು. ಶ್ರೀ ರಾಮಚಂದ್ರರಾಯರ ಪತ್ನಿ ಶ್ರೀಮತಿ ಶಾರದಮ್ಮನವರಿಗೆ ಸಮುದ್ರದ ಖಾಹಿಲೆಯ ಚಿಹ್ನೆಗಳು ಕಾಣಬರತೊಡಗಿದವು. ನಾವು ಊಟಕ್ಕೆ ಜೊತೆಯಲ್ಲಿಯೇ ಕುಳಿತುಕೊಳ್ಳುತ್ತಿದ್ದೆವೆಂದು ಹೇಳಿದ್ದೇನಷ್ಟೆ. ಈ ದಿನ ಕೋಸುಗಡ್ಡೆಯ ಪಲ್ಯದ ತರಹ ಒಂದು ಪಲ್ಯ ಮಾಡಿದ್ದರು. ನೋಡುವುದಕ್ಕೆ ತರಕಾರಿಯಂತೆಯೇ ಇತ್ತು. ನಾನದನ್ನು ತಿಂದು ನಾಲಗೆ ಚಪ್ಪರಿಸಿದೆನು. ಶ್ರೀ ಮತ್ತು ಶ್ರೀಮತಿ ರಾಮಚಂದ್ರರಾಯರು ಹತ್ತು ನಿಮಿಷ ತಡವಾಗಿ ಊಟಕ್ಕೆ ಬಂದರು. ಅವರು ಬಂದಕೂಡಲೇ, 'ಒಳ್ಳೆಯ ಕೋಸುಗಡ್ಡೆಯ ಪಲ್ಯ ಮಾಡಿದ್ದಾರೆ, ರುಚಿಯಾಗಿದೆ' ಎಂದೆ. ಶ್ರೀಮತಿ ಶಾರದಮ್ಮನವರು ಆ ಪಲ್ಯವನ್ನು ನನ್ನ ಭರವಸೆಯ ಮೇಲೆ ತಿಂದರು. ಅರ್ಧ ತಿನ್ನುತ್ತಾ 'ಇದೇಕೊ, ಅಂಟು ಅಂಟಾಗಿದೆಯಲ್ಲ' ಎಂದರು. ಎಲ್ಲವನ್ನೂ ತಿಳಿದಿದ್ದ ಶ್ರೀ ರಾಮಚಂದ್ರರಾಯರು ಗಹಗಹಿಸಿ ನಗುತ್ತಲೇ ಇದ್ದರು. ಕೊನೆಗೆ ನಾವಿಬ್ಬರೂ ಅದೇನೆಂದು ಕೇಳಬೇಕೆಂದು ಬಟ್ಲರನನ್ನು ಕೂಗಿದೆವು. ಆತನನ್ನು 'ಅದು ಯಾವ ತರಕಾರಿ' ಎಂದು ಕೇಳಿದೆವು. ಆತ ಹೇಳಿದ, 'ಅದು ತುಂಬಾ ಒಳ್ಳೆಯ ಶಾಖಾಹಾರಿ ಆಹಾರ. ಈಗತಾನೆ ಹಿಡಿದ ಸಮುದ್ರದ ಮೀನು' (It is a fine Vegetarian dish; just now they have got it from the sea) ಎಂದು ಹೇಳಿದ. ಅವನು ಹಾಗೆ ಹೇಳಿದ ಕೂಡಲೇ ನನಗೂ ಶ್ರೀ ಶಾರದಮ್ಮನವರಿಗೂ ವಾಂತಿ ಬರಲು ಪ್ರಾರಂಭವಾಯಿತು. ಇಬ್ಬರೂ ಊಟ ಬಿಟ್ಟಿದ್ದೆವು. ನಂತರ ಮೂರು ದಿನ ನಮಗೆ ಊಟ ಸೇರಲಿಲ್ಲ. ನಾನು ಮೋಸ ಹೋದದ್ದು ಇದೇ ಮೊದಲ ಸಲ, ಕೊನೆಯ ಸಲವೂ ಆಯಿತು.

ನಾನು ಟೈಫಾಯಿಡ್ ಇನಾಕ್ಯುಲೇಷನ್ ಮಾಡಿಸಿಕೊಂಡಿರಲಿಲ್ಲವಾದ್ದರಿಂದ, ನನ್ನ ಹೆಸರನ್ನು ನೋಟೀಸ್ ಬೋರ್ಡಿನ ಮೇಲೆ ಹಾಕಿದ್ದರು. ನಾನು ಇನಾಕ್ಯುಲೇಷನ್ ಮಾಡಿಸಿಕೊಳ್ಳದಿದ್ದರೆ ಚೈನಾ ದೇಶದ ಮುಖ್ಯ ನಗರ

ವಾದ ಷಾಂಘೈ ಪಟ್ಟಣವನ್ನು ನೋಡಲಾಗುತ್ತಿರಲಿಲ್ಲ. ಹಡಗಿನಿಂದ ಇಳಿಯುಪಂತೆಯೇ ಇರಲಿಲ್ಲ. ಹಡಗಿನ ಆಸ್ಪತ್ರೆಯಲ್ಲಿಯೇ ಇನಾಕ್ಯುಲೇಷನ್ ನಡೆಯಿತು. ವಿಪರೀತ ನೋವಾಯಿತು. ಜ್ವರಬಂತು. ಬಾಧೆಯನ್ನು ತಾಳಲಾರದೆ ಹಾಸಿಗೆಯನ್ನೇ ಹಿಡಿದೆ.

ನಮ್ಮ ಹಡಗು ಸಿಂಹಳ ದ್ವೀಪದ ಸಮೀಪಕ್ಕೆ ಬಂದಿತ್ತು. ಈ ದಿನ ಒಂದು ಚಲನ ಚಿತ್ರವನ್ನು ತೋರಿಸಿದರು. ರಾತ್ರಿಯಾಗುತ್ತಾ ಬಂದಹಾಗೆ ಕೊಲಂಬೋ ನಗರ ಹತ್ತಿರ ಬರುತ್ತಿತ್ತು. ವಿದ್ಯುಚ್ಛಕ್ತಿಯ ದೀಪಗಳ ಬೆಳಕು ಚಂದವಾಗಿ ಕಾಣುತ್ತಿತ್ತು. ಕೊಲಂಬೋದಲ್ಲಿ ನಾವು ಇಳಿಯಲಿಲ್ಲ. ಹಾಗೆಯೇ ಮುಂದಕ್ಕೆ ಸಾಗಿ **ಗಾಲ್** ಬಂದರನ್ನು ಹಾದು, ಸಿಂಗಪುರದತ್ತ ಸಾಗಿದೆವು. ಸಿಂಹಳ ದ್ವೀಪವು ಪುರೆಯಾಗಿ ಸುತ್ತಲೂ ನೀರಿನಿಂದ ಸುತ್ತಲ್ಪಟ್ಟಿವು. ಎಲ್ಲಿ ನೋಡದರೂ, ನೀರೇ ನೀರು. ಹಿಂದೂ ಸಾಗರದ ಆರ್ಭಟದಲ್ಲಿ, ನಮ್ಮ ಹಡಗು ಈ ದಿನ ೪೧೮ ಮೈಲಿ ದೂರ ನಡೆದಿತ್ತು. ಹಡಗಿನ ಮೈಲಿಯ ಲೆಖ್ಖವೇ ಬೇರೆ.

**ಎಸ್. ಎಸ್. ಮೆರೀನ್ ಆ್ಯಡರ್.**

೩೦-೧-೧೯೪೭

ಹಡಗಿನ ಜೀವನ ಬೇಸರವಾಗುತ್ತಾ ಬಂದಿತು. ಊಟವಂತೂ ತುಂಬಾ ಅಸಹ್ಯಕರವಾಗಿ ಕಾಣ ತೊಡಗಿತು. ಅಡಿಗೆ ಮನೆಗೆ ಯಾರೂ ಪ್ರವೇಶಿಸುತ್ತಲೇ ಇರಲಿಲ್ಲ. ಕೆಲವರಂತೂ ಬರೀ ಹಣ್ಣು, ಬ್ರೆಡ್ ತಿಂದು ಕೊಂಡೇ ಇದ್ದರು.

ಮೂರನೇ ತರಗತಿಯ ಪ್ರವಾಸಿಕರ ಅಡಿಗೆ ಮನೆಗೆ ಹೋಗಿದ್ದೆ. ಇಲ್ಲಿ ಬಟ್ಲರುಗಳು ಬಂದು ಬಡಿಸುವುದಿಲ್ಲ. ಊಟ ಮಾಡುವವರೆಲ್ಲಾ ಬಂದು ಸಾಲಾಗಿ ' **ಕ್ಯೂ** ' ನಿಂತುಕೊಳ್ಳಬೇಕು. ನಂತರ ತಟ್ಟೆ, ಚಮಚ, ಲೋಟ, ತೆಗೆದುಕೊಂಡು, ಆಹಾರ ಸಿದ್ಧ ಮಾಡಿಟ್ಟ ಜಾಗಕ್ಕೆ ಹೋಗಬೇಕು.

ಅಲ್ಲೊಬ್ಬ ಪರಿಚಾರಕ ಒಬ್ಬೊಬ್ಬರಿಗೆ ಬಡಿಸುವುದಕ್ಕೆ ನಿಂತಿರುತ್ತಾನೆ. ಪರಿಚಾರಕ ಅವರವರಿಗೆ ಬೇಕಾದ ಆಹಾರವನ್ನು ಬಡಿಸುತ್ತಾನೆ. ಹಾಗೆ ಬಡಿಸಿದ ಮೇಲೆ ತಮ್ಮ ತಟ್ಟೆಗಳನ್ನು ತೆಗೆದುಕೊಂಡು ಹೋಗಿ ಮೇಜಿನ ಮೇಲೆ ಅವರವರಿಗೆ ಗೊತ್ತಾದ ಜಾಗದಲ್ಲಿ ಕುಳಿತು ಊಟ ಮಾಡಬೇಕು. ಊಟವಾದಮೇಲೆ ತಟ್ಟೆ ಲೋಟಾಗಳನ್ನು ತೊಳೆಯುವ ಜವಾನನ ಹತ್ತಿರ ಕೊಡಬೇಕು. ಮೂರನೆಯ ತರಗತಿಯಲ್ಲಿ ಚೀನಿ ಪ್ರವಾಸಿಕರೇ ಹೆಚ್ಚಿದ್ದರು. ಅವರು ಊಟ ಮಾಡುವ ರೀತಿ ನನಗೆ ಅಸಹ್ಯವಾಗಿ ಕಂಡಿತು. ಎಲ್ಲಾ ಆಹಾರವನ್ನೂ ಗಬಗಬನೆ ನುಂಗಿಕೊಂಡು 'ಲೊಚ ಲೊಚ' ಊಟ ಮಾಡುತ್ತಿದ್ದರು.

ಸಾಯಂಕಾಲ ದಿನವೂ ಸ್ವಲ್ಪ ಕಸರತ್ತು ನಡೆಯುತ್ತದೆ. ನಾವೂ ಶತಪಥ ಹೆಜ್ಜೆಗಳನ್ನಿಕ್ಕಿ ಬೇಸರವಾದರೆ ಓದುತ್ತಿದ್ದೆವು. ಇಂದು ಶ್ರೀ ದಿವಾಕರರು ಬರೆದ **'ಅಂತರಾತ್ಮನಿಗೆ'** ಓದಿದೆನು. ಇದೊಂದು ಶ್ರೀ ದಿವಾಕರರ ಅದ್ಭುತ ಗ್ರಂಥವೆನ್ನಬಹುದು. ರಾತ್ರಿ ಊಟವಾದ ಮೇಲೆ ೯ ಘಂಟೆಗೆ ತಿರುಗಾಡುತ್ತಿರುವಾಗ ಅಡುಗೆ ಮನೆಯಲ್ಲಿ ಏನೋ ಶಬ್ದ ಕೇಳಿ ಬಂತು. ಹೋಗಿ ನೋಡುವಲ್ಲಿ ಹತ್ತಾರು ಜನ ಪ್ರಯಾಣಿಕರು ಡಾಲರುಗಳ ಕಂತೆಯನ್ನಿಟ್ಟುಕೊಂಡು ಆಟವಾಡುತ್ತ ಕುಳಿತ್ತಿದ್ದರು. ಈ ಆಟದ ಹೆಸರು **'ಬಿಂಗೋ'** (Bingo) ಎಂದು. ಹಣಗಳಿಸುವವರಿಗಿಂತ ಕಳೆದು ಕೊಳ್ಳುವವರೇ ಜಾಸ್ತಿ ಇದ್ದರು. ರಾತ್ರಿ ಒಂದು ಘಂಟೆಯವರೆಗೂ ಈ ಆಟ ನಡೆಯಿತು. ಪ್ರಯಾಣಿಕರ ಬೇಸರವನ್ನು ಕಳೆಯಲು ಮೂರುದಿನಕ್ಕೊಂದು ಸಲ ಹಡಗಿನ ಅಧಿಕಾರಿಗಳೇ ಇಂಥಾ ಆಟಗಳನ್ನು ಏರ್ಪಡಿಸುತ್ತಾರೆ.

೩೦-೧-೧೯೪೭

**ಹಿಂದೂಸಾಗರ**

ಭಾರತ ಬಿಟ್ಟಾಗಲೇ ಐದು ದಿನಗಳಾಯಿತು. ಭಾರತದಿಂದ ಏನೊಂದು ಸುದ್ದಿಯೂ ನಮಗೆ ಬಂದಿಲ್ಲ. ಹಡಗಿನಲ್ಲಿ ಸುದ್ದಿ ಪ್ರಸಾರ

ಮಾಡುವುದಾಗಿ ವದಂತಿ. ಆದರಿನ್ನೂ ಯಾವಸುದ್ದಿ ಚೀಟಿಗಳನ್ನೂ ಹಂಚು ತ್ತಿಲ್ಲ. ಬರುತ್ತ, ಬರುತ್ತ, ಹಡಗಿನವಾಸ ಬಂದಿಖಾನೆಯ ನೆನಪು ತರುತ್ತಿದೆ. ಆಸ್ಪತ್ರೆಯಲ್ಲಿರುವ ರೋಗಿ, ಸೆರೆಮನೆಯಲ್ಲಿರುವ ಬಂದಿ, ಹಡಗಿನಲ್ಲಿರುವ ಪ್ರಯಾಣಿಕ, ಎಲ್ಲಾ ಒಂದೇ ತರಗತಿಯವರಂತೆ ಕಾಣುತ್ತದೆ!

ತಿರುವಾಂಕೂರಿನಿಂದ ಒಬ್ಬ ರೋಮನ್ ಕ್ಯಾಥೋಲಿಕ್ ಪಾದ್ರಿ ಅಮೇರಿಕೆಗೆ ಹೊರಟದಾನೆ. ಆತ ಪ್ರತಿದಿನ ಸಂಜೆ ಏನಾದರೊಂದು ಮನ ರಂಜನೆಯ ಕಾರ್ಯಕ್ರಮ ಸಿದ್ಧಗೊಳಿಸುತ್ತಾನೆ. ಇತನ ಸಾಹಸದಿಂದ ಹಡಗಿನ ಬೇಸರ ಕಡಿಮೆಯಾಗುತ್ತಿದೆ.

ಕಾಲ ಕಳೆಯಲು ಪ್ರಯಾಣಿಕರು ತಮಗೆ ಬೇಕಾದ ಜನರೊಂದಿಗೆ ಗುಂಪು ಕಟ್ಟಿಕೊಂಡು, ಹಾಡಿಯೊ, ಇಲ್ಲವೆ, ಚರ್ಚೆ ಮಾಡಿಯೊ, ಇಲ್ಲವೆ ಹರಟೆ ಹೊಡೆದೊ, ತಮ್ಮ ಬೇಸರವನ್ನು ಕಳೆದುಕೊಳ್ಳುವುದು ವಾಡಿಕೆ. ಕನ್ನಡಿಗರಾದ ನಾವು ದಿನವೂ ಒಂದೆಡೆ ಸೇರುತ್ತೇವೆ. ನಮ್ಮ ಸಂಘಕ್ಕೆ ಹಿರಿಯರಾದ ಶ್ರೀ ಎಂ. ಬಿ. ರಾಮಚಂದ್ರರಾಯರೇ ಅಧ್ಯಕ್ಷರು. ಡಾ|| ಪಾಂಡುರಂಗರಾವ್, ಶ್ರೀ ಡಿ. ಎಂ. ಗೋಪಿನಾಥ್, ಡಾ|| ಬಿ. ಜಿ. ಎಲ್. ಸ್ವಾಮಿ, ಶ್ರೀಮತಿ ಶಾರದಮ್ಮನವರು ಮತ್ತು ನಾನು ನಮ್ಮ ಸಂಘದ ಸದಸ್ಯರು.

ವಯಸ್ಕರಾದ ಕೆಲವು ಸಿಕ್ ಭಾರತೀಯರು ಕೆನಡಾ ದೇಶಕ್ಕೆ ಹೊರಟಿದ್ದಾರೆ. ಅವರೆಲ್ಲರೂ ಯುದ್ಧಕ್ಕೆ ಮುಂಚೆ ಅಲ್ಲಿಯೇ ನೆಲಸಿ, ಮನೆ ಮಠಗಳನ್ನು ಮಾಡಿಕೊಂಡು ವ್ಯಾಪಾರ ಮಾಡಿ ಸುಖವಾಗಿ ಜೀವಿಸಿಕೊಂಡಿ ದ್ದವರು. ಈಗ ಪುನಃ ತಮ್ಮ ಜೀವನ ನಾಟಕ ಸಾಗಿಸಲು ಅಲ್ಲಿಗೆ ತೆರಳುವ ವರಿದಾರೆ. ಅವರೆಲ್ಲರೂ ಹಡಗಿನ ಮುಂಭಾಗದ ಡೆಕ್ಕಿನಲ್ಲಿ ಜಮಖಾನೆ ಹಾಸಿಕೊಂಡು ಕುಳಿತಿರುತ್ತಾರೆ. ಬೆಳಗಿನಿಂದ ಸಂಜೆಯವರೆಗೂ ಅವರು ಅಲ್ಲಿಯೇ ಇರುತ್ತಾರೆ.

ಪತ್ರಿಕೋದ್ಯಮದ ಅಭ್ಯಾಸಕ್ಕಾಗಿ ನಾಗಪುರದಿಂದ ಒಬ್ಬ ಯುವತಿ ಅಮೇರಿಕೆಗೆ ಹೊರಟಿದ್ದಾಳೆ. ಆಕೆ ಮಹಾರಾಷ್ಟ್ರದವಳು. ದಕ್ಷಿಣದಲ್ಲಿರುವ ವಾಷಿಂಗ್‌ಟನ್ ಸಂಸ್ಥಾನದ **“ಸಿಯಾಟಲ್”** (Seattle) ವಿಶ್ವವಿದ್ಯಾನಿಲಯದಲ್ಲಿ ಆಕೆಗೆ ಓದಲು ಅನುಮತಿ ದೊರೆತಿದೆ. ನಾನೂ ಅಲ್ಲಿಗೇ ಬರುವವನೆಂದು ತಿಳಿದು, ಇಂದು ನನ್ನನ್ನು ಮಾತನಾಡಿಸಿ ಅಭಿನಂದಿಸಿದಳು. ಆದರೆ ನನಗೂ ಅವಳಿಗೂ ೩೫೦೦ ಮೈಲಿ ಅಂತರವಿತ್ತು. ನನ್ನ ವಿಶ್ವವಿದ್ಯಾನಿಲಯವು ಉತ್ತರದಲ್ಲಿ ನ್ಯೂಯಾರ್ಕ್ ಸಂಸ್ಥಾನದ **ಸಿರ್ಯಾಕ್ಯೂಸ್** (Syracuse) ಪಟ್ಟಣದಲ್ಲಿತ್ತು. ಈಕೆಯ ಹಾವಭಾವ ವಿಲಾಸಗಳನ್ನು ನೋಡಿ, ಈಕೆಯಿಂದ ದೂರವಿರಬೇಕೆಂದೆನಿಸಿತು. ಹಡಗಿನಲ್ಲಿದ್ದ ಮೂವತ್ತು ದಿನಗಳೂ, ಈಕೆ ಅತಿರೇಕವಾಗಿ (Ultra-modern, Ultra-Indian) ನಡೆದುಕೊಂಡಳು. (ಸಿಯಾಟಲ್‌ಗೆ ಹೋದ ಎರಡು ತಿಂಗಳಲ್ಲೇ ಅಲ್ಲಿದ್ದ ಒಬ್ಬ ಮುಸ್ಲಿಂ ಯುವಕನನ್ನು ಮದುವೆಯಾದಳಂತೆ. ಅಲ್ಲಿಯೇ ಇದ್ದ ನಮ್ಮ ಗೋಪಿನಾಥರು ನನಗೆ ಈ ಸುದ್ದಿ ತಿಳಿಸಿದರು).

ಸಿಂಗಪುರವು ಸಮೀಪಿಸಿದಂತೆಲ್ಲಾ ಸೆಕೆ ವಿಪರೀತವಾಗತೊಡಗಿದೆ. ನಾವೆಲ್ಲರೂ ಇಂದು ಡೆಕ್ಕಿನ ಮೇಲ್ಭಾಗದಲ್ಲೇ ಮಲಗಿದೆವು. ಪ್ರಶಾಂತವಾದ ಹಿಂದೂ ಸಾಗರದ ತಣ್ಣನೆಯ ಗಾಳಿ ನಮಗೆ ಬಲು ಜಾಗ್ರತೆ ನಿದ್ರೆ ತಂದಿತು.

## ಸುಮಾತ್ರಾ ಬೆಟ್ಟಗಳು

೧—೨—೧೯೪೭

**ಜಾವ, ಸುಮಾತ್ರ** ದ್ವೀಪಗಳ ಮಧ್ಯದಲ್ಲಿ ಹೋಗುತ್ತಿದೆ ನಮ್ಮ ಜಹಜು. ಸುಮಾತ್ರ ದ್ವೀಪಗಳ ಬೆಟ್ಟಗುಡ್ಡಗಳು, ಸಮುದ್ರದ ದಂಡೆಯಲ್ಲಿ ಸಾಲಾಗಿ ಬೆಳೆದಿರುವ ತೆಂಗಿನಮರಗಳ ಗುಂಪು ಸುಂದರವಾಗಿ ಕಾಣುತ್ತಿವೆ.

ಸುಮಾತ್ರ! ಹೆಸರೆಷ್ಟು ಚೆನ್ನಾಗಿದೆ. ನಮಗೆಲ್ಲರಿಗೂ ಇಲ್ಲಿಯ ಊಟ ಬಲು ಬೇಜಾರಾಗಿದೆ. ಸಿಂಗಪುರವನ್ನೇ ಎದುರು ನೋಡುತ್ತಿದ್ದೇವೆ. ಎಂದು

ಊರು, ಜನ, ಗಿಡಮರಗಳನ್ನು ನೋಡಿಯೇವೋ ಎಂದು ಕಂಗಾಲಾಗಿ ಬಿಟ್ಟಿದ್ದೇವೆ. ಸಿಂಗಪುರದಲ್ಲಿ ಅನ್ನ ಸಾರು ಊಟ ಸಿಕ್ಕುವುದೆಂದು ತಿಳಿದು ತುಂಬಾ ಸಂತೋಷಭರಿತರಾಗಿದ್ದೇವೆ. ರಾತ್ರಿ ಒಂದು ಚಲನ ಚಿತ್ರ ತೋರಿಸಿದರು. ಮಲಗುವಾಗ, ನಮ್ಮ ಪ್ಯಾಸ್‌ಪೋರ್ಟ್, ವೀಸಾಗಳನ್ನು ಪರೀಕ್ಷಿಸಿದರು. ಸೆರೆಮನೆಯಲ್ಲಿ ಸೋಮವಾರ ಬೆಳಿಗ್ಗೆ ಸಾಲಾಗಿ ನಿಲ್ಲಿಸಿ **"ಫೈಲ್ ಜಾವ್"** ಮಾಡಿಸುವುದು ನೆನಪಿಗೆ ಬಂದಿತು.

**ಸಿಂಗಪುರ**

೨-೨-೧೯೪೭

**ಜೈ, ನೇತಾಜಿ! ಜೈ, ಸುಭಾಷ ಚಂದ್ರಬೋಸ್!!** ಭಾರತಕ್ಕೆ ಸ್ವಾತಂತ್ರ್ಯ ಸಂಪಾದಿಸಲು, ವಿಸ್ಮಯಕಾರಕ ರೀತಿಯಲ್ಲಿ ಸೆರೆಮನೆಯಿಂದ ಭಾರತ ಬಿಟ್ಟೋಡಿ, ಹೊರ ದೇಶದಲ್ಲಿ ಸೈನ್ಯ ಸಜ್ಜುಗೊಳಿಸಿ ಕ್ರಾಂತಿ ಕಹಳೆಯನ್ನು ಊದಿದ ನೇತಾಜಿಯ ಕಾರ್ಯರಂಗವಾಗಿದ್ದ ಸಿಂಗಪುರ ಬಂದೇ ಬಿಟ್ಟಿತು. ಬೆಳಗಿನಿಂದಲೇ ಸಿಂಗಪುರದ ಸಮುದ್ರ ದಂಡೆ ಕಾಣುತ್ತಿದ್ದವು, ೧೧ ಘಂಟೆ ಸುಮಾರಿಗೆ ಸಿಂಗಪುರವನ್ನು ತಲ್ಪಿದೆವು. ಸಿಂಗಪುರದ ಪ್ರಕೃತಿ ಸೌಂದರ್ಯವು, ಮತ್ತು ಮನೋಹರವಾದ ದೃಶ್ಯಗಳು ಕಣ್ಣಿಗೊಂದು ಹಬ್ಬ, ಮನಸ್ಸಿಗೊಂದು ಆನಂದವನ್ನುಂಟುಮಾಡಿದವು.

ಯುದ್ಧ ಕಾಲಕ್ಕೆ ಸುಪ್ರಸಿದ್ಧ ಯುದ್ಧದ ಹಡಗುಗಳಾದ **"ಪ್ರಿನ್ಸ್ ಆಫ್ ವೇಲ್ಸ್"** ಮತ್ತು **"ರಿಪಲ್ಸ್"** ಮುಳುಗಿದ ಜಾಗವನ್ನು ನೋಡಿದೆವು. ನಮ್ಮ ಹಡಗು ಆ ಜಾಗದ ಪಕ್ಕದಲ್ಲಿಯೇ ಹೋಯಿತು. ಇನ್ನೂ ಕೆಲವು ಸಣ್ಣ ಸಣ್ಣ ಹಡಗುಗಳು ಮುಳುಗಿದ್ದು, ಅವುಗಳ ಅವಶೇಷಗಳನ್ನು ನೋಡಿದೆವು.

ನಮ್ಮ ಹಡಗು ನೇರವಾಗಿ ಸಮುದ್ರದ ದಂಡೆಗೆ ಹೋಗದೆ, ಬಂದರಿಗೆ ಎದುರಾಗಿ ಸ್ವಲ್ಪ ದೂರದಲ್ಲಿ ಲಂಗರ ಬಿಟ್ಟಿತು. ಹಡಗು ನಿಲ್ದಾಣದಿಂದ **'Immigration'** ಅಧಿಕಾರಿಗಳು ಸಣ್ಣ ದೋಣಿಯೊಂದರಲ್ಲಿ ಬಂದು ನಮ್ಮ

ಹಡಗನ್ನೇರಿದರು. ಮೊದಲು ಸಿಂಗಪುರದಲ್ಲಿಯೇ ಇಳಿಯುವ ಪ್ರಯಾಣಿಕ ರನ್ನು ತನಿಖೆ ಮಾಡಿ, ಅವರನ್ನು ಸಿಂಗಪುರಕ್ಕೆ ದೋಣಿಗಳಿಂದಲೇ ದಡಕ್ಕೆ ರವಾನಿಸಿದರು. ನಂತರ ನಮಗೆ ಸಿಂಗಪುರದಲ್ಲಿಳಿಯಲು ಅನುಮತಿ ಕೊಡುವ ಚೀಟಿ ಕೊಡುವ ಕೆಲಸ ಪ್ರಾರಂಭವಾಯಿತು. ಸಾಯಂಕಾಲ ನಾಲ್ಕು ಘಂಟೆಯವರೆಗೆ ನಮ್ಮ ತನಿಖೆ ಪ್ರಾರಂಭವಾಯಿತು. ಅಲ್ಲಿಯವರೆಗೂ ಸಿಂಗ ಪುರದ ಮದರಾಸಿ ಹೋಟೆಲುಗಳ ನೀರುಳ್ಳಿಹುಳಿಯನ್ನು ಜ್ಞಾಪಿಸಿಕೊಂಡು ಬಾಯಲ್ಲಿ ನೀರು ಸುರಿಸುತ್ತಾ, ಕಣ್ಣು ಬಿಡುತ್ತಾ ಕುಳಿತಿದ್ದೆವು. ನಾಲ್ಕು ಘಂಟೆಗೆ ನಮ್ಮ ಹಡಗು ನಿಲ್ದಾಣಕ್ಕೆ ಪ್ರಯಾಣಮಾಡಿತು. ನಾವು ನಿಲ್ದಾಣ ಮುಟ್ಟಿದ್ದು ೫ ಘಂಟೆಗೆ. ನಮ್ಮ ಆತುರ ಹೆಚ್ಚಾದಂತೆ ನಮ್ಮನ್ನು ಸಿಂಗ ಪುರಕ್ಕೆ ಬಿಡುವುದು ನಿಧಾನವಾಯಿತು. ಹಡಗಿಗೆ ಹಾಕುವ ಏಣಿ ೧ ಘಂಟೆ ತೊಂದರೆ ಕೊಟ್ಟಿತು. ಅಂತೂ ೬ ಘಂಟೆಗೆ ಸಿಂಗಪುರದ ನೆಲ ಮುಟ್ಟಿದೆವು. ನೇತಾಜಿ ನೆತ್ತರು ಸುರಿಸಿದ ಪುಣ್ಯಭೂಮಿಯ ಸ್ಪರ್ಶದಿಂದ ಪಾವನವಾದೆವು. ಭೂಮಿ ತಾಯಿಯನ್ನಗಲಿ ಏಳು ದಿನಗಳಾಗಿತ್ತು, ನಾವು ಭೂಮಿ ಸ್ಪರ್ಶ ಮಾಡಿದ ಕೂಡಲೆ, **“ಜೈ ಹಿಂದ್”** ಎನ್ನುವ ಜೈಕಾರ ಕೇಳಿಸಿತು.

ಸಿಂಗಪುರದ ಹಡಗು ನಿಲ್ದಾಣ ದೊಡ್ಡದು. ಪೂರ್ವತೀರದ ಬ್ರಿಟಿಷರ ಮುಖ್ಯವಾದ ಬಂದರು. ತೀರದಲ್ಲಿ ಎಲ್ಲಿ ನೋಡಿದರೂ ಹಡಗುಗಳೇ ನಮಗೆ ಕಂಡವು. ವಿದ್ಯುಚ್ಛಕ್ತಿಯ ದೀಪಗಳು ಬೆಳಗಿ ಆ ದೃಶ್ಯ ಮೈಸೂರಿನ **ಕೃಷ್ಣ ರಾಜಸಾಗರ**ವನ್ನು ನೆನಪಿಗೆ ತಂದು, ಬೃಂದಾವನದ ದೀಪಮಾಲೆ ಕಣ್ಣೆದು ರಿಗೆ ನಿಂತಂತಾಯಿತು. **“ಕ್ಲಿಫೋರ್ಡ್ ಪೀರ್”,** ಸಿಂಗಪುರದ ಅಧಿಕೃತ ನಿಲ್ದಾಣ. ಅಲ್ಲಾಗಲೇ ಬೇರೆ ಹಡಗುಗಳು ಬಂದು ತಂಗಿದ್ದರಿಂದ ಹತ್ತಿರದ ಇನ್ನೊಂದು ನಿಲ್ದಾಣದಲ್ಲಿ ನಮ್ಮ ಹಡಗು ಲಂಗರು ಬಿಟ್ಟಿತ್ತು.

ನಾನು, ಸ್ವಾಮಿ, ಗೋಪಿನಾಥ್, ರಾವ್, ಜೊತೆಯಾಗಿ ಸಿಂಗಪುರ ಪ್ರವೇಶಿಸಿದೆವು. ಸಿಂಗಪುರದ ತೆರಿಗೆಯ ಕಚೇರಿಯಲ್ಲಿ ನಮ್ಮ ಪರೀಕ್ಷೆಯಾ ಯಿತು. ಹೆಸರಿಗೆ ಕಸ್ಟಮ್ಸ್. ಮಾಡುವುದೆಲ್ಲಾ ಬ್ಲ್ಯಾಕ್‌ಮಾರ್ಕೆಟ್.

ಇಲ್ಲಿ ನಮ್ಮ ಖರ್ಚಿಗೆ ಅಮೇರಿಕನ್ ಡಾಲರುಗಳಿಗೆ ಬದಲಾಗಿ ಮಲ ಯನ್ ಡಾಲರುಗಳನ್ನು ತೆಗೆದುಕೊಳ್ಳಬೇಕಾಗಿತ್ತು. ನಿಲ್ದಾಣದ ಹತ್ತಿರವೇ ಹಣ ಬದಲಾಯಿಸಿ ಕೊಡುವವರ (Money changers) ಅಂಗಡಿಗಳಿದ್ದುವು. ಅಮೇರಿಕದ ಒಂದು ಡಾಲರಿಗೆ ಮಲಯದ ಎರಡು ಡಾಲರುಗಳು ಬಂದುವು. ರೂಪಾಯಿಯೂ ಕೂಡ ಚಲಾವಣೆಯಲ್ಲಿತ್ತು.

ನಮ್ಮ ಮೊದಲನೆಯ ಕೆಲಸ ಮದರಾಸಿ ಐಯ್ಯರ್ ಹೋಟೆಲು ಹುಡು ಕುವುದೇ ಆಗಿತ್ತು. ನಾಲ್ಕಾರು ಕಡೆ ತಿರುಗಿ, ಕೊನೆಗೆ **ಲಂಕಾ** ಹೋಟೆಲ್‌ಗೆ ಹೋದೆವು. ಅಲ್ಲಿ ನಮ್ಮ ಊಟ ಸಿಕ್ಕಲಿಲ್ಲ. ಪುನಃ ಹೋಟೆಲ್ ಸಂಶೋ ಧನೆ ನಡೆಸಿದೆವು. ದಾರಿಯಲ್ಲಿ ಕೆಲವರು ತಮಿಳು ಮಾತನಾಡಿಕೊಂಡು ಹೋಗುತ್ತಿದ್ದರು. ಸ್ವಾಮಿ, ತಕ್ಷಣ ಅವರನ್ನು ತಮಿಳಿನಲ್ಲಿ ಮಾತನಾಡಿಸಿ ತಮ್ಮವರನ್ನಾಗಿ ಮಾಡಿಕೊಂಡು ಹೋಟೆಲ್ ಸಂಶೋಧನೆಯನ್ನೂ ಮಾಡಿ ಬಿಟ್ಟರು. ನಾಲ್ಕು ಮೈಲಿ ದೂರದಲ್ಲಿ ಷಿಲ್ಲಾಂಗ್ ರಸ್ತೆಯಲ್ಲಿ ಕೆಲವು ಮದ್ರಾಸಿ ಹೋಟೆಲುಗಳಿವೆ ಎಂದು ಗೊತ್ತಾಯಿತು. ಒಂದು ಟ್ಯಾಕ್ಸಿ ಮಾಡಿಕೊಂಡು ಷಿಲ್ಲಾಂಗ್ ರಸ್ತೆಗೆ ಬಂದೆವು. ಬರುವಾಗ ದಾರಿಯಲ್ಲಿ ಸಿಂಗಪುರದ ಕಾಲೇಜು, ಆಸ್ಪತ್ರೆ, ಪುರಭವನ, ನೇತಾಜಿಯ ಪ್ರತಿಮೆ ನಿಲ್ಲಿ ಸಿದ ಉದ್ಯಾನವನ, ಸೌತ್ ಸೇತುವೆ ನೋಡಿಕೊಂಡು **"ಶ್ರೀಕೃಷ್ಣವಿಲಾಸ"** ಎಂದು ಬೋರ್ಡು ತಗುಲಿಸಿದ ಮನೆಯೆದುರು ಬಂದು ನಿಂತೆವು. ಅದನ್ನು ಕಂಡೊಡನೆಯೇ ನಮಗದೆಷ್ಟು ಸಂತೋಷವಾಯಿತೋ ! ನಾಲ್ಕು ಮಲಯ್ದ ಡಾಲರುಗಳನ್ನು ಕೊಟ್ಟು ಟ್ಯಾಕ್ಸಿಯನ್ನು ಅಟ್ಟಿ, ನಿಧಾನವಾಗಿ ಉಸಿರೆಳೆ ಯುತ್ತಾ ಕೃಷ್ಣವಿಲಾಸದಲ್ಲಿ ವಿಶ್ರಾಂತಿಗಾಗಿ ತಂಗಿದೆವು. ಮೊದಲು ಕಾಫಿ ಕುಡಿದು, ಊಟಕ್ಕೆ ಆರ್ಡರ್ ಮಾಡಿದೆವು. ಹೋಟೆಲ್ ಯಜಮಾನ 'ಊಟ ಇಲ್ಲ ಸಾರ್' ಎಂದ. ನಮ್ಮ ಎದೆ ಧಸ್ ಎಂದಿತು. ಸಿಂಗಪುರ ದಲ್ಲಿ ಅಕ್ಕಿ ಪಡಿತರ (Ration) ಇದ್ದುದರಿಂದ ಹೆಚ್ಚಿಗೆ ಜನಕ್ಕೆ ಊಟ ಸಾಧ್ಯವಿರಲಿಲ್ಲ. ನಮ್ಮ ಕಷ್ಟಗಳನ್ನೆಲ್ಲಾ ತೋಡಿಕೊಂಡ ಮೇಲೆ, ಊಟ

ಸಿದ್ಧ ಮಾಡುವುದಾಗಿ ಒಪ್ಪಿಕೊಂಡ. ಜೀವ ಮರಳಿ ಬಂತು. ಗೋಪಿಯಂತೂ ಸಿಂಗಪುರಕ್ಕಿಳಿದಿದ್ದುದು ಸಾರ್ಥಕವಾಯಿತೆಂದು ದೇವರಿಗೊಂದು ನಮಸ್ಕಾರ ಹಾಕಿದ. ನಾನಿದ್ದವನು, 'ದೇವರಿಗೇಕೆ ಹಾಕುತ್ತಿಯೋ, ಹಾಕು, ಈ ಹೋಟೆಲ್ ಯಜಮಾನನಿಗೆ' ಎಂದೆ. ನಮಗೆ ಅಡಿಗೆ ಪುನಃ ಮಾಡಬೇಕಾದ್ದರಿಂದ ೯ ಘಂಟೆಯವರೆಗೆ ತಡೆಯಬೇಕಿತ್ತು. ಸರಿ, ದೋಸೆಗೆ ಅಪ್ಪಣೆ ಮಾಡಿದೆವು. ಚಟ್ನಿ, ಸಾಂಬಾರ್, ಪಲ್ಯ, ದೋಸೆ, ಓ! ನಮ್ಮ ನಾಲಗೆಗೆ ಅಂದು ದೊಡ್ಡ ಹಬ್ಬ. ಒಂದು ಲೋಟ ಕಾಫಿಗೆ ಹತ್ತಾಣೆ ತೆತ್ತು, ದೋಸೆಗೆ ೧೫ ಆಣೆ ಕೊಟ್ಟು ಊರು ನೋಡಲು ಹೊರಟೆವು, ಸಂಜೆ ೯ ಘಂಟೆಯನ್ನೇ ನಿರೀಕ್ಷಿಸುತ್ತಾ.

ನಾಲ್ವರ ನಮ್ಮ ಗುಂಪು ಒಡೆಯಿತು. ಗೋಪಿ ಊರು ನೋಡಲು ಹೊರಟ. ರಾವ್ ಮತ್ತು ಸ್ವಾಮಿ, ಹತ್ತಿರದ ಪಾರ್ಕಿನಲ್ಲಿನ ಗಿಡ ಸಂಶೋಧನೆಗೆ ಪ್ರಾರಂಭಿಸಿದರು. ಅವರಿಬ್ಬರು ಸಸ್ಯಶಾಸ್ತ್ರ ಪ್ರವೀಣರು. ನಾನು ಕೆಲವು ಸಾಮಾನುಗಳನ್ನು ಕೊಳ್ಳಲು ಅಂಗಡಿ ಸಾಲು ಹಿಡಿದೆ. ಇಲ್ಲಿರುವ ಅಂಗಡಿಗಳೆಲ್ಲಾ ಚೈನಾ, ಜಪಾನಿ, ಇರಾನಿ, ಮಲೆಯಾಳಿ, ಮತ್ತು ತಮಿಳು ಜನಕ್ಕೆ ಸೇರಿದವು. ನನಗೆ ಬೇಕಾದ ಬಿಳಿಯ ಕಾಗದದ ಒಂದೊಂದು ಹಾಳೆಗೆ ಐದಾಣೆ ಬೆಲೆ. ೪೦ ಪುಟದ ಎಕ್ಸರಸೈಜು ಪುಸ್ತಕಕ್ಕೆ ಒಂದೂವರೆ ರೂಪಾಯಿ. ಒಂದು ಗಾಜಿನ ಲೋಟಕ್ಕೆ ಎರಡು ರೂಪಾಯಿ. ಒಂದು ಬೀಡಾಕ್ಕೆ ನಾಲ್ಕಾಣೆ. ಈ ಬೆಲೆಯ ಉಬ್ಬರವನ್ನು ಕೇಳಿ ಸಿಂಗಪುರದಲ್ಲಿ ಯಾವ ಸಾಮಾನನ್ನೂ ಕೊಂಡುಕೊಳ್ಳಕೂಡದೆಂದು ನಿರ್ಧರಿಸಿದೆ.

ಏಳು ದಿನಗಳಿಂದ ಪತ್ರಿಕೆಗಳನ್ನು ಓದಿರಲಿಲ್ಲ. ಅಲ್ಲಿಯೇ ಮಾರುತ್ತಿದ್ದ **ಸಂಡೇ ಟ್ರಿಬ್ಯೂನ್** (Sunday Tribune) ಎಂಬ ಪತ್ರಿಕೆಯನ್ನು ಐದಾಣೆ ಕೊಟ್ಟು ಕೊಂಡೆ. ಈ ಪತ್ರಿಕೆಯು ಸಿಂಗಪುರ, ಕೌಲಾಲಂಪುರ, ಐಹೋ, ನಗರಗಳಲ್ಲಿ ಏಕಕಾಲದಲ್ಲಿ ಪ್ರಕಟವಾಗುತ್ತಿತ್ತು. ಸಿಂಗಪುರದಲ್ಲಿ ಅಂದು ಮುನಿಸಿಪಲ್ ಕೆಲಸಗಾರರ ಸಂಪು ಪ್ರಾರಂಭವಾಗಿದ್ದು, ಪರಿಸ್ಥಿತಿ ಬಿಗಡಾ

ಯಿಸಿಕೊಂಡಿತ್ತು. ಸಿಂಗಪುರವೆಲ್ಲಾ ವಾಸನೆಯಿಂದ ನಾರುತ್ತಿತ್ತು. ನಗರ ನಿರ್ಮಲೀಕರಣ, ಈ ಸಂಪಿನಿಂದ ಸಂಪೂರ್ಣವಾಗಿ ನಿಂತುಹೋಗಿತ್ತು. ಸಂಡೇ ಟ್ರಿಬ್ಯೂನ್ ಪತ್ರಿಕೆಯಲ್ಲಿ ಅಂದಿನ ಪ್ರಮುಖ ಶಿರೋನಾಮೆಗಳು ಹೀಗಿದ್ದುವು: **"ಸಿಂಗಪುರದ ಮುನಿಸಿಪಲ್ ಕೆಲಸಗಾರರ ಧೃಡನಿಶ್ಚಯ"** (Singapore Municipal Workers' firm stand). ಇನ್ನೊಂದು **"ಬ್ರಾಡ್‌ಮನ್ನರು ನಾಲ್ಕನೇ ಅಡಿಲೇಡ್ ಟೆಸ್ಟಿನಲ್ಲಿ ಸೊನ್ನೆ ಓಟಗಳಿಗೆ ಔಟ್ ಆದರು"** (Bradman out for a duck in the 4th test at Adelaide) ಎಂದಿತ್ತು. ಈ ಪತ್ರಿಕೆಯಲ್ಲಿ ಭಾರತದ ಸುದ್ದಿಯೊಂದೂ ಇರಲಿಲ್ಲ.

**ಮಲಯನ್ ಟ್ರಿಬ್ಯೂನ್** (Malayan Tribune) ಎಂಬ ಇನ್ನೊಂದು ದಿನಪತ್ರಿಕೆಯನ್ನು ಕೊಂಡೆ. ಈ ಪತ್ರಿಕೆಯ ಗಾತ್ರ ಚಿಕ್ಕದಾದರೂ, ಚೆನ್ನಾಗಿತ್ತು. ಸುದ್ದಿ ವಿಭಜನೆ, ಸಂಪಾದಕೀಯ, ಲೇಖನಗಳು, ಚೆನ್ನಾಗಿದ್ದವು. ಅಧ್ಯಕ್ಷ **ಟ್ರೂಮನ್ನರು** 'ಭಾರತವು ಶಾಂತ ರೀತಿಯಿಂದಲೇ ಸ್ವಾತಂತ್ರ್ಯಗಳಿಸಿಕೊಳ್ಳುವುದು' ಎಂದು ಅಮೇರಿಕೆಯಲ್ಲಿನ ಭಾರತದ ರಾಯಭಾರಿಗಳಿಗೆ ಹೇಳಿದ ಸುದ್ದಿ ಪ್ರಕಟವಾಗಿತ್ತು. ಯುನೈಟೆಡ್ ನೇಷನ್ಸ್ ಸಭೆಯಲ್ಲಿ ಭಾರತದ **ಶ್ರೀಮತಿ ಹನ್ಸ ಮೆಹ್ತಾ,** ಪತ್ರಿಕಾ ಸ್ವಾತಂತ್ರ್ಯವನ್ನು ಎತ್ತಿಹಿಡಿದು ಹೇಳಿದ ಮಾತುಗಳೂ ಪ್ರಕಟವಾಗಿದ್ದುವು.

**ದಿ ಇಂಡಿಯನ್ ಡೈಲಿ ಮೈಲ್** (The Indian Daily Mail) ಎಂಬುದು ಇನ್ನೊಂದು ಸಿಂಗಪುರದ ದಿನಪತ್ರಿಕೆ. ಈ ಪತ್ರಿಕೆಯಲ್ಲಿ ಭಾರತದ ಸುದ್ದಿಗಳು ಅನೇಕವಿದ್ದುವು. ಮೊದಲನೆಯ ಪುಟದಲ್ಲಿ, ದೆಹಲಿಯಲ್ಲಿ ನಡೆದ ರಾಜರುಗಳ ಸಭೆ, ಆಳ್ವಾರ್ ರಾಜರ ಹೇಳಿಕೆ, ಮುಂತಾದುವುಗಳಿದ್ದವು. ಎರಡನೆಯ ಪುಟದಲ್ಲಿ, ಕಲ್ಕತ್ತೆಯಲ್ಲಿನ ವಿದ್ಯಾರ್ಥಿಗಳ ಹರತಾಳ, ನೇತಾಜಿಯ ಜನ್ಮದಿನೋತ್ಸವದ ಸುದ್ದಿಗಳು, ಅದಕ್ಕೆ ಸಂಬಂಧಪಟ್ಟ ಚಿತ್ರಗಳು ಪ್ರಕಟವಾಗಿದ್ದುವು. ಅಂದಿನ ಮೂರೂ ಪತ್ರಿಕೆಗಳ ಸಂಪಾದಕೀಯ, ಸಿಂಗಪುರದ ಸಂಪಿನ ವಿಷಯವೇ ಆಗಿತ್ತು.

ಮಾರ್ಕೆಟ್ಟಿನಿಂದ ಮುಂದೆ ಬರುತ್ತಾ ದಾರಿಯಲ್ಲಿ ಒಂದು ಸಿನಿಮಾ ಗೃಹ ಸಿಕ್ಕಿತು. ಅದರ ಹೆಸರು ರೆಕ್ಸ್ (Rex). **'ನಾಲ್ವರು ಬಿಳಿಯ ಹೆಂಗಸರು'** (Four White Ladies) ಎಂಬ ಚಿತ್ರ ಆಗ ನಡೆಯುತ್ತಿತ್ತು. ೧೬ ವರ್ಷದ ಕೆಳಗಿನ ಹುಡುಗ ಹುಡುಗಿಯರಿಗೆ ಪ್ರವೇಶವಿಲ್ಲ (Boys and Girls below 16 years are not allowed) ಎಂದು ಬರೆದ ಬೋರ್ಡ್ ಹಾಕಿದ್ದರು. ಜಾಹಿರಾತಿನ ಬೋರ್ಡಿನ ಮೇಲೆ 'ಮಾನ ಮುಚ್ಚಿಕೊಳ್ಳಲೂ ಕೂಡ ಹೇಸದ ಹೆಂಗಸಿನ ನಗ್ನ ಚಿತ್ರ' ವೊಂದಿತ್ತು.

ನಮ್ಮ ನಮ್ಮ ಕೆಲಸಗಳನ್ನು ಮುಗಿಸಿಕೊಂಡು ರಾತ್ರಿ ೯ ಘಂಟೆಗೆ ಷಿಲ್ಲಾಂಗ್ ರಸ್ತೆಯಲ್ಲಿರುವ ಕೃಷ್ಣವಿಲಾಸದಲ್ಲಿ ಎಲ್ಲರೂ ಸೇರಿದೆವು. ನಮ ಗೆಲ್ಲರಿಗೂ ಉದ್ದವಾದ ಅಗಲವಾದ ಒಳ್ಳೆಯ ಹಸರು ಕುಡಿ ಬಾಳೆ ಎಲೆಯನ್ನು ಹಾಕಿದ್ದರು. ಮೊದಲು ಚಟ್ನಿ ಬಡಿಸಿದರು. ಪಲ್ಯ ತರುವ ವೇಳೆಗೆ ಚಟ್ನಿ ಮುಗಿಸಿಬಿಟ್ಟಿದ್ದೆವು. ಉಪ್ಪೇರಿ, ಹಪ್ಪಳ, ಆಲೂಗಡ್ಡೆ ಪಲ್ಯ, ಸೊಗಸಾದ ಸಣ್ಣ ಅಕ್ಕಿ ಅನ್ನ, ಅವರೀಬೇಳೆ ಹುಳಿ, ತಿಳಿ ಗೊಡ್ಡು ಸಾರು, ಅಡಿಗೆ ಮಾಡಿ ಬಡಿಸಿದರು. ಸೊಗಸಾಗಿ ಹೊಟ್ಟೆ ಬಿರಿಯುವಂತೆ ಊಟ ಮಾಡಿದೆವು. ಬಡಿಸುವವನು ಕೂಡ ಸಂತೋಷದಿಂದ 'ಆಮ, ಆಮ' ಎನ್ನುತ್ತಾ ಧಂಡಿ ಯಾಗಿ ಮುಲಾಜಿಲ್ಲದೆ ಬಡಿಸುತ್ತಿದ್ದನು. ಅಂದಿನ ಊಟದ ರುಚಿ ನಮಗೆಂ ದಿಂದಿಗೂ ಬರಲಾರದು. ಊಟಕ್ಕೆ ಎರಡು ರೂಪಾಯಿ ಕೈತುಂಬಾ ಕೊಟ್ಟು ಹೊಟ್ಟೆತುಂಬಾ ಊಟ ಮಾಡಿದೆವು.

ಮನೆಯವರಿಗೆ ಸ್ನೇಹಿತರುಗಳಿಗೆ ಬರೆದ ಕಾಗದಗಳನ್ನು ಅಂಚೆಯ ಕಚೇರಿಗೆ ತಲುಪಿಸಲು ಹೋಟೆಲ್ ಮಾಲಿಕನಿಗೆ, ಅದಕ್ಕಾಗುವ ಸ್ಟ್ಯಾಂಪಿನ ಹಣದೊಂದಿಗೆ ಕೊಟ್ಟು ನಾವು ಕೃಷ್ಣವಿಲಾಸವನ್ನು ಬಿಟ್ಟೆವು. ಆ ಕೃಷ್ಣ ವಿಲಾಸದ ಅನುಭವ ನಾವೆಂದಿಗೂ ಮರೆಯದಂತಾಯಿತು.

**ಮಹದೇವನ್** ಎಂಬುವ ಭಾರತ ಸರ್ಕಾರದ ವಿದ್ಯಾರ್ಥಿ ವೇತನ ಪಡೆದ ವಿದ್ಯಾರ್ಥಿ, ನಮ್ಮನ್ನು ಸಿಂಗಪುರದಲ್ಲಿ ಕೂಡಿಕೊಂಡರು. ಅವರು ಬಲು ಅಂಜುಬುರುಕರಂತೆ ಕಂಡರು. ಹಡಗಿನ ಆಹಾರ ಪದಾರ್ಥಗಳಲ್ಲಿ ಎಲ್ಲದಕ್ಕೂ ಮಾಂಸವನ್ನು ಹಾಕಿರುತ್ತಾರೆಂದೂ, ಅಲ್ಲಿ ಕೊಡುವ, ಸೇಬು, ಕಿತ್ತಲೆ ಹಣ್ಣುಗಳನ್ನು ಕೂಡ ತಿನ್ನುತ್ತಿರಲಿಲ್ಲ. ಹಡಗಿನಲ್ಲಿ ಊಟಕ್ಕಾಗಿ ಬಾಯಿ ಚಪ್ಪರಿಸಿಕೊಳ್ಳಲು ಒಂದು ಉಪ್ಪಿನಕಾಯಿಯ ಭರಣಿಯನ್ನು ಕೊಂಡು ಕೊಂಡಿದ್ದರು. ಪೇಟೆಯಿಂದ ಹಡಗಿಗೆ ಹೋಗುವಾಗ, ಕಾರಿನಿಂದಿಳಿಯು ವಾಗ ಉಪ್ಪಿನಕಾಯಿಯ ಭರಣಿಯನ್ನು ಕಾರಿನಲ್ಲೇ ಬಿಟ್ಟು ಬಿಟ್ಟು ಹಡಗು ಹತ್ತಿಬಿಟ್ಟರು. ಹಡಗು ಬಂದರನ್ನು ಬಿಟ್ಟಮೇಲೆ ಆತನಿಗೆ ನೆನಪಾಗಿ, ಸ್ಯಾನ್ ಫ್ರಾನ್ ಸಿಸ್ಕೋ ಮುಟ್ಟುವವರೆಗೆ ಅದರ ಬಗ್ಗೆ ನೊಂದುಕೊಳ್ಳು ತ್ತಿದ್ದರು.

ಸಿಂಗಪುರಕ್ಕೆ ನಮಸ್ಕಾರ ಹೊಡೆದು ರಾತ್ರಿ ೧೧ ಘಂಟೆಗೆ ಹಡಗನ್ನೇರಿ ದೆವು. ನಡಿಗೆಯ ಆಯಾಸ, ಹೊಟ್ಟೆತುಂಬಿದ ಜಡ, ನಿದ್ರೆಯನ್ನು ಜಾಗ್ರತೆ ತಂದಿತು. '**ದಿ ಸ್ಟ್ರೈಟ್ಸ್ ಬಡ್ಜೆಟ್**' (The Straits Budget) ಎಂಬ ವಾರಪತ್ರಿಕೆಯನ್ನು ಓದುತ್ತಾ ಮಲಗಿದೆ. ನಿದ್ರೆ ಹಾಗೆಯೇ ಬಂದುಬಿಟ್ಟಿತು. ಸಿಂಗಪುರದ ದೀಪಮಾಲೆಯ ಹಡಗು ರಂಜಿತ ಪ್ರಕೃತಿ ಸೌಂದರ್ಯದ ಸೊಬಗನ್ನು ಸವಿಯುತ್ತಾ ನಿದ್ರೆಹೋದೆ.

### ಇಂಡೋ ಚೈನಾ ಗಲ್ಫ್

೩-೨-೧೯೪೭.

ಇಂದು ವಿಪರೀತ ಮಳೆ ಬಿದ್ದಿತು. ಭಯಂಕರವಾದ ಅಲೆಗಳಿಂದ ಕರಾಳ ನೃತ್ಯವಾಡುತ್ತಿರುವ ಹಳದೀ ಸಮುದ್ರ (Yellow Sea) ಭೀಕರವಾಗಿ ಕಾಣುತ್ತಿತ್ತು. ಹಡಗು ಬಿರುಸಾದ ಅಲೆಗಳಿಗೆ ಸಿಕ್ಕಿ, ಓಲಾ ಡುತ್ತಾ, ತೇಲಾಡುತ್ತಾ, ಎಲ್ಲರ ತಲೆಯನ್ನು ತಿರುಗು-ಮುರುಗು ಮಾಡಿ

ಕೊಂಡು ನಿರಾತಂಕವಾಗಿ ನಡದೇ ಇತ್ತು. ಹಿಂದೂಸಾಗರವನ್ನು ದಾಟಿ ನಾವು ಆಗಲೇ ಹಳದಿ ಸಮುದ್ರವನ್ನು ಮುಟ್ಟಿದ್ದೆವು.

ತಿರುವಾಂಕೂರಿನ ಪಾದ್ರಿ ಈ ರಾತ್ರಿ ಅಂತರರಾಷ್ಟ್ರೀಯ ಸಂಗೀತ ಕಚೇರಿಯನ್ನೇರ್ಪಡಿಸಿದ್ದರು. ನಮ್ಮ ಡಾ|| ಸ್ವಾಮಿ, ಕನ್ನಡ ಜೈಮಿನಿ ಭಾರತದ ಹಾಡುಗಳನ್ನು ಹೇಳಿ, ಕನ್ನಡ ನಾಡನ್ನು ಪ್ರತಿನಿಧಿಸಿದರು.

**ಥೈಲ್ಯಾಂಡ್ಸ್**
೪-೨-೪೭.

ಆಕಾಶವೆಲ್ಲಾ ಮೋಡದಿಂದ ಕಪ್ಪಗೆ ಕವಿದಿದ್ದಿತು. ಹಳದಿ ಸಮುದ್ರ ಭೀಕರವಾಗಿತ್ತು. ಹಡಗು ಮೇಲಕ್ಕೆ ಕೆಳಕ್ಕೆ ಏಳುತ್ತ ಬೀಳುತ್ತ ನಡೆದಿತ್ತು. ಮುಕ್ಕಾಲುವಾಸಿ ಪ್ರಯಾಣಿಕರಿಗೆ **'ಸಮುದ್ರದ ಖಾಹಿಲೆ'**(Sea Sickness) ಬಂದಿತ್ತು. ಹಡಗು ಜೀವನ ಈ ದಿನ ಸಪ್ಪೆಯಾಗಿತ್ತು.

**ಹಾಂಕಾಂಗ್**
೬-೨-೪೭

ಬ್ರಿಟಿಷರ ವಶದಲ್ಲಿರುವ ಪೂರ್ವ ತೀರದ ಸುಪ್ರಸಿದ್ಧ ಬಂದರಾದ **ಹಾಂಕಾಂಗ್**ಗೆ ನಮ್ಮ ಹಡಗು ಸುರಕ್ಷಿತವಾಗಿ ಬಂದಿತು. ಎರಡು ಪರ್ವತಶ್ರೇಣಿಗಳ ಮಧ್ಯದಲ್ಲಿ ತೆವಳಿಕೊಂಡು ನಮ್ಮ ಹಡಗು ಬಂದರನ್ನು ಸೇರಿತು. ಎರಡೂ ಕಡೆಯೂ ಬೆಟ್ಟಗಳ ಮೇಲೆ ಸುಂದರವಾದ ಅಂದವಾದ ಸೌಧಗಳನ್ನು ಸಾಲುಸಾಲಾಗಿ ಬಂದರ ಕೆಳಗೊಂದು ಕಟ್ಟಿದ್ದಾರೆ. ಸಮುದ್ರದ ಎರಡೂ ದಂಡೆಗಳ ಮೇಲೆ ಒಂದೊಂದು ಪಟ್ಟಣ. ಎಡಕ್ಕೆ **ಹಾಂಕಾಂಗ್** ಬಲಕ್ಕೆ **ಕೌಲೂನ್.** ಎರಡು ಬಂದರಿಗೂ ಅಂತರ ಸುಮಾರು ಅರ್ಧ ಮೈಲಿ. ಫೆರಿಯಲ್ಲಿ ಐದು ನಿಮಿಷದ ದಾರಿ.

ಹಾಂಕಾಂಗ್ ಬಂದರಿನ ಬಹು ಭಾಗವು ಜಪಾನಿಯರ ಧಾಳಿಯಿಂದ ಜಖಂ ಆಗಿದ್ದುದರಿಂದ ನಮ್ಮ ಹಡಗು ಕೌಲೂನ್ ಬಂದರಿನಲ್ಲಿಯೇ ಇಳಿಯಬೇಕಾಯಿತು. ಮಧ್ಯದಲ್ಲಿಯೇ ಅಧಿಕಾರಿಯೊಬ್ಬನು ನಮ್ಮ ರಹದಾರಿಗೆ ತನ್ನ ತಸ್ಸೆ ಒತ್ತಿ ನಮಗೆ ಹಾಂಕಾಂಗ್‌ನಲ್ಲಿಳಿಯಲು ಅಪ್ಪಣೆಯಿತ್ತನು.

ಹಡಗಿನಿಂದ ಕೆಳಗಿಳಿಯಲು ನಮಗೆ ೨ ಘಂಟೆ ತಡವಾಯಿತು. ನಾವು ನಾಲ್ವರು ಮುಂದಾಗಿ ಬಂದುದರಿಂದ ಜಾಗ್ರತೆ ನಮ್ಮ ತನಿಖೆ ನಡೆಯಿತು. ಸಂಜೆ ೫ ಘಂಟೆಗೆ ನಾವು ಹಾಂಕಾಂಗ್ ಬೀದಿಯಲ್ಲಿದ್ದೆವು. ಹಾಂಕಾಂಗಿ ನಲ್ಲಿಯೂ ನಾವು ಹಣ ಬದಲಾವಣೆ ಮಾಡಬೇಕಿತ್ತು. ಅಮೇರಿಕದ ಒಂದು ಡಾಲರಿಗೆ ಹಾಂಕಾಂಗ್‌ನ ನಾಲ್ಕು ಡಾಲರು ಸಿಗುತ್ತಿದ್ದವು. ಮೊದಲು **ಹಾಂಕಾಂಗ್** ನೋಡೋಣವೆಂದು ತೀರ್ಮಾನಿಸಿ ಕೌಲೂನಿನಿಂದ ೧೦ ಸೆಂಟ್ಸ್ ಕೊಟ್ಟು ಫೆರಿಯನ್ನು ಹತ್ತಿ ಐದು ನಿಮಿಷದಲ್ಲಿ ಹಾಂಕಾಂಗ್ ತಲ್ಪಿದೆವು. ಫೆರಿಯಲ್ಲಿಯೂ, ಒಂದು ಮತ್ತು ಎರಡನೆಯ ತರಗತಿಗಳಿವೆ. ಒಂದು ಫೆರಿ ಯಲ್ಲಿ ಒಂದು ಸಲಕ್ಕೆ ೨೦೦ ಜನರು ಕೂಡಬಹುದು. ಬೆಳಿಗ್ಗೆ ೯ ಘಂಟೆ ಯಿಂದ ಪ್ರಾರಂಭವಾದ ಈ ಫೆರಿ ಸರ್ವೀಸು ರಾತ್ರಿ ಒಂದು ಘಂಟೆಯ ವರೆಗೆ ನಡೆಯುತ್ತದೆ.

ಹಾಂಕಾಂಗಿನಲ್ಲಿ ನಮ್ಮ ಮೊದಲನೆಯ ಕೆಲಸ, ಪೋಸ್ಟ್ ಆಫೀಸು ಹುಡುಕುವುದು. ಅದು ಐದು ನಿಮಿಷದಲ್ಲಿ ಸಿಕ್ಕಿತು. ಒಂದು ವಿಮಾನ ಅಂಚೆ ಕಾಗದಕ್ಕೆ ಅಲ್ಲಿಯ ಒಂದು ಡಾಲರು. ಒಂದು ಕಾರ್ಡಿಗೆ ೨೦ ಸೆಂಟ್ಸ್ ಬೆಲೆ.

ಎಲ್ಲಿಯಾದರೂ ಇಂಡಿಯನ್ ಕೆಫೆ ಇದೆಯೋನೊ ಎಂದು ಹುಡುಕಾ ಡಿದೆವು. ನಾಲ್ಕು ಮೈಲಿ ದೂರದಲ್ಲಿ **ಟಿನ್ ಲಾಕ್ ಲೇನ್** ಹತ್ತಿರ ಇರುವು ದಾಗಿ ದಾರಿಯಲ್ಲಿ ಸಿಕ್ಕಿದ **ಕುಕ್ಸ್**ಕಂಪೆನಿಯ ಪ್ರತಿನಿಧಿಯೊಬ್ಬರು ತಿಳಿಸಿ ದರು. ಆಗಿನ್ನೂ ೯ ಘಂಟೆ ಆಗಿತ್ತು. ಸ್ವಲ್ಪ ಸುತ್ತಾಡಿಕೊಂಡು ಅಲ್ಲಿಗೆ ಹೋಗೋಣವೆಂದು ಪಕ್ಕದಲ್ಲಿಯೇ ಇದ್ದ ರಷ್ಯನ್ ಹೋಟೆಲಿಗೆ ನಡೆದೆವು. ಅಲ್ಲಿ ಒಳ್ಳೆಯ ಕಾಫಿಯೇನೊ ಸಿಕ್ಕಿತು. ಒಂದು ಕಪ್ಪು ಕಾಫಿಗೆ ೫೦ ಸೆಂಟ್ಸ್. (ಸುಮಾರು ಏಳು ಆಣೆ.) ಅಲ್ಲಿಂದ ವೆಸ್ಟ್ ಮಾರ್ಕೆಟ್ ಕೊನೆ ಯವರೆಗೂ ಹೋಗಿ ಒಂದು ತರಹದ ಸೀಬೆ ಹಣ್ಣುಗಳನ್ನು ಕೊಂಡು ತಿಂದೆವು. ಸ್ವಲ್ಪ ದೂರ ಹೋಗುವಷ್ಟರಲ್ಲಿ ಒಬ್ಬಾತ ಕಡಲೇಕಾಯಿ ಹುರಿ ದಿಟ್ಟು ಮಾರುತ್ತಿದ್ದ. ಸ್ವಾಮಿ, ಚಂಗನೆ ಹಾರಿ ನಾಲ್ಕು ಬೊಗಸೆ ಕಡಲೆ

ಕಾಯಿ, ೪೦ ಸೆಂಟ್ಸ್ ಕೊಟ್ಟು ಕೊಂಡೇಬಿಟ್ಟರು. ಅಲ್ಲಿಂದ ಟ್ರ್ಯಾಮ್ ಹತ್ತಿ **ಹ್ಯಾಪಿ ವ್ಯಾಲಿಗೆ** (Happy Valley) ಹೊರಟು ಊರೆಲ್ಲಾ ಸುತ್ತಿ ಕೊನೆಗೆ ರಾತ್ರಿ ೮|| ಘಂಟೆ ಹೊತ್ತಿಗೆ ಟಿನ್ ಲಾಕ್ ಲೇನ್ ಹತ್ತಿರವಿರುವ ಇಂಡಿಯನ್ ಕೆಫೆ ಹುಡುಕಿಕೊಂಡು ಹೊರೆಟೆವು. ಸುಮಾರು ಒಂದು ಘಂಟೆಯಕಾಲ ಹುಡುಕಿದರೂ ಇಂಡಿಯನ್ ಕೆಫೆ ಸಿಕ್ಕಲಿಲ್ಲ. ಅಲ್ಲಿಯೆ ನೆಲಸಿದ್ದ ಭಾರತೀಯ ಸಿಕ್ ಒಬ್ಬರನ್ನು ಕೇಳಲಾಗಿ ಹಾಂಕಾಂಗಿನಲ್ಲಿ ಭಾರತೀಯ ಫಲಹಾರ ಮಂದಿರವೇ ಇಲ್ಲವೆಂದು ತಿಳಿಸಿದರು. ಪಕ್ಕದಲ್ಲಿನ ಓಣಿಯೊಂದರಲ್ಲಿ ಇಸ್ಲಾಮಿ ಫಲಹಾರ ಮಂದಿರವೊಂದಿತ್ತು. ಅಲ್ಲಿ ಬರೀ ಮಾಂಸಾಹಾರವೇ ಇದ್ದುದರಿಂದ, ಸುತ್ತಿ ಸುಣ್ಣಾದ ನಾವು ಬಾಳೆ ಹಣ್ಣು, ಬಿಸ್ಕತ್ತುಗಳಲ್ಲಿ ನಮ್ಮ ಹಸಿವು ಇಂಗಿಸಿಕೊಂಡು ರಾತ್ರಿ ಕಳೆಯೋಣವೆಂದು ಯೋಚಿಸುತ್ತಾ ಬರುತ್ತಿರುವಾಗ ನಮ್ಮ ಗೆಳೆಯರನೇಕರು ರಷ್ಯನ್ ಕೆಫೆಯ ಅನ್ನ ಹುಳಿಯ ಸಮಾಚಾರ ತಿಳಿಸಿದರು. ಪುನಃ ನಾವಲ್ಲಿಗೆ ಹೋಗಿ ಸೊಗಸಾದ ಸಣ್ಣ ಅಕ್ಕಿ ಅನ್ನ, ಅನೇಕ ತರಕಾರಿ ಹಾಕಿದ ಹುಳಿ ಊಟ ಮಾಡಿ ರಾತ್ರಿ ೧೦ ಘಂಟೆಗೆ ಕೌಲೂನ್‌ಗೆ ಬಂದೆವು.

ಕೌಲೂನ್ ಪಟ್ಟಣದ ಅಂಗಡಿ ಬೀದಿಗಳಲ್ಲಿ ಅಲೆದಾಡುವಾಗ **ಕೃಷ್ಣಾ ಸಿಲ್ಕ್ ಸ್ಟೋರ್ಸ್** ಎಂಬ ಭಾರತೀಯನಿಟ್ಟಿದ್ದ ಅಂಗಡಿಯನ್ನು ನೋಡಿದೆವು. ಒಬ್ಬ ಗುಜರಾತಿ ಆ ಅಂಗಡಿಯನ್ನಿಟ್ಟಿದ್ದ. ಅಲ್ಲಿಂದ ಮುಂದೆ ಶ್ರೀ ಗೋಪಿನಾಥ್ ಮತ್ತು ನಾನು ಚೀನಿಯರ **"ಅಲಂಬ್ರ"**,ಎಂಬ ಚಲನ ಚಿತ್ರ ಮಂದಿರದಲ್ಲಿ, ಇಂಗ್ಲೀಷ್ ಚಿತ್ರವನ್ನು ನೋಡಿಕೊಂಡು ರಾತ್ರಿ ಹನ್ನೆರಡು ಘಂಟೆಗೆ ಹಡಗಿಗೆ ಬಂದು ಮಲಗಿಕೊಂಡೆವು.

**ಕೌಲೂನ್**

೭—೨—೪೭

**ಕೌಲೂನ್** ಚೀನೀಯರ ಸಂಸ್ಕೃತಿಯನ್ನು ಬೀರುವ ನಗರ. ಇಲ್ಲಿಯ ಜನ ತುಂಬಾ ಚುರಕಾಗಿ ಕಂಡರು. ಅವರ ಕೈ ಚಳಕ ಬಲು ನಾಜೂಕಾಗಿ

ಕಂಡಿತು. ಚೀನಿ ಹೆಂಗಸರು ಬಲು ಮಡಿಯುಸವರಂತೆ ನಮಗೆ ಕಂಡಿತು. ಭಾರತೀಯ ಹೆಂಗಸರಂತೆ ಚೀನಿ ಹೆಂಗಸರು ಜಡೆ ಹೆಣೆದುಕೊಳ್ಳುತ್ತಿದ್ದರೂ ಹಣೆಯ ಮೇಲೆ ಯಾವ ತಿಲಕವನ್ನೂ ಇಟ್ಟುಕೊಳ್ಳುತ್ತಿರಲಿಲ್ಲ. ಕೌಲೂನಿನ ಫಲಹಾರ ಮಂದಿರಗಳು ಶುಭ್ರವಾಗಿಯೂ, ಚೊಕ್ಕಟವಾಗಿಯೂ ಇದ್ದವು. ಅಲ್ಲಿ ನಮಗೆ ಒಳ್ಳೆಯ ಹಾಲೂ ಸಿಕ್ಕಿತು. ಒಂದು ಕಪ್ಪು ಹಾಲಿಗೆ ೭೦ ಸೆಂಟ್ಸ್ ಕೊಟ್ಟೆವು.

ಹತ್ತಿರದಲ್ಲಿಯೇ ಇದ್ದ ಒಂದು ಚರ್ಚಿಗೆ ಹೋಗಿ ಅಲ್ಲಿಯ ಪುಸ್ತಕ ಭಂಡಾರವನ್ನು ನೋಡಿದೆವು. ಅಲ್ಲಿ ಅನೇಕ ಭಾಷೆಗಳ ಪುಸ್ತಕಗಳಿದ್ದವು. ಹಿಂದಿ, ಉರ್ದು, ಮರಾಠಿ, ತೆಲುಗು ಮತ್ತು ತಮಿಳು ಭಾಷೆಯ ಪುಸ್ತಕಗಳಿದ್ದವು. ಕನ್ನಡ ಭಾಷೆಯ ಪುಸ್ತಕಗಳು ಕಣ್ಣಿಗೆ ಕಾಣಲಿಲ್ಲ.

ಚೈನಾ ದೇಶದಲ್ಲೂ ಇಂಗ್ಲೀಷ್ ಭಾಷೆಯಲ್ಲಿ ಅನೇಕ ದಿನ ಪತ್ರಿಕೆಗಳಿವೆ. ಅಂತಹದರಲ್ಲಿ ಒಂದು **'ಚೈನಾ ಸಂಡೇ ಮೈಲ್'** (China Sunday Mail). ಅದರ ಒಂದು ಪ್ರತಿಯನ್ನು ಶ್ರೀ ಕೃಷ್ಣ ಶರ್ಮರಿಗೆ ಕಳುಹಿಸಿಕೊಟ್ಟೆನು. ಇಲ್ಲಿಯ ಪುಸ್ತಕಮಾರುವ ಅಂಗಡಿಗಳಿಗೂ ಭೇಟಿ ಕೊಟ್ಟೆನು. ಇಂಗ್ಲೀಷ್ ಭಾಷೆಯಲ್ಲಿ ಪ್ರಕಟವಾದ ಕವಿ ರವೀಂದ್ರರ ಪುಸ್ತಕಗಳ ಹೊರತೂ ಭಾರತದ ಇನ್ನಾವ ಪುಸ್ತಕಗಳೂ ಅಲ್ಲಿರಲಿಲ್ಲ.

**ಷಾಂಘೈ**

೯—೨.೪೭

ಕೊರೆಯುವ ಚಳಿಯಲ್ಲಿ ಎರಡು ದಿನ ಪ್ರಯಾಣ ಮಾಡಿ ಷಾಂಘೈ ನಗರಕ್ಕೆ ಬಂದೆವು. ಚೈನಾ ದೇಶದ ಬಹು ದೊಡ್ಡದಾದ **ಯಾಂಗ್‌ಟಿಸಿ** ನದಿಯು ಹಳದಿ ಸಮುದ್ರಕ್ಕೆ ಬೀಳುತ್ತದೆ. ಹಡಗಿನ ಪ್ರಯಾಣಕ್ಕೆ ಯೋಗ್ಯವಾದ ಈ ನದಿಯಲ್ಲಿ ೮೦ ಮೈಲಿ ನಮ್ಮ ಹಡಗು ಯಾನಮಾಡಿ ಷಾಂಘೈ ನಗರವನ್ನು [illegible]ಲ್ಪಿತು.

ಹಡಗು ನಿಲ್ದಾಣವನ್ನು ತಲ್ಪಿದಾಗ ಸಾಯಂಕಾಲ ೬ ಘಂಟೆಯಾಯಾಗಿತ್ತು. ಷಾಂಘೈ ನಗರವನ್ನು ನೋಡಲು ನಾವೆಲ್ಲರೂ ಕಾತುರರಾಗಿದ್ದೆವು. ಆದರೆ ನಮಗೆ ಚೀನಿ ವೀಸಾ ಇರಲಿಲ್ಲವಾದ್ದರಿಂದ ಹಡಗಿಳಿಯಲು ಅವಕಾಶ ಕೊಡಲಿಲ್ಲ.

ಷಾಂಘೈ ನಗರವೂ ಯುದ್ಧದ ಹೊಡೆತಕ್ಕೆ ಸಿಕ್ಕಿ ಬಳಲಿದ ನಗರ. ಬಡತನವು ಚೀನಿಯರ ಮುಖದಮೇಲೆ ಎದ್ದು ಕಾಣುತ್ತಿತ್ತು. ಚೀನಿ ಹೆಂಗಸರು, ಗಂಡಸರು, ದೋಣಿಯಲ್ಲಿ ನಮ್ಮ ಹಡಗಿನ ಹತ್ತಿರ ಬಂದು ಕಳ್ಳವ್ಯಾಪಾರ ನಡೆಸುತ್ತಿದ್ದರು. ಹಣಕ್ಕೆ ಬದಲಾಗಿ, ಹಣ್ಣು, ಆಹಾರ, ಬಟ್ಟೆಗಳನ್ನು ಕೊಟ್ಟರೆ, ಸಾಮಾನುಗಳನ್ನು ಕೊಡುತ್ತಿದ್ದರು. ಸಿಗರೇಟನ್ನು ಕೊಟ್ಟರೆ ಅವರು ಯಾವ ಸಾಮಾನನ್ನು ಬೇಕಾದರೂ ಕೊಡುತ್ತಿದ್ದರು. ಎರಡು ಪ್ಯಾಕ್ ಸಿಗರೇಟಿಗೆ, ಬೆಲೆ ಬಾಳುವ ಸಿಲ್ಕ್ ಬಟ್ಟೆಗಳು, ಚರ್ಮದ ಸೂಟ್‌ಕೇಸ್, ಚಿತ್ರದ ಸಾಮಾನುಗಳೂ ಸಿಕ್ಕುತ್ತಿದ್ದವು.

ಷಾಂಘೈ ನಗರವನ್ನು ನೋಡಬೇಕೆಂಬ ಆಸೆ ನಮ್ಮಲ್ಲಿ ಬಲವಾಯಿತು. ಬಂದರಿನ ಪೋಲೀಸ್ ಅಧಿಕಾರಿಗಳಿಂದ ವಿಶೇಷ ಅಪ್ಪಣೆ ಪಡೆದು, ಬೆಳಿಗ್ಗೆ ಷಾಂಘೈ ನಗರವನ್ನು ನೋಡಲು ಹೊರಟೆವು.

ನಗರದಲ್ಲಿ ನಡೆದು ಬರುತ್ತಿರುವಾಗ ಸುದ್ದಿಗಾರನೊಬ್ಬ ಸಿಕ್ಕಿ, ನನ್ನ ಭಾರತೀಯ ಉಡುಪನ್ನು ನೋಡಿ, ಭಾರತದ ಬಗ್ಗೆ ಕೆಲವು ಪ್ರಶ್ನೆಗಳನ್ನು ಹಾಕಿ, ಗಾಂಧೀಜಿಯವರ ಬಂಗಾಳದ ಕಾಲ್ನಡಗೆಯ ಪ್ರವಾಸದ ವಿಚಾರ ತಿಳಿದುಕೊಂಡನು. ಈ ಸುದ್ದಿಗಾರನ ಹೆಸರು **ವಾಂಗ್‌ಕೈ** ಎಂದು. ಈತ ಜರ್ಮನಿಯ ಯೆಹೂದಿ. ಇಲ್ಲಿ ಎಂಟು ವರ್ಷಗಳಿಂದ ನೆಲೆಸಿದ್ದಾನೆ. ಚೀನಿ ಹುಡುಗಿಯನ್ನು ಮದುವೆಯಾಗಿ ಸುಖವಾಗಿದ್ದಾನೆ. **ಹಿಟ್ಲರ್**‌ನನ್ನು ಕಂಡರೆ ಈತನಿಗೆ ಬ್ರಹ್ಮಾಂಡ ಕೋಪ. 'ನೀವು ಜರ್ಮನಿಗೆ ಹೋಗುವುದಿಲ್ಲವೇ?' ಎಂದು ಕೇಳಿದರೆ, 'ಅಲ್ಲಿ ಏನಿದೆ? ತಾಯಿ ತಂದೆ ಮರಣ ಹೊಂದಿದಾರೆ. ಹಿಟ್ಲರನ ಜರ್ಮನಿ ಕ್ರೂರವಾದದ್ದು' ಎನ್ನುತ್ತಾನೆ

ಈತನೇ ನಮಗೆ ಷಾಂಘೈನಗರದ ಸೂಕ್ಷ್ಮ ಪರಿಚಯ ಮಾಡಿಕೊಟ್ಟನು. ಹಣದ ಬಗ್ಗೆ ನಮಗೆ ಎಚ್ಚರಿಕೆ ಕೊಟ್ಟು ನಮ್ಮನ್ನು ನಮಸ್ಕರಿಸಿ ಬೀಳ್ಕೊಟ್ಟನು.

ಷಾಂಘೈ ಮುಖ್ಯ ರಸ್ತೆಯಾದ **ಟೆ ಮಿಂಗ್** ರಸ್ತೆಯನ್ನು ಹಾದು ನಗರದ ಮುಖ್ಯ ಸ್ಥಳವಾದ **ಚೈನಾ ಬ್ಯಾಂಕ್ ಸರ್ಕಲ**ಕ್ಕೆ ನಡೆದುಕೊಂಡೆ ಬಂದೆವು. ಅಲ್ಲಿಯ ಟ್ರಾಂ ಗಾಡಿಗಳನ್ನು ನೆನಸಿಕೊಂಡರೆ ಹಳೆ ದೆಹಲಿಯ ಟ್ರಾಂ ಗಾಡಿಗಳ ನೆನಪಾಗುತ್ತದೆ.

ಇಲ್ಲಿ ನಮಗೆ ಥಂಡಿ ಜಾಸ್ತಿಯಾಯಿತು. ಜರ್ಮನ್ ಯೆಹೂದಿಯ ಅಂಗಡಿಯೊಂದರಲ್ಲಿ ಕೈಗೆ ಹಾಕಿಕೊಳ್ಳಲು 'ಗ್ಲೌಸ್' ಕೊಂಡೆವು, ನಾನು ಮತ್ತು ಸ್ವಾಮಿ. ಒಂದು ಜೊತೆ 'ಗ್ಲೌಸ್'ಗೆ ಒಂದು ಸಾವಿರ ಚೀನಿ ಡಾಲರು ಬೆಲೆ.

ಇಲ್ಲಿ ಹಣದ ಉಬ್ಬರ ಇಳಿತದ ದೆಸೆಯಿಂದ (inflation) ನಾಣ್ಯ ಚಲಾವಣೆಯೇ ಇರಲಿಲ್ಲ. ಬರೀ ಕಾಗದದ ನೋಟುಗಳು. ಅಮೇರಿಕದ ಒಂದು ಡಾಲರಿಗೆ, (ಅಂದರೆ ಭಾರತದ ಮೂರುವರೆ ರೂಪಾಯಿಗೆ), ಸರ್ಕಾರಿ ನಿರ್ಣಯದ ರೀತ್ಯಾ, ಚೈನಾದ ೯೦೦೧ ಡಾಲರು ಸಿಕ್ಕುತ್ತಿತ್ತು. ಕಳ್ಳಂಗಡಿಯಲ್ಲಿ ೧೧, ೦೦೦ ಡಾಲರು ಸಿಕ್ಕುತ್ತಿದ್ದವು.

ಯಾಂಗ್‌ಟಿಸಿ ನದಿಗೆ ಒಂದು ದೊಡ್ಡ ಸೇತುವೆಯನ್ನು ಕಟ್ಟಿದಾರೆ. ಆ ಸೇತುವೆಯನ್ನು ಹಾದು ನಗರದ ವಿಪರೀತ ಜನಸಂದಣಿಯಿರುವ ಪ್ರದೇಶಕ್ಕೆ ಬಂದೆವು. ಅಲ್ಲಿನ ಮಾರ್ಕೆಟ್ಟು, ಜನವಸತಿ ಬಿಡಾರ, ನೋಡಿಕೊಂಡು ಪುನಃ ಹಡಗಿಗೆ ಮಧ್ಯಾಹ್ನ ೧೨ ಘಂಟೆಗೆ ಬಂದೆವು. ೧೨-೩೦ ಘಂಟೆಗೆ ಹಡಗು ಷಾಂಘೈ ನಗರವನ್ನು ಬಿಟ್ಟಿತು.

**ಯಾಕೋಹಾಮ**

೧೩—೨—೪೭.

ಜಪಾನದ ಸುಪ್ರಸಿದ್ಧ ಬಂದರಾದ **ಯಾಕೋಹಾಮ**ಕ್ಕೆ ಬರಲು ಎರಡು ದಿನಗಳು ಹಿಡಿಯಿತು. ಜಪಾನ್ ಸಮುದ್ರದ ಯಾನವು ಭಯಂಕರ

ವಾಗಿತ್ತು. ರಾತ್ರಿ ಬಿರುಗಾಳಿಯ ಹೊಡೆತಕ್ಕೆ ಸಿಕ್ಕಿದ ಹಡಗು ಸುಖವಾಗಿ ಯಾಕೋಹಾಮುವನ್ನು ತಲ್ಪಿದ್ದು ಹಡಗಿನಲ್ಲಿದ್ದವರ ನಮ್ಮ ಪುಣ್ಯವೇ ಸರಿ.

ಯಾಕೋಹಾಮುದಿಂದ ೧೦ ಮೈಲಿ ದೂರದಲ್ಲಿ ಜಪಾನಿನ ರಾಜಧಾನಿ **ಟೋಕಿಯೋನಗರ** ಇದೆ.

ಉಳಿದಕಡೆಗಳಲ್ಲಿ ಬಂದರಿನಲ್ಲಿ ಇಳಿದು ಹೋಗಲು ಸ್ವಾತಂತ್ರ್ಯ ಸಿಕ್ಕ ಹಾಗೆ ಇಲ್ಲಿ ಸಿಗಲಿಲ್ಲ. ಜಪಾನು ಆಗಿನ್ನೂ ಮಿಲಿಟೆರಿ ವಶದಲ್ಲಿಯೇ ಇತ್ತು. ಇಲ್ಲಿ ಪ್ರಯಾಣಿಕರ್‍ಯಾರು ಹಡಗನ್ನೇರಲಿಲ್ಲ. ಬೆಳಿಗ್ಗೆ ಲಂಗರು ಬಿಟ್ಟ ಹಡಗು ಮಧ್ಯಾಹ್ನ ಎರಡು ಘಂಟೆಗೆ ಹೊನಲೂಲುವಿಗೆ ಹೊರಟು ಬಿಟ್ಟಿತು.

ಹಡಗಿನ ನಿಲ್ದಾಣಕ್ಕೆ ಸ್ವಲ್ಪ ಹತ್ತಿರದಲ್ಲಿಯೇ ಯಾಕೋಹಾಮು ಪಟ್ಟಣ ಕಣ್ಣಿಗೆ ಕಾಣಿಸುತ್ತಿತ್ತು. ರಸ್ತೆಗಳಲ್ಲಿ ಜನಗಳ ಓಡಾಟವೇ ಕಾಣಲಿಲ್ಲ. ಅಸಾಧ್ಯ ಸಂಖ್ಯೆಯಲ್ಲಿ ಮಿಲಿಟೆರಿ ಟ್ರಕ್ಕುಗಳು, ಅತ್ತಿಂದಿತ್ತ, ಇತ್ತಿಂದತ್ತ ಓಡಾಡುತ್ತಿದ್ದುವು. ಪಟ್ಟಣವು ದಿಣ್ಣೆಯಮೇಲೆ ರಚಿತವಾಗಿತ್ತು.

**ಪೆಸಿಫಿಕ್ ಸಾಗರ**

೧೪—೨—೪೭

ನಮ್ಮಹಡಗು **ಪೆಸಿಫಿಕ್** ಸಾಗರವನ್ನು ಮುಟ್ಟಿದಮೇಲೆ ನಾವು ಏಳು ಸಮುದ್ರಗಳನ್ನು ದಾಟಿದಂತಾಯಿತು. **ಅರೇಬಿಯನ್ ಸಮುದ್ರ, ಹಿಂದುಸಾಗರ, ಹಳದೀಸಮುದ್ರ, ದಕ್ಷಿಣಚೈನಾ ಸಮುದ್ರ, ಜಪಾನ್ ಸಮುದ್ರ,** ಮತ್ತು **ಟೋಕಿಯೋ ಕೊಲ್ಲಿಯ**ನ್ನು ಹಾದು ಪೆಸಿಫಿಕ್ ಸಾಗರಕ್ಕೆ ಬಂದಿದ್ದೆವು.

ಪೆಸಿಫಿಕ್ ಸಾಗರ ಯಾನವು ಎಲ್ಲರನ್ನೂ ಮಲಗಿಸಿ ಬಿಟ್ಟಿತು. ಬಿರುಸಾದ ಮಳೆಬಂದು, ಮಂಜುಕವಿದು, ಥಂಡಿ ಹೆಚ್ಚಾಗಿ ಎಲ್ಲರೂ ಕ್ಯಾಬಿನ್ನು ಹಿಡಿದು ಬಿಟ್ಟಿದ್ದರು. ಸಾಲದ್ದಕ್ಕೆ ಅಲೆಗಳ ಹೊಡೆತವೂ ಜೋರಾದ್ದರಿಂದ

ಹಡಗು ಕೆಳಗೆಮೇಲಾಗುತ್ತಿತ್ತು. ಪುನಃ ಕೆಲವರಿಗೆ ಸಮುದ್ರದ ಖಾಹಿಲೆ ತಲೆದೋರಿತು. ಪೆಸಿಫಿಕ್ ಸಾಗರವನ್ನೇ ಅಪ್ಪಿಕೊಂಡ ಈ ಸರ್ಪದ ಹಡಗು ಒಂದೊಂದುಸಲ ಮುತ್ತುಕೊಡಲು ಏನೋ ಸಾಗರದ ನೀರನ್ನು ಮುಟ್ಟಿ ಬರುವಷ್ಟರ ಮಟ್ಟಿಗೆ ವಾಲುತ್ತದೆ.

ಈ ದಿನ ಶ್ರೀ ಸಿದ್ದವ್ವನಹಳ್ಳಿ ಕೃಷ್ಣಶರ್ಮರ **"ಪರ್ಣಕುಟಿ"** ಯನ್ನು ಪುನ: ಓದಿ ಮುಗಿಸಿದೆ. 'ಪರ್ಣಕುಟಿ' ಗಾಂಧಿ ಸಾಹಿತ್ಯದಲ್ಲಿ ಶ್ರೇಷ್ಠ ತರಗತಿಯ ಪುಸ್ತಕ. ಪ್ರತಿಯೊಬ್ಬ ಕನ್ನಡಿಗನೂ ಓದಲೇ ಬೇಕಾದ ಪುಸ್ತಕ. ಸುಲಭವಾಗಿ, ಸರಳವಾಗಿ, ಗಾಂಧಿತತ್ವದ ನಿರೂಪಣೆ ಇಲ್ಲಿ ಆಗಿದೆ. ಕಂಡದ್ದನ್ನು, ಕೇಳಿದ್ದನ್ನು, ಅನುಭವಿಸಿದ್ದನ್ನು ಸೊಗಸಾದ ತಮ್ಮದೇ ಆದ 'ಶರ್ಮರಶೈಲಿ' ಯಲ್ಲಿ ವಿವರಿಸಿದ್ದಾರೆ. ಇಲ್ಲಿ ಭಾಷಾ ಗಾಂಭೀರ್ಯದ ಜೊತೆಗೆ, ವಿಷಯುಗಳ ಮಂಥನ ವಾಗಿ, ಗಾಂಧಿತತ್ವ ನವನೀತವಾಗಿದೆ. ಪರ್ಣಕುಟಿ ಯನ್ನು ಓದಿದಮೇಲೆ, ಯಾರಿಗಾದರೂ ಮನಶ್ಶಾಂತಿ ಬರಲೇ ಬೇಕು.

ನಾವಿಂದು ಅಂತರರಾಷ್ಟ್ರೀಯ ಕಾಲದಗೆರೆಯನ್ನು ದಾಟಿ ಪೂರ್ವಾರ್ಧ ಗೋಳದಿಂದ ಪಶ್ಚಿಮಾರ್ಧ ಗೋಳಕ್ಕೆ ಬಂದೆವು. ಅಂದರೆ ೧೨ ಘಂಟೆ ಮುಂದೆ ಬಂದ ಹಾಗಾಯಿತು. ಇಂದು ಭಾರತದಲ್ಲಿ ಬೆಳಿಗ್ಗೆ ೮ ಘಂಟೆ ಯಾಗಿದ್ದರೆ, ಅಮೇರಿಕದಲ್ಲಿ ಸಂಜೆ ೮ ಘಂಟೆ.

**ಹೊನಲೂಲು**

೨೧-೨-೬೨

ಒಂಭತ್ತು ದಿನಗಳ ದೀರ್ಘಪ್ರಯಾಣದ ನಂತರ ನಾವಿಂದು ಹವಾಯ್ ದ್ವೀಪ ಸ್ತೋಮದ ಮುಖ್ಯನಗರವಾದ ಹೊನಲೂಲುವಿಗೆ ಬಂದೆವು.

## ಭೂ ನಂದನ

ಹವಾಯ್ ದ್ವೀಪ ಸ್ತೋಮ, ಸೊಬಗಿನ ಬೀಡು - ಭೂನಂದನ. ಪೆಸಿಫಿಕ್ ಸಾಗರದ ಮಧ್ಯಗಲ್ಲಿರುವ ಸುಂದರವಾದ ಹವಾಯ್ ದ್ವೀಪಗಳ

ಗುಂಪು ಅಮೇರಿಕದ ಸಂಯುಕ್ತ ಸಂಸ್ಥಾನದ ೪೯ನೆಯ ಸಂಸ್ಥಾನ ವಾಗುವುದು. ಹವಾಯ್ ದ್ವೀಪಗಳ ಜ್ಞಾಪಕ ಬಂದಾಗ ಜಪಾನೀಯರು ಧಾಳಿ ಮಾಡಿದ ಪರ್ಲ್‌ಹಾರ್ಬರ್ ನೆನಪು ಬರುವುದಲ್ಲವೆ? ಹೊನಲೂಲು, ಹವಾಯ್ ದ್ವೀಪದ ಸುಂದರ ನಗರ ಹಾಗೂ ಮುಖ್ಯ ಪಟ್ಟಣ. ಅಲ್ಲಿಂದ ಕೇವಲ ೪೦ ಮೈಲು, **ಪರ್ಲ್‌ಹಾರ್ಬರ್.**

ಯುದ್ಧವು ಪ್ರಪಂಚವನ್ನೇ ಬದಲಾಯಿಸಿತು. ಆದರೆ ಹವಾಯ್ ದ್ವೀಪವನ್ನು ಬದಲಿಸಲು ಸಾಧ್ಯವಾಗಲಿಲ್ಲ. ವರ್ಷಾದ್ಯಂತ್ಯವೂ ಇಲ್ಲಿಯ ಹವೆ ತಂಪಾಗಿ ಆಹ್ಲಾದಕರವಾಗಿರುತ್ತದೆ. ಯಾವಾಗ ಬೇಕಾದರೂ ಸುಗಂಧವೀಯುವ ಅರಳಿದ ಹೂವುಗಳು ನಿಮ್ಮನ್ನು ಸ್ವಾಗತಿಸುತ್ತವೆ. ಹೊನಲೂಲುವಿಗೆ ನಮ್ಮ ಹಡಗು ಬಂದಿಳಿದಾಗ, ಹವಾಯಿಗಳು ನಮಗೆ ಅದ್ಭುತ ಸ್ವಾಗತವನ್ನಿತ್ತರು. ವಾದ್ಯಸಮೇತ ಅಲಂಕೃತರಾದ ಹುಡುಗಿಯರು ಸ್ವಾಗತ ಗೀತೆಯನ್ನು ಹಾಡಿದರು. ನಾವು ಹಡಗು ಇಳಿಯುತ್ತಲೇ ಸಿದ್ಧ ರಾಗಿ ನಿಂತಿದ್ದ ರಮಣಿಯರು ನಮ್ಮ ಕೊರಳಿಗೆ ಹೂಮಾಲೆಯನ್ನು ಹಾಕಿದರು. (ಆ ಮಾಲೆಗಳಿಂದ ಹಣವನ್ನೂ ಕಿತ್ತರು!) ದೂರದಿಂದಲೇ ಹವಾಯಿಯ ಸುಂದರ ಪರ್ವತಗಳನ್ನೂ ರಮಣೀಯವಾದ ಪ್ರದೇಶಗಳನ್ನೂ ನೋಡಿ ಆನಂದಿಸಬಹುದು.

ಜಪಾನಿನ ಬಂದರಾದ ಯಾಕೋಹಾಮದಿಂದ ೯ ದಿನಗಳ ಹಡಗಿನ ಪ್ರಯಾಣ ಮಾಡಿ ಹವಾಯಿ ದ್ವೀಪವನ್ನು ತಲುಪಬಹುದು. ಸ್ಯಾನ್‌ಫ್ರಾನ್ ಸಿಸ್ಕೋದಿಂದ ಕೇವಲ ೨೦೯೫ (ಹಡಗಿನ) ಮೈಲುಗಳು. ಆದರೂ ಹಡಗಿನ ಮುಖಾಂತರ ಕೇವಲ ೫ ದಿನಗಳಲ್ಲಿ ಹೊನಲೂಲುವನ್ನು ಮುಟ್ಟಬಹುದು. ವಿಮಾನದ ಮೂಲಕ ಕೇವಲ ಹತ್ತು ಗಂಟೆಗಳು.

ಹವಾಯ್ ದ್ವೀಪಗಳು ೧೫೦೦ ಮೈಲು ಉದ್ದ ಚಾಚಿಕೊಂಡಿವೆ. ಓಹೂ, ಕವಾಯಿ, ಮಾಯಿ, ಹವಾಯಿ ಮತ್ತು ಮೊಲಕಾಯಿ ಎಂಬುವೇ ಮುಖ್ಯವಾದ ಐದು ದ್ವೀಪಗಳ ಗುಂಪು. ಈ ಐದು ದ್ವೀಪಗಳ ಚದುರಳತೆ

೬೨೭೭ ಚದುರ ಮೈಲುಗಳು. ಇಲ್ಲಿಯ ಹವೆ ೭೪° ರಿಂದ ೮೬° ರ ವರೆಗೆ ಬದಲಾಯಿಸುತ್ತಿರುತ್ತದೆ. ಈಶಾನ್ಯ ದಿಕ್ಕಿನಿಂದ ಬೀಸುವ ಮುಂದ ಮಾರುತಗಳು ಹೆಚ್ಚು ಸೆಕೆಯುಂಟಾಗದಂತೆ ತಡೆಯುತ್ತವೆ. ಮಳೆ ಸ್ವಲ್ಪ ಸ್ವಲ್ಪ ಬೀಳುತ್ತದೆ. ವರ್ಷದ ಪ್ರತಿ ದಿನವೂ ಸೂರ್ಯನು ಪ್ರಕಾಶ ಮಾನವಾಗಿರುತ್ತಾನೆ.

ಹವಾಯ್ ದ್ವೀಪಗಳ ಜನಸಂಖ್ಯೆ ೫ ಲಕ್ಷ. ಇದರಲ್ಲಿ ೧/೩ ಭಾಗ ಕಾಕೇಶಿಯನ್ನರು. ೧/೩ ಭಾಗ ಜಪಾನಿಯರು. ಉಳಿದ ೧/೩ ಭಾಗ ದಲ್ಲಿ ಹವಾಯಿಗಳು, ಚೀನಿಯರು, ಫಿಲಿಪನ್ನರು, ಪೋರ್ಟರೀಕೋದವರು ಮತ್ತು ಕೊರಿಯನ್ನರು. ಇದರಲ್ಲಿ ಬೇಕಾದಷ್ಟು ಸಂಕರ ಜನಾಂಗದವರೂ ಇದಾರೆ.

೧೭೭೮ ನೆಯ ಇಸ್ವಿಯಲ್ಲಿ ಬ್ರಿಟನ್ನಿನ ಕ್ಯಾಪ್ಟನ್ ಜೇಮ್ಸ್ ಕುಕ್ ಎಂಬಾತನು ಹವಾಯ್ ದ್ವೀಪಗಳನ್ನು ಕಂಡುಹಿಡಿದನು. ಆಗ ಹವಾಯಿಯ ಸ್ವತಂತ್ರ ಜನಾಂಗವಾದ ಪಾಲಿನೇಷಿಯನ್ ಗುಂಪಿನವರು ಅಲ್ಲಿ ವಾಸಿಸುತ್ತಿದ್ದರು. ಅವರಲ್ಲಿಯೇ ಅನೇಕ ಗುಂಪುಗಳಿದ್ದವು. ೧೯ ನೆ ಶತಮಾನಕ್ಕೆ ಮುಂಚೆ ಕಮ್ಮೆಮ್ಮೆ ಎಂಬೊಬ್ಬ ಪಾಳೆಯಗಾರ ತುಂಬಾ ಬಲಶಾಲಿಯಾಗಿ, ಎಲ್ಲ ಗುಂಪುಗಳನ್ನೂ ಗೆದ್ದು ತಾನೇ ಅದಕ್ಕೆ ಅಧಿಪತಿಯಾದನು. ೧೮೨೦ ರಲ್ಲಿ ನ್ಯೂಇಂಗ್ಲೇಂಡಿನ ಮಿಷನರಿಗಳು ಈ ದ್ವೀಪಕ್ಕೆ ಮೊದಲು ಬಂದ ಬಿಳಿಯರು. ಅವರ ಪ್ರಭಾವ ದಿನೇ ದಿನೇ ಹೆಚ್ಚುತ್ತ ಬಂದು ೧೮೪೦ ರವೇಳೆಗೆ, ಆ ದ್ವೀಪದಲ್ಲಿಯೂ ಶಾಸನಬದ್ಧವಾದ ಆಡಳಿತ ಬರಲು ಕಾರಣವಾಯಿತು. ಆ ಮೇಲೆ ಹೆಚ್ಚು ಹೆಚ್ಚಾಗಿ ಅಮೇರಿಕನ್ನರು, ಬ್ರಿಟಿಷರು ಬಂದು ನೆಲಸ ತೊಡಗಿದರು. ಸರಕಾರದ ಪದ್ಧತಿಯ ಮೇಲೆ ಅವರ ಪ್ರಭಾವವು ಬೀಳುತ್ತ ಬಂದಿತು. ಈ ಪರಕೀಯರ ಧಾಳಿಯನ್ನು ತಡೆಯಲೋಸುಗ, ಹವಾಯಿಯ ಕೊನೆಯ ರಾಣಿಯಾದ, ರಾಣಿ **ಲಿಲುಕಲಾನಿಯ** ಮುಖಂಡತ್ವದಲ್ಲಿ ೧೮೯೩ ರಲ್ಲಿ ಒಂದು ಕ್ರಾಂತಿಯುಂಟಾಯಿತು. ಆ ಕ್ರಾಂತಿ

ಯಲ್ಲಿ ರಾಣಿ ತನ್ನ ರಾಜ್ಯ ಕಳೆದುಕೊಂಡಳು. ವಲಸೆ ಬಂದು ನೆಲಸಿದ ಪರಕೀಯರು ರಾಜ್ಯಸೂತ್ರ ಹಿಡಿದುಕೊಂಡು ೧೮೯೩ ರಲ್ಲಿ ತಾತ್ಕಾಲಿಕ ಸರಕಾರ ಸ್ಥಾಪಿಸಿದರು. ಕೊನೆಗೆ ೧೮೯೮ ರಲ್ಲಿ ಈ ದ್ವೀಪಗಳ ಆಡಳಿತ, ಮೇಲ್ವಿಚಾರಣೆ ಅಮೇರಿಕಕ್ಕೆ ಸೇರಿತು. ೧೯೦೦ ರಲ್ಲಿ ಹವಾಯಿಯು ಅಮೇರಿಕದ ಅಧಿರಾಜ್ಯವಾಯಿತು. ಈ ಐದು ದ್ವೀಪಗಳ ಸಂಕ್ಷೇಪ ಪರಿಚಯವನ್ನು ಈ ಕೆಳಗೆ ಮಾಡಿಕೊಡಲು ಇಚ್ಛಿಸುತ್ತೇನೆ:

## ಓಹೂ ದ್ವೀಪ

ಪೆಸಿಫಿಕ್ ಸಾಗರದ ಮಾರ್ಗವಾಗಿ ನಡೆಯುವ ವ್ಯಾಪಾರದ ಮುಖ್ಯ ಕೇಂದ್ರ ಓಹೂ ದ್ವೀಪ. ಈ ದ್ವೀಪಗಳ ರಾಜಧಾನಿಯೂ, ಸುಪ್ರಸಿದ್ಧ ಬಂದರೂ ಆದ ಹೊನಲೂಲು ಪಟ್ಟಣವಿರುವುದು ಈ ಓಹೂ ದ್ವೀಪದಲ್ಲಿಯೇ. ಏಷ್ಯಾ, ಆಸ್ಟ್ರೇಲಿಯ ಮತ್ತು ಉತ್ತರ ಅಮೇರಿಕಗಳಿಗೆ ಇಲ್ಲಿಂದ ಸಮುದ್ರಯಾನ ಮತ್ತು ವಿಮಾನಯಾನದ ಸೌಕರ್ಯಗಳಿವೆ. ಹೊನಲೂಲು ಪಟ್ಟಣ ಆಧುನಿಕ ಅಮೇರಿಕದ ಪಟ್ಟಣದ ಮಾದರಿಯಲ್ಲಿದೆ. ಅಲ್ಲಿಯ ಮುಖ್ಯವಾದ ವ್ಯಾಪಾರ ಸಕ್ಕರೆ, ಮತ್ತು ಪರಂಗಿ ಹಣ್ಣು. ಆದರೂ ನಾವಿಲ್ಲಿಳಿದಾಗ ಸಕ್ಕರೆಯು ಪಡಿತರ ಇತ್ತು. ಹವಾಯ್ ದ್ವೀಪಗಳ ಬ್ಯಾಂಕುಗಳು, ಇತರ ಅಧಿಕಾರಿ ಕಚೇರಿಗಳು ಎಲ್ಲವೂ ಇದೇ ಪಟ್ಟಣದಲ್ಲಿ ಇವೆ. ಹವಾಯ್ ಪುಸ್ತಕಭಂಡಾರ ಕಾಲಿನೇಶಿಯನ್ನರ ಹಳೆಯ ವಸ್ತು ಸಂಗ್ರಹಾಲಯ ಮುಂತಾದುವು ಇರುವುದು ಇಲ್ಲಿಯೇ. ಹವಾಯ್ ದ್ವೀಪಗಳಿಗೆ ಪ್ರಪಂಚದ ಜನ ವಿಹಾರಕ್ಕಾಗಿ ಬರುತ್ತಾರೆ. ಈ ದ್ವೀಪದ ೮೦ ಮೈಲು ಸುತ್ತಲೂ ಕಾರಿನಲ್ಲಿ ತಿರುಗಾಡಿ ಸುಂದರ ದೃಶ್ಯಗಳನ್ನು ನೋಡಬಹುದು. ಇದರೊಂದಿಗೆ ಚರಿತ್ರಾರ್ಹವಾದ ಪರ್ಲ್ ಹಾರ್ಬರ್ ಇರುವುದು. ಇದರ ಉತ್ತರಕ್ಕೆ ಸುಪ್ರಸಿದ್ಧವಾದ ವೈಮಿಯಾ ಸುರಂಗವೂ ಮತ್ತು ಸಕ್ಕರೆ ತಯಾರಿಸುವ ಪಟ್ಟಣಗಳಾದ ಖಾರು ಮತ್ತು ವೈಹವಾ ಪಟ್ಟಣಗಳಿವೆ. ಇಲ್ಲಿಯೇ ಟಾಜ್‌ಮಹಲ್‌ನಂತೆಯೇ, ಚಿಕ್ಕದಾಗಿರುವ **ಮಾರ್‌ಪುನ್** ಕಟ್ಟಡ ಇದೆ.

ಹೊನಲೂಲು ಪಟ್ಟಣದ ಮಧ್ಯದಲ್ಲಿ **ಅಯೋಲಾನಿ** ರಾಜನ ಅರಮನೆ ಇದೆ. ಇಲ್ಲಿಯೇ ಈಗ ರಾಜ್ಯಸೂತ್ರ ನಡೆಯುತ್ತಿರುವುದು. ವೈಕಾಕಿಯ ಸಮುದ್ರದ ದಂಡೆಯೂ ವಿಹಾರಕ್ಕೆ ಅನುಕೂಲ ವಾಗಿದೆ.

## ಕವಾಯಿ—ಉದ್ಯಾನವನಗಳ ದ್ವೀಪ

ಈ ದ್ವೀಪದ ಅರಣ್ಯ ಸಂಪತ್ತು, ಉದ್ಯಾನ ವನಗಳ ಬೆಳವಣಿಗೆಗೆ ಅನುಕೂಲ ಮಾಡಿಕೊಟ್ಟಿದೆ. ಈ ಹವಾಯ್ ದ್ವೀಪಗಳಲ್ಲೆಲ್ಲ ಇದೇ ಹಳೆಯದು; ಕ್ಯಾಪ್ಟನ್ ಜೇಮ್ಸ್ ಕುಕ್ಕನು ಮೊದಲು ಬಂದಿಳಿದಿದ್ದು ಇಲ್ಲಿಯೇ. ಹವಾಯ ಜನಪದ ಸಾಹಿತ್ಯದ ಸಂಪತ್ತು ಇದೇ ದ್ವೀಪದಲ್ಲಿಯೇ ಬೆಳೆದಿದೆ. "ಮಲಗಿದ ದೆವ್ವ" "ಪರ್ವತ ರಂಧ್ರ" "ಮೆನ್ ಸುರಂಗ" ಮೊದಲಾದ ಕಟ್ಟಡಗಳನ್ನು ಹವಾಯ ದೇವತೆಗಳು ಕಟ್ಟಿದ್ದೆಂದು ಇಲ್ಲಿಯ ಪುರಾಣ. ಇಲ್ಲಿಯ ಕೈಗಾರಿಕೆಯೂ ಸಕ್ಕರೆ ಮತ್ತು ಫರಂಗಿಯ ಹಣ್ಣುಗಳಿಗೆ ಸಂಬಂಧಿಸಿದುವೇ.

## ಮಾಯಿ—ಸುರಂಗದ್ವೀಪ

ಹವಾಯಿಯ ಸೌಜನ್ಯಕ್ಕೆ ಹೆಸರಾದದ್ದು ಈ ದ್ವೀಪ. ಇದು ಹೊನಲೂಲುವಿಗೂ ಮತ್ತು ಹವಾಯ್ ದ್ವೀಪಕ್ಕೂ ಮಧ್ಯೆ ಇರುವುದರಿಂದ ಯಾವ ಪ್ರಯಾಣಿಕನೂ ಇದನ್ನು ನೋಡದೆ ಹೋಗುವಂತಿಲ್ಲ. **ಹಲೇಕಲಾ** ಎಂಬ ಭೂಶಿರ ಇಲ್ಲಿಯೇ ಇರುವುದರಿಂದ ಜನರನ್ನು ಆಕರ್ಷಿಸುತ್ತದೆ. ಇಲ್ಲಿಯ ಜನಸಂಖ್ಯೆ ೫೦,೦೦೦. ಈ ದ್ವೀಪ ಹಳ್ಳಿಯ ಸಂಸ್ಕೃತಿಯ ತೌರೂರಾದರೂ ಆಧುನಿಕ ನಾಗರಿಕತೆ ಬೆಳೆದು ಬಂದಿದೆ. ಇಲ್ಲಿಯೂ ಬೇಕಾದಷ್ಟು ಸಕ್ಕರೆ, ಪರಂಗಿಹಣ್ಣಿನ ವ್ಯವಸಾಯ ನಡೆಯುತ್ತದೆ. ಹೊನಲೂಲುವಿನಿಂದ ೨೦ ಮೈಲು ದೂರ ಹಡಗಿನ ಮೂಲಕ ೫ ಘಂಟೆಯ ದಾರಿ.

## ಹವಾಯ್—ಮುಖ್ಯ ದ್ವೀಪ

ಈ ದ್ವೀಪಗಳಲ್ಲೆಲ್ಲ ಮೊಲಕಾಯಿ ದ್ವೀಪ ಎಷ್ಟು ಅಪ್ರಾಮುಖ್ಯವೋ, ಹವಾಯಿ ದ್ವೀಪ ಅಷ್ಟು ಪ್ರಾಮುಖ್ಯ. ಮಂಜು ಮುಸುಕಿದ ಪರ್ವತಶ್ರೇಣಿ

ಗಳು, ಭೂಶಿರಗಳು, ದೊಡ್ಡದಾದ ಅರಣ್ಯಗಳು, ತೆಂಗಿನ ಮರಗಳು ಈ ದ್ವೀಪದ ಮೆರುಗನ್ನು ಹೆಚ್ಚಿಸಿವೆ. ಇಲ್ಲಿಯ ಕೈಗಾರಿಕೆ ಸಕ್ಕರೆಯದು. ಆದರೆ ವ್ಯವಸಾಯವೂ ಸಾಕಷ್ಟಿದೆ. ಇಲ್ಲಿ ಕಾಫಿ ಬೆಳೆ ಬಹಳ ಉತ್ತಮ ವಾಗಿದೆ. ಹೊನಲೂಲುವಿನಿಂದ ಪ್ರಯಾಣ ಮಾರ್ಗವಿದೆ. ಹಡಗು ಇಲ್ಲವೆ ವಿಮಾನಗಳು ಹವಾಯ್ ದ್ವೀಪವನ್ನು ಮುಟ್ಟಿಸುತ್ತದೆ. ಕೇವಲ ಒಂದು ಘಂಟೆ ೪೫ ನಿಮಿಷ ಈ ಪ್ರಯಾಣದ ಅವಧಿ. ಹವಾಯ್ ದ್ವೀಪದ ದಕ್ಷಿಣ ತೀರದಲ್ಲಿ ಕೋನಾ ಜಿಲ್ಲೆಯೊಂದಿದೆ. ಇದು ಮೀನು ವ್ಯವಸಾಯದ ಮುಖ್ಯ ಸ್ಥಳ. ಈ ಸ್ಥಳದಲ್ಲಿ ಹವಾಯಿಯ ಮೂಲ ಜನಾಂಗದವರು ಇನ್ನೂ ಇದ್ದಾರೆ. ಅವರಿನ್ನೂ ಹಳೆಯ ಪದ್ಧತಿಯಲ್ಲೇ ಅನಾಗರಿಕ ಜೀವನ ನಡೆಯಿ ಸುತ್ತಿರುವುದನ್ನು ಈಗಲೂ ನೋಡಬಹುದು.

ಇಲ್ಲಿಯವರೆಗೆ ಅಧಿರಾಜ್ಯವಾಗಿದ್ದ ಹವಾಯ್ ದ್ವೀಪಗಳು ಇನ್ನು ಮುಂದೆ ಸ್ವತಂತ್ರವಾದ ಅಮೇರಿಕದ ೪೯ ನೆಯ ಸಂಸ್ಥಾನವಾಗುವುದು. ಹವಾಯ್ ತನ್ನ ಭವಿಷ್ಯ ರೂಪಿಸಿಕೊಳ್ಳುವದು. ತನ್ನ ರಾಜ್ಯಭಾರದಲ್ಲಿ ಕಾಂಗ್ರೆಸ್ ಮತ್ತು ಸೆನೆಟನಲ್ಲಿ ಪ್ರಾತಿನಿಧ್ಯಹೊಂದಿ ಜವಾಬ್ದಾರಿ ತೆಗೆದು ಕೊಳ್ಳುವದು. ಅಮೇರಿಕದ ಸಂಯುಕ್ತ ಸಂಸ್ಥಾನದ ಕಿರೀಟದಲ್ಲಿ ಹವಾಯ್ ಒಂದು ಸುಂದರವಾದ ಮುತ್ತಾಗುವುದು. ಇಂತಹ ಸೊಬಗಿನ ದ್ವೀಪಗಳ ಮುಖ್ಯನಗರವಾದ ಹೊನಲೂಲುವಿನಲ್ಲಿ ನಮಗೆ ಅಭೂತ ಪೂರ್ವವಾದ ಸ್ವಾಗತ ದೊರೆಯಿತು.

ಇಲ್ಲಿಯವರೆಗೆ ನಾವು ನೋಡಿದ ಪಟ್ಟಣಗಳಲ್ಲೆಲ್ಲಾ ಅತ್ಯಂತ ಸುಂದರ ವಾದ ಮತ್ತು ಚೊಕ್ಕಟವಾದ ನಗರ ಈ ಹೊನಲೂಲು. ನಾವು ನಾಲ್ವರೂ ನಗರದ ಮಧ್ಯ ರಸ್ತೆಯಾದ ಕಿಂಗ್ ಸ್ಟ್ರೀಟ್‌ಗೆ ಬಂದೆವು. ಅಲ್ಲೊಂದು ಕ್ಯಾಮರಾ ಅಂಗಡಿಗೆ ಹೋದಾಗ ಅಲ್ಲಿಯ ಯಜಮಾನ ನಮಗೆ ಹೊನ ಲೂಲುವಿನಲ್ಲಿ ನೋಡಬೇಕಾದ ಸ್ಥಳಗಳ ಪರಿಚಯವನ್ನು ಮಾಡಿಕೊಟ್ಟು ನಮ್ಮನ್ನು ಟೂರಿಸ್ಟ್ ಬ್ಯೂರೋವಿಗೆ ಹೋಗಿ ಹೆಚ್ಚಿನ ಪರಿಚಯ ಮಾಡಿ

ಕೊಳ್ಳಲು ಹೇಳಿದ. ನಾವು ಟೂರಿಸ್ಟ್ ಬ್ಯೂರೋವಿಗೆ ಬಂದೆವು. ಪಟ್ಟಣದ ಮತ್ತು ದ್ವೀಪಗಳ ಪ್ರತಿಯೊಂದು ಮಾಹಿತಿಯೂ ನಮಗೆ ಸಿಕ್ಕಿತು. ಸುಂದರ ಭಾವಚಿತ್ರಗಳುಳ್ಳ ಪರಿಚಯ ಪುಸ್ತಕ, ನಗರದ ನಕ್ಷೆ, ನೋಡಬೇಕಾದ ಸ್ಥಳಗಳ ಪಟ್ಟಿ ಎಲ್ಲವನ್ನೂ ನಮಗೆ ಉಚಿತವಾಗಿ ಸೊಗಸಾದ ಕವರಿನಲ್ಲಿ ಹಾಕಿ ಪ್ರತಿ ಯೊಬ್ಬರಿಗೂ ಕೊಟ್ಟರು. ಟ್ರಾಮ್ ಹತ್ತಿ **ವೈಕಾಕಿ ಬೀಚ್** ಕಡೆಗೆ ಹೊರಟು ಅಲ್ಲಿಯ ಹೋಟೆಲಿನಲ್ಲಿ ಕಾಫಿ ಕುಡಿದೆವು. ಒಂದು ಕಪ್ ಕಾಫಿಗೆ ೧೦ ಸೆಂಟ್ಸ್. ಇಲ್ಲಿಯ ಹಣದ ಚಲಾವಣೆ ಅಮೇರಿಕನ್ ಡಾಲರ್.

ಅಲ್ಲಿಂದ '**ಬಿಷಪ್ ಮ್ಯೂಸಿಯಂ**'ಗೆ ಬಂದೆವು. ಒಬ್ಬ ಹೆಂಗಸು ಈ ಪ್ರದರ್ಶನಾಲಯವನ್ನು ಕಟ್ಟಿಸಿದಾಳೆ ಹವಾಯ್ ದ್ವೀಪದ ಹಳೆಯ ಜನರು, ಅವರ ಆಹಾರ, ಆಭರಣ, ನಾವಿಕರ ಸಾಮಾನುಗಳು, ದೋಣಿ, ಬಟ್ಟೆ, ಮುಂತಾದುವುಗಳನ್ನೆಲ್ಲ ಇಲ್ಲಿ ಪ್ರದರ್ಶನ ಮಾಡಿದಾರೆ. ಈ ಪ್ರದರ್ಶನಾ ಲಯ ದಲ್ಲಿ ಒಂದು ಸಾವಿನ ದೇವರು (**Death God**) ಇದೆ. ಇದರ ಆಕೃತಿ ಯನ್ನು ನೋಡಿ ದರಿಹೆದರಿಕೆಯಾಗುತ್ತದೆ. ಸಾಯಲು ಇಷ್ಟಪಡುವ ಮನುಷ್ಯ, ಈ ದೇವತೆಯ ಮುಂದೆ ಮೂರು ದಿನ ಅನ್ನ ನೀರು ಆಹಾರ ವಿಲ್ಲದೆ ಜೀವ ನೀಗಿಸಿಕೊಳ್ಳಲು ಅಪ್ಪಣೆ ಬೇಡ ಬೇಕು. ಈ ದೇವತೆ ಇಷ್ಟಪಟ್ಟರೆ ಸಾಯಲು ವರವನ್ನು ಕೊಡುತ್ತದೆ. ಈ ಚಿತ್ರವನ್ನು ತುಂಬಾ ಸ್ವಾಭಾವಿಕವಾಗಿ, ಅದರ ನೈಜತೆ ಸ್ಪಷ್ಟವಾಗಿ ಕಾಣುವಂತೆ ಕಾದಿಟ್ಟಿದಾರೆ. ಪೆಸಿಫಿಕ್ ಸಾಗರದ ಕೆಲವು ಕ್ರೂರ ಪ್ರಾಣಿಗಳು ಕೂಡ ಬಹು ನೈಜವಾಗಿ ಕಾದಿಡಲ್ಪಟ್ಟಿವೆ, ಈ ಮ್ಯೂಸಿಯಂನಲ್ಲಿ.

ಈ ವಸ್ತುಪ್ರದರ್ಶನಾಲಯದ ಪಕ್ಕದಲ್ಲಿಯೇ **ಕಮ್ಮೆಮ್ಮೆ** ಶಾಲೆಯಿದೆ. ಹೊನಲೂಲು ವಿನಲ್ಲಿ ಇದೇಬಹು ದೊಡ್ಡ ಪ್ರೌಢಶಾಲೆ. ಈ ದ್ವೀಪದ ರಾಜ ನಾಗಿದ್ದ ಕಮ್ಮೆಮ್ಮೆ ಎಂಬುವನ ಹೆಸರಿನಲ್ಲಿ ಈ ಶಾಲೆಯನ್ನು ಕಟ್ಟಿಸಿದಾರೆ. ಇಲ್ಲಿಯ ಶಾಲೆಯ ಹುಡುಗರ ಅಪೇಕ್ಷೆಯ ಮೇರೆಗೆ ಅವರ ಜೊತೆಗೆ ಒಂದು ಭಾವ ಚಿತ್ರವನ್ನು ತೆಗೆಯಿಸಿ ಕೊಂಡೆವು.

ವಸ್ತು ಪ್ರದರ್ಶನಾಲಯವನ್ನು ನೋಡಿಕೊಂಡು ಹವಾಯ್ ವಿಶ್ವ ವಿದ್ಯಾನಿಲಯಕ್ಕೆ ಹೊರಟೆವು. ೧೦ ಸೆಂಟ್ಸ್ ನಮ್ಮನ್ನು ಮೂರು ಮೈಲಿ ಕೊಂಡೊಯ್ದಿತು. ಊರ ಹೊರಗೆ ವಿಶಾಲವಾದ ಮೈದಾನದಲ್ಲಿ **ಮೊನಾಯಟ್** ಬೆಟ್ಟದ ಕಡೆ ಹವಾಯ್ ವಿಶ್ವವಿದ್ಯಾನಿಲಯ ಸ್ಥಾಪನೆಯಾಗಿದೆ. ಟ್ರಾಮ್‌ಕಾರ್‌ನಲ್ಲಿ ನಮಗೊಬ್ಬ ವಿದ್ಯಾರ್ಥಿ ಪರಿಚಯವಾದ. ಆತ ನಮ್ಮನ್ನು ವಿಶ್ವವಿದ್ಯಾನಿಲಯದ ಆವರಣಕ್ಕೆ ಕರೆದೊಯ್ದ. ಅದೇ ಟ್ರಾಮ್ ಕಾರ್‌ನಲ್ಲಿ ಇನ್ನೊಬ್ಬ ಹವಾಯ್ ದೇಶದವನು ಕುಡಿದು ಮತ್ತನಾಗಿ ನಮ್ಮನ್ನು ನೋಡಿದ ಕೂಡಲೇ ಇವರು, 'ಇವರು ಇಂಡಿಯಾದವರು, ನಾನು ಬೊಂಬಾಯಿ, ಕಲ್ಕತ್ತ, ಮದ್ರಾಸ್ ನೋಡಿದ್ದೇನೆ. ಅದು ಬಹು ಸುಂದರ ವಾದ ದೇಶ' ಎಂದು ಕೂಗಲಾರಂಭಿಸಿದ. ಅಲ್ಲಿದ್ದ ಸ್ತ್ರೀಯರನ್ನು ಕೆಣಕುತ್ತಾ, ಅವರ ಮುಖ, ಅವರ ಸೌಂದರ್ಯವನ್ನು ಹೊಗಳುತ್ತಾ, 'ನಾನು ಮದುವೆ ಯಾಗದಿದ್ದರೆ ಈಕೆಯನ್ನೇ ಮದುವೆಯಾಗುತ್ತಿದ್ದೆ' ಎಂದು ಹಾಸ್ಯಮಾಡು ತ್ತಿದ್ದ. ದಾರಿಯಲ್ಲಿ ಹೋಗುತ್ತಿದ್ದ ಹೆಂಗಸರನ್ನು ಕೂಗಿ 'ನೀವು ಮನೆಗೆ ಹೋಗಿ ಮಜಾಮಾಡಿ' ಎಂದು ಕೂಗಿಕೊಳ್ಳುತ್ತಿದ್ದ.

ನನ್ನ ಸ್ನೇಹಿತರು ಮೂವರು, ಬಾಟನಿಯ ಪ್ರೊಫೆಸರರನ್ನು ನೋಡಲು ಇಷ್ಟವುಳ್ಳವರಾಗಿದ್ದರು. ನಾನು ಪತ್ರಿಕೋದ್ಯಮದ ಪ್ರೊಫೆಸರರನ್ನು ನೋಡ ಬೇಕಾಗಿತ್ತು. ಇಲ್ಲಿ ಬೇರೆಯಾಗಿ ವಿಚಾರಣಾಖಚೇರಿ ಇದೆ, ಸಾಮಾನ್ಯವಾಗಿ ಇಂತಹ ಆಫೀಸುಗಳಲ್ಲಿ ಕೆಲಸಮಾಡುವವರು ಸ್ತ್ರೀಯರೇ. ನಮ್ಮನ್ನು ನೋಡುತ್ತಲೇ ಒಬ್ಬ ಕೆಲಸಗಾರ್ತಿ ನಮ್ಮ ಬಳಿಗೆ ಬಂದು ವಿಚಾರಿಸಿ, ತಕ್ಷಣ ನಮ್ಮನ್ನು ನಮಗೆ ಬೇಕು ಬೇಕಾದ ಸ್ಥಳಗಳಿಗೆ ಕರೆ ದೊಯ್ದಳು.

ಈ ವಿಶ್ವವಿದ್ಯಾನಿಲಯದಲ್ಲಿ ವಿದ್ಯಾರ್ಥಿಗಳಿಗೆ ಪ್ರತ್ಯೇಕವಾಗಿ ಒಂದು ಪತ್ರಿಕೆಯಿದೆ. ವಾರಕ್ಕೆರಡುದಿನ ಈ ಪತ್ರಿಕೆ ಹೊರಡುವುದು. ಇದಕ್ಕೆ ವಿದ್ಯಾರ್ಥಿಯೊರ್ವನು ಸಂಪಾದಕ. ಪತ್ರಿಕೋದ್ಯಮದ ಪ್ರೊಫೆಸರರು ಮೇಲ್ವಿ

ಚಾರಕರು. ಈ ಪತ್ರಿಕೆಯ ಬೆಲೆ ೫ ಸೆಂಟ್ಸ್. ಹೆಚ್ಚಾಗಿ ವಾರದಲ್ಲಾದ, ಆಗಬೇಕಾದ ವಿಶ್ವವಿದ್ಯಾನಿಲಯದ ಸುದ್ದಿಗಳನ್ನು ಇದರಲ್ಲಿ ಪ್ರಕಟಿಸುವರು. ಪ್ರಾಮುಖ್ಯವಾದ ಪ್ರಪಂಚದ ಸುದ್ದಿಗಳನ್ನೂ ಪ್ರಸಿದ್ಧಿಸುವರು. ಅನೇಕ ವಿಶೇಷ ಸಂಚಿಕೆಗಳನ್ನೂ ಹೊರಡಿಸಿದ್ದರು.

ಪತ್ರಿಕಾಕಚೇರಿಯನ್ನು ನೋಡಿಕೊಂಡು ವಿಶ್ವವಿದ್ಯಾನಿಲಯದ ಚೇರ್‌ಮನ್‌ರಾದ **ಡಾ|| ಸಿಂಕ್ಲೇರ್** ರವರಲ್ಲಿ ಕರೆದುಕೊಂಡು ಬಂದರು. ಡಾ|| ಸಿಂಕ್ಲೇರರು ಭಾರತದಲ್ಲಿ ಪ್ರವಾಸಮಾಡಿದ್ದಾರೆ. ಆಗ ಬೆಂಗಳೂರಿಗೂ ಬಂದು ಸರ್ಕಾರದ ಅತಿಥಿಗಳಾಗಿದ್ದರು. ಅವರು **ಸರ್ ಮಿರ್ಜಾ ಇಸ್ಮಾಯಿಲ್** ರ ಹೆಸರನ್ನು ಈಗಲೂ ನೆನಸುತ್ತಾರೆ. ಅವರ ಟೇಬಲ್ಲಿನ ಎಡಬಲಕ್ಕೆ ಎರಡು ಭಾವಚಿತ್ರಗಳಿದ್ದುವು. ಒಂದು ಗಾಂಧೀಜಿಯದು, ಇನ್ನೊಂದು ರವೀಂದ್ರನಾಥ ಟಾಗೂರರದು. ಅಲ್ಲಿ ನನಗೆ ಟೀ ಆಯಿತು. ಅಧ್ಯಕ್ಷರು ವಿಶ್ವವಿದ್ಯಾನಿಲಯಸಂಘದ ವಿದಾರ್ಥಿ ಅಧ್ಯಕ್ಷನಾದ **ಮಿ. ಲೆವಿನ್** ನನ್ನು ಕರೆದು ನನ್ನನ್ನು ಸಂಘಕ್ಕೆ ಕರೆದುಕೊಂಡು ಹೋಗಿ ಎಲ್ಲವನ್ನೂ ತೋರಿಸೆಂದು ಹೇಳಿದರು.

ಇಲ್ಲಿ ಒಂದು ಚುನಾವಣೆ ನಡೆಯುತ್ತಿತ್ತು. ಚುನಾವಣೆಯ ವಸ್ತು, **ಸುಂದರ ತರುಣಿಯ ಸ್ಪರ್ಧೆ** (Beauty Queen Contest). ಕಾಲೇಜಿಗೆ ಬರುವ ಹುಡುಗಿಯರಲ್ಲಿ ಯಾರು ಬಹು ರೂಪವತಿಯರು ಎಂಬುದನ್ನು ಕಾಲೇಜಿನ ವಿದ್ಯಾರ್ಥಿಗಳು ತೀರ್ಮಾನಿಸಬೇಕು. ಹೆಚ್ಚಿಗೆ ಮತಬಂದ ವಿದ್ಯಾರ್ಥಿನಿ '**ಆ ವರ್ಷಕ್ಕೆ ಕಾಲೇಜಿನ ರಾಣಿ**' ಯಾಗುವಳು. ಆಕೆಗೆ ಎಲ್ಲ ಕ್ಲಬ್ಬುಗಳೂ ಗೌರವಿಸುವರು. ಎಲ್ಲರೂ ಊಟಕೊಡುವರು. ನಾವು ಸಂಘಕ್ಕೆ ಹೋದಾಗ ಚುನಾವಣೆ ರಭಸದಿಂದ ನಡೆಯುತ್ತಿತ್ತು. ೧೨ ವಿದ್ಯಾರ್ಥಿನಿಯರು ಚುನಾವಣೆಯಲ್ಲಿ ಉಮೇದುವಾರರಾಗಿದ್ದರು. ೨ ಘಂಟೆಗೆ ಚುನಾವಣೆ ವಿರಾಮಕಾಲ ವೊದಗಿತು. ಆಗ ಲೆವಿನ್, ಎಲ್ಲ ಉಮೇದುವಾರರ ಪರಿಚಯಮಾಡಿ ಕೊಟ್ಟರು. ನೂರಾರು ವಿದ್ಯಾರ್ಥಿ ವಿದ್ಯಾರ್ಥಿನಿಯರು ನನ್ನ

ಸುತ್ತಮುತ್ತ ಸೇರಿದರು. ಲೆವಿನ್ ಪುಟ್ಟದೊಂದು ಭಾಷಣಮಾಡಬೇಕೆಂದ. ನಮ್ಮ ವಿಶ್ವವಿದ್ಯಾನಿಲಯದ ವಿದ್ಯಾರ್ಥಿಗಳಲ್ಲಿ, ವಿದ್ಯಾರ್ಥಿ ವಿದ್ಯಾರ್ಥಿನಿಯರಿ ಗಿರುವ ಸಂಬಂಧ ತಿಳಿಸಿದಾಗ ಅವರೆಲ್ಲಾ ಆಶ್ಚರ್ಯದಿಂದ ನಕ್ಕರು. ಗಾಂಧೀಜಿಯ ಬಂಗಾಳಾದ ಕಾಲ್ನಡೆಯ ವಿಷಯ ತಿಳಿಸಿದಾಗ ತುಂಬಾ ಕನಿಕರಪಟ್ಟರು. ನೆಹರು ಕಂಡರೆ ಅವರಿಗೆ ತುಂಬಾ ಗೌರವ. ಕಾಲೇಜಿನ ಸಂಘದವರಿಂದ ಪುನಃ ನನಗೆ ಟೀ ಆಯಿತು. ಇಷ್ಟುಹೊತ್ತಿಗೆ ಮೂರು ಘಂಟೆ ಆಯಿತು. ನನ್ನ ಸ್ನೇಹಿತರು ನನಗಾಗಿ ಕಾದು ಹೋಗಿರುವರೆಂದು ತಿಳಿದು ನನ್ನನ್ನು ಲೆವಿನ್ ತನ್ನ ಕಾರಿನಲ್ಲಿ ಊರಲ್ಲಿತಂದು ಬಿಡುವುದಾಗಿ ಹೇಳಿದ. ಲೆವಿನ್ ತನ್ನಕಾರಿನಲ್ಲಿ ಊರನ್ನೆಲ್ಲಾ ಒಂದು ಸಾರಿ ಸುತ್ತಿಸಿ ೪|| ಘಂಟೆಗೆ ಸಾರ್ವಜನಿಕ ವಾಚನಾಲಯದಲ್ಲಿ ತಂದು ಬಿಟ್ಟು ಹೊರಟು ಹೋದನು.

ಇಲ್ಲಿಯ ಪುಸ್ತಕ ಭಂಡಾರ ಒಂದು ದೊಡ್ಡ ಪುಸ್ತಕದ ಕಾರ್ಖಾನೆ ಯಂತಿತ್ತು. ಬೆಂಗಳೂರಿನ ಶೇಷಾದ್ರಿ ಮೆಮೋರಿಯಲ್ ಹಾಲ್‌ನ ನಾಲ್ಕರಷ್ಟಿರಬಹುದು. ವಾಚನಾಲಯವೂ ಅಷ್ಟೇ ಪ್ರಮಾಣದಲ್ಲಿ ದೊಡ್ಡ ದಿತ್ತು. ಭಾರತೀಯ ಪತ್ರಿಕೆಗಳಾಗಲಿ ಅಥವಾ ಮಾಸಪತ್ರಿಕೆ, ವಾರಪತ್ರಿಕೆಗ ಳಾಗಲಿ ಒಂದೂ ಇರಲಿಲ್ಲ. ಅಲ್ಲಿ ವಿಚಾರಿಸಿದಾಗ **Asia Digest** ಎಂಬ ಮಾಸ ಪತ್ರಿಕೆಯೊಂದಿತ್ತು.

ಅಲ್ಲಿಂದ ವೈಕಾಕಿ ಬೀಚ್ ಕಡೆಗೆ ಹೊರಟೆ. ಕೇವಲ ೧೦ ಸೆಂಟ್ಸ್ ಕೊಟ್ಟರೆ ಊರಿನ ಯಾವ ಭಾಗಕ್ಕಾದರೂ ಹೋಗಬಹುದಿತ್ತು. ವೈಕಾಕಿ ಬೀಚ್‌ನಿಂದ ಎರಡು ಫರ್ಲಾಂಗ್ ದೂರದಲ್ಲಿ ವಿಶ್ವವಿದ್ಯಾನಿಲಯದ ಮೀನು ಗಳ ಪ್ರದರ್ಶನಾಲಯ ಇದೆ. ಇಲ್ಲಿ ಫೆಸಿಫಿಕ್ ಸಾಗರದ ನಾನಾ ಮೀನು ಗಳನ್ನು ಪ್ರದರ್ಶಿಸಿದ್ದಾರೆ. ನೋಡುವುದಕ್ಕೆ ಬಹು ಸುಂದರವಾಗಿದೆ. ಇಲ್ಲಿ ಹಲವು ಹೊನಲೂಲುವಿನ ಸುಂದರ ಚಿತ್ರಗಳನ್ನು ಕೊಂಡೆ. ಇದರ ಪಕ್ಕದಲ್ಲಿಯೇ ಬೆಂಗಳೂರಿನ ಕಬ್ಬನ್ ಪಾರ್ಕಿನಂತೆ ಒಂದು ದೊಡ್ಡ

ಉದ್ಯಾನವನವಿದೆ. ತರುಣತರುಣಿಯರ ಗುಂಪನ್ನು ಇಲ್ಲಿ ಥಂಡಿಯಾಗಿ ನೋಡಬಹುದು.

ವೈಕಾಕಿಬೀಚ್ ಹೊನಲೂಲುವಿನ ಪ್ರಸಿದ್ಧ ವಿಹಾರಸ್ಥಳ ಪರ್ವತಗಳ ನಡುವೆ ಸಮುದ್ರ ಚಾಚಿಕೊಂಡು ಬಹು ಸುಂದರವಾದ ಮತ್ತು ನೈಜ ಚಿತ್ರ ವನ್ನು ಕೊಟ್ಟಿದೆ. ಈ ಬೀಚ್‌ನ ಸುತ್ತಲೂ ಫಲಹಾರಮಂದಿರಗಳೂ ಮತ್ತು ದೊಡ್ಡ ದೊಡ್ಡ ಹೋಟೆಲ್ಲುಗಳೂ ಇವೆ. ಈ ಬೀಚ್‌ನಲ್ಲಿ ೧೨ ತಿಂಗಳೂ ಈಜಲು ಬರುವುದು. ಗಂಡಸರು, ಹೆಂಗಸರು ಇಲ್ಲಿ ಬಂದು ಈಜುತ್ತಾರೆ. ಜೀವನದಲ್ಲಿ ಈಸಾಡಿದವರು ಸಂಜೆ ಇಲ್ಲಿ ಬಂದು ವಿರಾಮದಿಂದ ಸಾಗರದಲ್ಲಿ ಈಜಾಡುತ್ತಾರೆ.

ಈ ಬೀಚಿನ ಸುಂದರದೃಶ್ಯಗಳನ್ನು ನೋಡಿಕೊಂಡು ಬರುತ್ತಿರುವಾಗ ದಾರಿಯಲ್ಲಿ ಪುನಃ ನನ್ನ ಸ್ನೇಹಿತರು ಸಿಕ್ಕಿದರು. ಎಲ್ಲರೂ ಪಕ್ಕದಲ್ಲಿದ್ದ '**ಕೆಫೆಟೇರಿಯಾ**'ಕ್ಕೆ ಹೋದೆವು. ಇಲ್ಲಿ ಎಲ್ಲಾ ಆಹಾರ ಪದಾರ್ಥಗ ಳನ್ನೂ ಒಂದೆಡೆ ಇಟ್ಟಿರುತ್ತಾರೆ. ನಾವೇ ತಟ್ಟೆ, ಚಮಚಗಳನ್ನು ತೆಗೆದು ಕೊಂಡು, ನಮಗೆ ಬೇಕಾದ ತಿಂಡಿ ತೀರ್ಥಗಳನ್ನು ತೆಗೆದುಕೊಂಡು, ತಟ್ಟೆ ಯಲ್ಲಿಟ್ಟುಕೊಂಡು ಕೌಂಟರನ ಹತ್ತಿರಹೋಗಬೇಕು. ಆತನೋ, ಆಕೆಯೋ ನಾವು ತೆಗದುಕೊಂಡ ಆಹಾರದ ಲೆಖ್ಖ ಹಾಕುತ್ತಾಳೆ. ಅಷ್ಟನ್ನು ಕೊಟ್ಟು ಟೇಬಲ್ಲಿನ ಹತ್ತಿರ ಹೋಗಿ ಅಲ್ಲಿಟ್ಟುಕೊಂಡು ಅದನ್ನು ತಿನ್ನಬೇಕು. ಇಲ್ಲಿ ಯಾವ ಸೇವಕನನ್ನೂ ಸೇವೆಮಾಡಲು ಬಿಡುವುದಿಲ್ಲ. ಇದೊಂದು ಹೊಸ ಅನುಭವ ನಮಗಾಯಿತು. ಕೆಲವರು ಥಣ್ಣಗಿರುವ ಚಹ ತೆಗೆದುಕೊಂಡು ಅದಕ್ಕೆ ನಿಂಬೆ ಹಣ್ಣಿನರಸ ಹಾಕಿಕೊಂಡು ಕುಡಿಯುತ್ತಿರುವುದು ನಮಗೆ ಅಚ್ಚರಿಯೆನಿಸಿತು.

ನಮ್ಮ ಹಡಗು ರಾತ್ರಿ ಹನ್ನೆರಡಕ್ಕೆ ಹೊರಡುವುದಿತ್ತು. ನಾವು ಹನ್ನೊಂದರೊಳಗೆ ಅಲ್ಲಿರಬೇಕಿತ್ತು. ನಮಗಿನ್ನು ನಾಲ್ಕು ಘಂಟೆ ಅಲೆದಾಡಲು ಸಮಯವಿತ್ತು. ನನಗೆ ನಡೆದು ನಡೆದು ಕಾಲು ಸೋತು ಹೋಗಿದ್ದುವು. ನಮ್ಮ

ಕೆಲಸಗಳೆಲ್ಲಾ ಆಗಿದ್ದುದರಿಂದ ಮೂರು ಮೈಲು ನಡೆದೇ ಹೋಗಬೇಕೆಂದು ನಮ್ಮ ಸ್ನೇಹಿತರು ತೀರ್ಮಾನಿಸಿದರು. ನನ್ನ ಒತ್ತಾಯದ ಮೇಲೆ, ಸ್ವಲ್ಪ ದೂರ ಹೋದಮೇಲೆ ಬಸ್ಸು ಹತ್ತಿ ಪೇಟೆಗೆ ಬಂದೆವು. ೮|| ವರೆಗೆ ಪೇಟೆಯಲ್ಲಿ ತಿರುಗಾಡಿದೆವು. ನಾನು, ಗೋಪಿನಾಥ್ ಚಲನಚಿತ್ರವೊಂದನ್ನು ನೋಡಲು 'ಗ್ಲೋಬ್' ಥೀಯೇಟರ್‌ಗೆ ನುಗ್ಗಿದೆವು. ಈ ಚಲನಚಿತ್ರ ಮಂದಿರಗಳು ೨೪ ಘಂಟೆಗಳೂ ತೆರದಿರುತ್ತವೆ. ಆಟದ ಯಾವ ಭಾಗದಲ್ಲಿಯಾದರೂ ಹೋಗಿ ಅದೇ ಭಾಗ ಮುಗಿಯುವವರೆಗೆ ಇದ್ದು ಬರಬಹುದು. 'Sweater Girl' ಎಂಬ ಚಿತ್ರ ನಮ್ಮ ಭಾಗಕ್ಕೆ ಬಂದಿತ್ತು. ಚಿತ್ರನೋಡಿಕೊಂಡು ಆಯಾಸಪರಿಹಾರಮಾಡಿಕೊಂಡು ೧೦|| ಘಂಟೆಗೆ ಪುನಃ ಲ್ಯಾಡರಿನ ಲ್ಯಾಡರನ್ನು ಏರಿದೆವು.

ಹೊನಲೂಲುವಿನಲ್ಲಿ ಎರಡು ದಿನಪತ್ರಿಕೆಗಳು ಹೊರಡುತ್ತವೆ. '**ಹೊನಲೂಲು ಸ್ಟಾರ್ ಬುಲೆಟಿನ್**' ಮತ್ತು '**ಹೊನಲೂಲು ಅಡ್ವಟೈಸರ್**'. ನಮ್ಮ ಹಡಗು ದಡಕ್ಕೆ ಬಂದ ಕೂಡಲೇ ಈ ಪತ್ರಿಕೆಗಳ ಸುದ್ದಿಗಾರರು ಬಂದು ನಮ್ಮ ಹಡಗಿನ ಸುದ್ದಿಯನ್ನು ತಿಳಿದುಕೊಂಡು ಕೆಲವು ಛಾಯಚಿತ್ರಗಳನ್ನು ತೆಗೆದುಕೊಂಡು ಹೋದರು. ೯ ದಿನಗಳಿಂದ ಪತ್ರಿಕೆಗಳನ್ನು ಓದದೆ ಮನಸ್ಸು ಪತ್ರಿಕೆಗಾಗಿ ಹಾತೊರೆಯುತಿತ್ತು ಅಂಗಡಿಯನ್ನು ಹುಡುಕಿಕೊಂಡು ಹೋಗಬೇಕೆಂದು ಯೋಚಿಸುತ್ತಿರುವಾಗ ದಾರಿಯಲ್ಲೇ ಲೈಟ್ ಕಂಬಕ್ಕೆ ಒರಗಿಸಿ ಒಂದು ಟ್ರೇ ಇಟ್ಟದ್ದರು. ಆ ಟ್ರೇನಲ್ಲಿ ತುಂಬಾ ದಿನಪತ್ರಿಕೆಗಳಿದ್ದುವು. ಅದರ ಪಕ್ಕದಲ್ಲಿ ಒಂದು ದುಡ್ಡಿನ ಡಬ್ಬಿ ಇತ್ತು. ಪಕ್ಕದಲ್ಲಿ ಯಾರೂ ನಿಂತಿರಲಿಲ್ಲ. ಪೇಪರ್ ಬೇಕಾದವರು, ಆ ಡಬ್ಬಿಯಲ್ಲಿ ಅದರ ಬೆಲೆಯಾದ ೫ ಸೆಂಟುಗಳನ್ನು ಹಾಕಿ ಪೇಪರ್ ತೆಗೆದುಕೊಂಡು ಹೋಗಬಹುದು. ಊರಿನ ಮುಖ್ಯಮುಖ್ಯ ಬೀದಿಗಳಲ್ಲೆಲ್ಲಾ ಈ ಡಬ್ಬಿಗಳನ್ನು ನೋಡಿದೆವು. ಆದರೂ ಪತ್ರಿಕೆ ಮಾರುವ ಹುಡುಗರೂ ಬೇಕಾದಷ್ಟು ಇದ್ದರು. ಷಾಂಘೈ, ಹಾಂಗ್‌ಕಾಂಗ್‌ಗಳಲ್ಲಿದ್ದಂತೆ ಇಲ್ಲಿಯೂ ಹೆಂಗಸರು ಪತ್ರಿಕೆಗಳನ್ನು ಮಾರುತ್ತಿದ್ದರು.

ಈ ಪತ್ರಿಕೆಗಳ ಪುಟ ೨೪. ನ್ಯೂಯಾರ್ಕಿನಲ್ಲಿ ಬಂದ ಮಂಜು

ಮಾರುತ, ಅದರಿಂದ ಆದ ಅನಾಹುತ, ಪ್ರಥಮ ಪುಟದಲ್ಲಿತ್ತು. ಅದರ ಜೊತೆಗೆ ಅಮೇರಿಕದ ಅಧ್ಯಕ್ಷ ಚುನಾವಣೆಯ ಗೊಂದಲವೂ ಇತ್ತು. ಅದೇ ಪುಟದಲ್ಲಿಯೇ ನಮ್ಮ ಮೆರೀನ್ ಲ್ಯಾಡರ್ ಬಂದ ಸುದ್ದಿ, ಅದರಲ್ಲಿದ್ದವರ ವಿವರಣೆ ಮುಂತಾದುವನ್ನು ಕೊಟ್ಟಿದ್ದರು. ಒಳಗಡೆಯ ಪುಟದಲ್ಲಿ ಭಾರತದಸುದ್ದಿಯೊಂದಿತ್ತು. **ಲಾರ್ಡ್ ಲೂಯಿಮೌಂಟ್‌ಬೇಟೆನ್ನ**ರನ್ನು ಭಾರತದ ವೈಸ್ರಾಯ್ ಆಗಿ ನೇಮಕಮಾಡಿದ ವಿಚಾರ, **ಲಾರ್ಡ್ ವೇವಲ್** ರಾಜಿನಾಮೆಯ ಕಾರಣವನ್ನು ಪ್ರಧಾನಮಂತ್ರಿ **ಅಟ್ಲಿ ಚರ್ಚಿಲ್‌ಗೆ** ನಿರಾಕರಿಸಿದ ವಿಚಾರ, ೧೯೪೮ ನೇ ಜೂನ್ ಹೊತ್ತಿಗೆ ಭಾರತಕ್ಕೆ ಸಂಪೂರ್ಣ ಸ್ವಾತಂತ್ರ್ಯ ಕೊಟ್ಟು ಬ್ರಿಟಿಷರು ಹಿಂತಿರುಗಲು ಮಾಡಿದ ನಿರ್ಧಾರ, ಆ ಪತ್ರಿಕೆಯಲ್ಲಿ ಪ್ರಕಟವಾಗಿತ್ತು. ಆಗಲೇ ನಮಗೆ ಪ್ರಥಮ ಭಾರತದ ಸುದ್ದಿ ಗೊತ್ತಾಗಿದ್ದುದು.

ಹೊನಲೂಲುವಿನ ಹೆಸರೇ ಮನಮೋಹಕವಾಗಿದೆ. ಜನರೂ ಹಾಗೆಯೇ. ಬೀದಿಯಲ್ಲಿ ಯಾರನ್ನೇ ಆಗಲಿ ಏನಾದರೂ ಕೇಳಿದರೆ ತುಂಬಾ ಮೈತ್ರಿಯಿಂದ ಅವರಿಗೆ ಸಹಾಯಮಾಡುತ್ತಾರೆ. ದಿಕ್ಕು ತೋರಿಸುತ್ತಾರೆ. ಹವಾಯ್ ಜನ, ಅವರ ಸರಳ ಸ್ವಭಾವಕ್ಕೂ, ಅವರ ಆದರದ ಸ್ವಾಗತಕ್ಕೂ ಹೆಸರು ವಾಸಿಯಾಗಿದಾರೆ.

ಈ ದ್ವೀಪದ ಹವಾ ಸಮಧಾತುವಾಗಿರುತ್ತದೆ. ಸೂರ್ಯ ಇಲ್ಲಿ ಯಾವಾಗಲೂ ಮುಳುಗುವುದೇ ಇಲ್ಲ, ಎಂದು ಇಲ್ಲಿಯ ಜನ ಹೇಳುತ್ತಾರೆ. ಚಳಿ, ಗಾಳಿ, ಬಿಸಿಲು ಎಲ್ಲವೂ ವರ್ಷಗಟ್ಟಲೇ ಒಂದೇಸಮ. ಮಳೆ, ಚಳಿ, ಸ್ವಲ್ಪ ಮಾತ್ರ. ಬೇಸಿಗೆಯಲ್ಲಿ ಅಮೇರಿಕದಿಂದ ಸಾವಿರಾರು ಜನ ಇಲ್ಲಿಗೆ ವಿಶ್ರಾಂತಿಗಾಗಿ ಬರುತ್ತಾರೆ. ಇದು ಮೈಸೂರಿನ ನಂದಿ ಮತ್ತು ಉದಕಮಂಡಲ. ಹವಾಯ್ ಜನ ಅಮೇರಿಕವನ್ನು 'ಹಿರಿಯನೆಲ' ಎಂದು ಕರೆಯುತ್ತಾರೆ.

ಈ ದ್ವೀಪಗಳಲ್ಲಿ ಹೆಚ್ಚಾಗಿ ಕಬ್ಬು ಬೆಳೆಯುತ್ತಾರೆ, ಕಾರಣ ಇಲ್ಲಿ ಹತ್ತಾರು ಸಕ್ಕರೆಯ ಕಾರ್ಖಾನೆಗಳಿವೆ. ಪೈನ್ಯಾಪಲ್ ಇಲ್ಲಿಯ ಸೊಗಸಿನ ಹಣ್ಣು.

ಎಲ್ಲಿ ನೋಡಿದರೂ ಇದರ ತೋಟಗಳಿವೆ. ಬಾಳೆಯ ಹಣ್ಣುಗಳೂ ಹಾಗೆಯೇ.

ಅಲ್ಲಿಯ ವಾಸದಮನೆಗಳನ್ನೂ ನೋಡುವ ಅವಕಾಶವೊಂದು ಸಿಕ್ಕಿತು. ಈ ವಾಸದ ಮನೆಗಳು ಬಹು ಚಿಕ್ಕವಿದ್ದು ಎಲ್ಲಾ ಅನುಕೂಲಗಳಿಂದ ಕೂಡಿವೆ. ನೀರು, ದೀಪ, ಅಡಿಗೆಯ ಸಾಮಾನುಗಳು, ಪೀಠೋಪಕರಣಗಳು, ಎಲ್ಲವನ್ನೂ ಬಾಡಿಗೆಯಮನೆಯವರೇ ಒದಗಿಸಿ ಕೊಡುತ್ತಾರೆ. ಮನೆ, ಮರದ ಹಲಗೆಗಳಿಂದ ಮಾಡಿದ್ದರು. ಕಟ್ಟಡಕ್ಕೆ ತಳಹದಿಯೇ ಇರಲಿಲ್ಲ. ನಾಲ್ಕು ಅಡಿ ಹಲಗೆಯನ್ನು ಎತ್ತರಿಸಿ ಮಂಚದಂತೆ ಮಾಡಿರುತ್ತಾರೆ. ಅದೇಮನೆಯ ನೆಲಗಟ್ಟು.

ಹೊನಲೂಲು ನರ್ತನ, ಹೊನಲೂಲುವಿನ ವಿಶೇಷ. ಇಲ್ಲಿಗೆ ಬಂದವರು, ಈ ನರ್ತನ ನೋಡದೆ ಹೋಗ ಬಾರದು. ಇದಕ್ಕೆ "**ಲೂಲು**" ಡಾನ್ಸ್ ಎನ್ನುತ್ತಾರೆ. ಇಲ್ಲಿಯ ಜನಕ್ಕೆ **ಉದಯಶಂಕರ, ರಾಮಗೋಪಾಲ್**ರ ಹೆಸರು ಬಹಳ ಚೆನ್ನಾಗಿ ಗೊತ್ತಿದೆ. ನರ್ತನದ ಮಾತು ಬಂದಾಗ ಇವರ ಹೆಸರು ಸಾಮಾನ್ಯವಾಗಿ ಕೇಳಿ ಬರುತ್ತದೆ.

ಭಾರತದವರು ಯಾರೇ ಬರಲಿ, ಹೊನಲೂಲು ಜನರು ತಕ್ಷಣ ' ನಿಮ್ಮ **ವಾಟುಮಲ್**' ಇಲ್ಲಿದ್ದಾರೆ (Your Watumal is here) ಎನ್ನುತ್ತಾರೆ. ಶ್ರೀ ವಾಟುಮಲ್, ಸಿಂಧ್ ಪ್ರಾಂತ್ಯದ ಸುಪ್ರಸಿದ್ಧ ವ್ಯಾಪಾರಿಗಳು. ಇವರ ತಂದೆ ಅಮೇರಿಕದಲ್ಲಿ ಬಂದು ನೆಲಸಿ, ಅಮೇರಿಕ ಸ್ತ್ರೀಯನ್ನೇ ವಿವಾಹವಾದರು. ಅಮೇರಿಕಾದಲ್ಲಿ ಬಂದು ವ್ಯಾಪಾರ ಮಾಡಿ ಐಶ್ವರ್ಯವಂತರಾದ ಶ್ರೀ ವಾಟುಮಲ್, ಭಾರತೀಯ ವಿದ್ಯಾರ್ಥಿಗಳ ಅಮೇರಿಕದ ವಿದ್ಯಾಭ್ಯಾಸಕ್ಕೋಸ್ಕರ ವಿದಾರ್ಥಿವೇತನ ಕೊಡುತ್ತಾರೆ. ಅದೇ ವಿದ್ಯಾರ್ಥಿವೇತನ ತೆಗದುಕೊಂಡ ಈರ್ವರು ವಿದ್ಯಾರ್ಥಿಗಳು ನಮ್ಮ ಹಡಗಿನಲ್ಲಿಯೇ ಇದ್ದರು. ಇಲ್ಲಿರುವ ಶ್ರೀವಾಟುಮಲ್ಲರು ಹಿರಿಯ ವಾಟುಮಲ್ಲರ ಕಿರಿಯ ಮಗ. ಇವರ ತಂದೆಯವರು ಈಗಿಲ್ಲ. ಇವರ ಅಮೇರಿಕದ ತಾಯಿ

**ಹಾಲಿವುಡ್ಡಿನಲ್ಲಿದಾರೆ.** ಆಕೆಯೇ ಈ ವಿದ್ಯಾರ್ಥಿವೇತನದ ಕಾರ್ಯಭಾರ ಮಾಡುತ್ತಾರೆ.

ಸುಂದರವಾದ ಹೊನಲೂಲುವನ್ನು ನೋಡಿಕೊಂಡು ರಾತ್ರಿ ಹನ್ನೆರಡು ಘಂಟೆಗೆ ಹಡಗನ್ನೇರಿದೆವು. ನಮ್ಮ ಹಡಗು ಮಧ್ಯ ಎಲ್ಲೂ ನಿಲ್ಲದೆ ನೇರ ವಾಗಿ ಸ್ಯಾನ್‌ಫ್ರಾನ್‌ಸಿಸ್ಕೋವಿಗೆ ಹೋಗುವುದಿತ್ತು.

**ಪೆಸಿಫಿಕ್ ಸಾಗರ**

೨೬-೧-೪೭

ಹಡಗಿನ ಪ್ರಯಾಣಿಕರಲ್ಲಿ ಎಂದೂ ಕಾಣದ ಲವಲವಿಕೆ, ಸ್ಫೂರ್ತಿ ಎದ್ದು ಕಾಣುತ್ತಿದೆ. ಸಹಜವೆ. ನಾಳೆ ನಾವೆಲ್ಲ ನಮ್ಮ ಕನಸಾಗಿದ್ದ **ಬಂಗಾರದ ಭೂಮಿಯ** ಮೇಲೆ ಕಾಲಿಡುತ್ತೇವೆ. ನಿಜಕ್ಕೂ ನಾಳೆ ಬೆಳಿಗ್ಗೆ ನಾವು ಪ್ರಪಂಚದ ಬಹು ದೊಡ್ಡದಾದ '**ಬಂಗಾರದ ಸೇತುವೆ**'ಯನ್ನು (**Golden Gate Bridge**) ದಾಟಬೇಕು.

ಇಂದು ನಾವು ಹಡಗಿನಲ್ಲಿರುವ ಕೊನೆಯ ದಿನವಾದ್ದರಿಂದ ಎಲ್ಲ ಪ್ರಯಾಣಿಕರು ಒಂದೆಡೆ ಕಲೆತು ಪರಸ್ಪರ ವಿನಿಮಯ ಮಾಡಕೊಂಡೆವು. ೩೩ ದಿನಗಳು ಒಂದಾಗಿದ್ದು ನಾಳೆ ಅಗಲಿ ನಮ್ಮ ಊರುಗಳಿಗೆ ಹೋಗುವವರಿದ್ದೆವು. ಹಡಗಿನಲ್ಲಿ ನಡೆದ ನಾನಾ ಆಟಪಾಠ ಸ್ಪರ್ಧೆಗಳಲ್ಲಿ ಗೆದ್ದವರಿಗೆ ಬಹುಮಾನ ಕೊಡುವ ಸಮಾರಂಭವೂ ಈ ರಾತ್ರಿ ನೆರವೇರಿತು.

೩೩ ದಿನಗಳವರೆಗೆ ಸ್ವಾಭಾವಿಕ ಪ್ರಪಂಚಕ್ಕಿಂತ ಬೇರೆಯಾದ ಹಡಗಿನ ಪ್ರಪಂಚದಲ್ಲಿ ಕಾಲಕಳೆದ ನಾವು ನಾಳೆ ಬೆಳಿಗ್ಗೆ ನವೀನ ನಾಗರಿಕತೆಯ ಇನ್ನೊಂದು ಹೊಸ ಪ್ರಪಂಚಕ್ಕೆ ಕಾಲಿಡುವ ಘಳಿಗೆಯನ್ನು ಎದುರು ನೋಡುತ್ತಾ ರಾತ್ರಿಯನ್ನು ಕಳೆದೆವು. ನಾವು ಬೆಳಿಗ್ಗೆ ಎದ್ದು ಹಡಗಿನ ಮೇಲೆ ಬಂದಾಗ ನಮಗೆ ಕಂಡುದು, ಬಂಗಾರದ ಸೇತುವೆ. ಬಂಗಾರದ ಭೂಮಿಯ ಭವ್ಯವಾದ ಯಂತ್ರ ಕುಶಲತೆಯ ನಿರ್ಮಾಣ. ಬಂಗಾರದ

**ಭೂಮಿಯ ಕ್ಯಾಲಿಫೋರ್ನಿಯ** ಸಂಸ್ಥಾನದ **ಸ್ಯಾನ್‌ಫ್ರಾನ್‌ಸಿಸ್ಕೋ** ನಗರ ಬಂದೇ ಬಿಟ್ಟಿದ್ದಿತು. ಸೇತುವೆಯನ್ನು ಹಾದು, ನಗರದ ಬಂದರಿನಲ್ಲಿ ನಮ್ಮ ಹಡಗು ನಿಂತಾಗ ಬೆಳಿಗ್ಗೆ ಎಂಟು ಘಂಟೆಯಾಗಿತ್ತು. ಬೆಳಗಿನ ಸೂರ್ಯ ಪ್ರಕಾಶಮಾನವಾಗಿದ್ದ. ನವಿಲು ಗರಿ ಕೆದರಿಕೊಂಡು ನಿಂತಂತೆ, ತನ್ನ ಕಿರಣ ಗಳನ್ನು ಹೊರಚಾಚಿ ಪ್ರಕಾಶಿಸುತ್ತಿದ್ದ.

---

## ಬಂಗಾರದ ಭೂಮಿ

ನಾವು ಅಮೇರಿಕವನ್ನು ತಲ್ಪಿದಾಗ ಚಳಿಗಾಲದ ಮಧ್ಯದಲ್ಲಿದ್ದೆವು. ಆದರೆ ಕ್ಯಾಲಿಫೋರ್ನಿಯ ಸಂಸ್ಥಾನದಲ್ಲಿ ಅಷ್ಟು ಚಳಿ ಕಾಣಿಸಿಕೊಳ್ಳುವು ದಿಲ್ಲ. ನಾವು ಹಡಗಿನಿಂದಿಳಿದಾಗ ನಮಗೆ ಸೂರ್ಯನ ಪ್ರಕಾಶಮಾನ ವಾದ ಕಿರಣಗಳು ಸ್ವಾಗತಿಸಿದವು.

ಮೊದಲು ಅಮೇರಿಕನ್ ಪ್ರಯಾಣಿಕರನ್ನು ತನಿಖೆ ಮಾಡಿ ಹಡಗಿ ನಿಂದ ಇಳಿಯಲು ಅನುಮತಿ ಇತ್ತರು. ನಂತರ ನಮ್ಮ ಪರೀಕ್ಷೆಯಾಯಿತು. ಅಮೇರಿಕದಲ್ಲಿ ನಾಕಂಡ ಮೊಟ್ಟ ಮೊದಲನೆಯ ದೃಶ್ಯವೇ, ಪತ್ರಿಕಾ ಪ್ರತಿ ನಿಧಿಗಳ ಗುಂಪಿನದು. ಹಡಗಿನಲ್ಲಿದ್ದ ವಿಶೇಷ ಪ್ರಯಾಣಿಕರ ಭಾವ ಚಿತ್ರ ಗಳನ್ನು ತೆಗೆದುಕೊಂಡು, ಅವರ ಹೇಳಿಕೆಗಳನ್ನು ಬರೆದುಕೊಂಡರು. **ನ್ಯೂಯಾರ್ಕ್ ಟೈಮ್ಸ್** ಪತ್ರಿಕೆಯ ಸುದ್ದಿಗಾರನು ನನ್ನನ್ನು ಭೇಟಿ ಮಾಡಿ ನನ್ನ ಮತ್ತು ಇತರ ಮೂವರ ಭಾವಚಿತ್ರವನ್ನು ತೆಗೆದುಕೊಂಡನು.

ಕೆಂಗೇರಿಯಲ್ಲಿ ಭಾರತೀಯರ ಸೇವೆ ಮಾಡಲು ಬಂದಿದ್ದ **ರೆವೆರೆಂಡ್ ಕೈಥಾನರು,** ನನ್ನನ್ನು ಸ್ವಾಗತಿಸಲು ತಮ್ಮ ಪ್ರತಿನಿಧಿಯೊಬ್ಬರನ್ನು ಕಳು ಹಿಸಿ ಕೊಟ್ಟಿದ್ದರು. ಅಮೇರಿಕದಲ್ಲಿರುವ ಭಾರತ ರಾಯಭಾರಿ ಕಚೇರಿ ಯಲ್ಲಿರುವ ವಿದ್ಯಾರ್ಥಿಗಳ ಸಲಹೆಗಾರರಾದ **ಶ್ರೀ ಎಂ. ಎಸ್. ಸುಂದರಂ** ರವರು, ತಮ್ಮ ಪ್ರತಿನಿಧಿಯಾಗಿ ಬರ್ಕ್ಲೀ ವಿಶ್ವವಿದ್ಯಾನಿಲಯದ ಹಿಂದೂ ಸ್ಥಾನ ವಿದ್ಯಾರ್ಥಿ ಸಂಘದ ಅಧ್ಯಕ್ಷರಾದ **ಡಾ|| ಬರುವಾ**ರವರನ್ನು

ನಮ್ಮನ್ನು ಸ್ವಾಗತಿಸಲು ಕಳುಹಿಸಿಕೊಟ್ಟಿದ್ದರು. ಈ ಸಂಘದವರು ನಮ್ಮ ಊಟ ಉಪಚಾರದ ವ್ಯವಸ್ಥೆಗಳೆಲ್ಲವನ್ನೂ ಸುವ್ಯವಸ್ಥೆಯಿಂದ ಮಾಡಿದ್ದರು. ನಾನು ಮತ್ತು ಗೋಪಿನಾಥ್ ಅಂತರ ರಾಷ್ಟ್ರೀಯ ವಿದ್ಯಾರ್ಥಿಮಂದಿರಕ್ಕೆ ಬಂದೆವು. ಸ್ವಾಮಿ ಮತ್ತು ರಾವ್, ಷಟಕ್ ಹೋಟೆಲಿನಲ್ಲಿ ಬಿಡಾರ ಮಾಡಿದರು **'ಸಂಜೆಗೆಲ್ಲರು ಸೇರಿ ಸಂಜೆಗಗಲುವ ತೆರದಿ'** ಹಡಗಿನ ನಮ್ಮ ಬಳಗವೆಲ್ಲ, ಬಂಗಾರದ ಭೂಮಿಯಲ್ಲಿ ಚದುರಿಹೋಯಿತು. ಅಂತರ ರಾಷ್ಟ್ರೀಯ ವಿದ್ಯಾರ್ಥಿಮಂದಿರದ ಐದನೆಯ ಮಹಡಿಯ ಮೇಲಿನ ಕೊಠಡಿಯೊಂದರಲ್ಲಿ ವಿಶ್ರಾಂತಿ ತೆಗೆದುಕೊಂಡೆನು. ಅಂದು ರಾತ್ರಿ ನಿದ್ರೆಯೇ ಬರಲಿಲ್ಲ. ನೆಲದ ಮೇಲಿದ್ದರೂ, ಹಡಗಿನಲ್ಲಿ ಉಯ್ಯಾಲೆಯಾಡಿದಂತೆ ದೇಹವೆಲ್ಲಾ ಅಲ್ಲಾಡುತ್ತಿದ್ದಂತೆ ಭಾಸವಾಗುತ್ತಿತ್ತು.

ಂತರ ರಾಷ್ಟ್ರೀಯ ವಿದ್ಯಾರ್ಥಿ ಮಂದಿರದಲ್ಲಿ, ಮಂಗಳೂರಿನಿಂದ ಬಂದು ವಿದ್ಯಾಭ್ಯಾಸ ಮಾಡುತ್ತಿದ್ದ **ಶ್ರೀ ಭಟ್** ಎಂಬುವರ ಪರಿಚಯವಾಯಿತು. ಅವರು ಮತ್ತು ಮದರಾಸಿನ **ಶ್ರೀ ಬಲರಾಮ್** ಎಂಬುವರು ನಮಗೆ ಅಲ್ಲಿಯ ನಾಗರಿಕತೆಯ ಪ್ರಥಮ ಪರಿಚಯ ಮಾಡಿಕೊಟ್ಟರು.

ಹಿಂದೂಸ್ಥಾನ್ ವಿದ್ಯಾರ್ಥಿ ಸಂಘದವರು ನಮಗೊಂದು ಭಾರಿ ಸತ್ಕಾರ ಕೂಟವನ್ನೇರ್ಪಡಿಸಿದ್ದರು. ಅಮೇರಿಕ ರಾಜ್ಯ ಇಲಾಖೆಯ **ಶ್ರೀಮತಿ ಜೆಂಕಿನ್ಸರು**, ಅಂತರ ರಾಷ್ಟ್ರೀಯ ವಿದ್ಯಾರ್ಥಿ ಮಂದಿರದ ಸಂಚಾಲಕರು, ಬರ್ಕ್ಲೀ ವಿಶ್ವವಿದ್ಯಾನಿಲಯದ ವಿದೇಶ ವಿದ್ಯಾರ್ಥಿಗಳ ಸಲಹೆಗಾರರೂ, ಸಭೆಗೆ ಬಂದು ನಮಗೆ ಬುದ್ಧಿವಾದವನ್ನು ಹೇಳಿದರು. ಅಧಿಕಾರಯುತವಾಗಿ ನಮ್ಮನ್ನು ಬಂಗಾರದ ಭೂಮಿಗೆ ಸ್ವಾಗತಿಸಿದರು.

ಮರುದಿನ ಬೆಳಿಗ್ಗೆ **ಸ್ಯಾನ್‌ಫ್ರಾನ್‌ಸಿಸ್ಕೋ, ಬರ್ಕ್ಲೀ, ಓಕ್‌ಲೇಡ್** ಮುಂತಾದ ಸ್ಥಳಗಳನ್ನು ನೋಡಿಕೊಂಡು ಬಂದೆವು. ಬರ್ಕ್ಲೀಯಲ್ಲಿನ **'ರೆಡ್ ವುಡ್ ಚಕ್ರಾಧಿಪತ್ಯ'**ವು ತುಂಬಾ ರಮಣೀಯವಾಗಿತ್ತು. ಬಹಳ ದಿನಗಳಿಂದ ಕಾಪಾಡಲ್ಪಟ್ಟ ದೊಡ್ಡದೊಡ್ಡ ಮರಗಳುಳ್ಳ ಕಾಡು. ವಿಶ್ವಸಂಸ್ಥೆಯ

ಮೊದಲ ಸಭೆ ಸೇರಿದಾಗ, ಪ್ರತಿಯೊಂದು ಸದಸ್ಯ ರಾಷ್ಟ್ರಗಳೂ ತಮ್ಮ ನೆನಪಿಗೆ ಒಂದೊಂದು ಮರವನ್ನು ನೆನಪಾಗಿ ಇಟ್ಟುಕೊಂಡಿದ್ದಾರೆ. ರೆಡ್‌ವುಡ್ ಮರದ ಕೆಳಗೆ **ಅಧ್ಯಕ್ಷ ರೂಸ್‌ವೆಲ್ಟ್** ನಿಂತು ಮಾತನಾಡಿದ ವಿಷಯ ಆ ಮರದಲ್ಲಿ ಕೆತ್ತಿದಾರೆ. ಮರಗಳ ಚಕ್ರಾಧಿಪತ್ಯದಲ್ಲಿ ಸ್ವಲ್ಪ ವಿಶ್ರಮಿಸಿಕೊಂಡು **ಕ್ಲಿಫರ್ಡ್** ಸಾಗರ ತೀರದಲ್ಲಿ ಸಾಯಂಕಾಲ ಅಲೆದಾಡಿ ಬಂಗಾರದ ಸೇತುವೆಯನ್ನು ನೋಡಿ ಬರಲು ಹೋದೆವು. ಬಂಗಾರದ ಭೂಮಿಗೆ ತಕ್ಕ ಸೇತುವೆ ಈ '**ಗೋಲ್ಡನ್ ಗೇಟ್ ಬ್ರಿಡ್ಜ್**'.

ಸ್ಯಾನ್‌ಫ್ರಾನ್‌ಸಿಸ್ಕೋ ನಗರದ ದೃಶ್ಯಗಳನ್ನು ನೋಡಿಕೊಂಡು ರಾತ್ರಿ ರೈಲಿನಲ್ಲಿ ನ್ಯೂಯಾರ್ಕಿಗೆ ಪ್ರಯಾಣ ಬೆಳಿಯಿಸಿದೆನು. ಗೋಪಿನಾಥ್ ಹತ್ತಿರದಲ್ಲಿನ ಸಿಯಾಟಲ್‌ಗೆ ಹೋದನು. ಸ್ವಾಮಿ ಮತ್ತು ರಾವ್ ಮೊದಲೇ ಪ್ರಯಾಣ ಬೆಳೆಸಿದ್ದರು. ನಾನೀಗ ಒಂಟಿಯಾಗಿದ್ದೆನು. ಸ್ಯಾನ್‌ಫ್ರಾನ್‌ಸಿಸ್ಕೋದಿಂದ ನ್ಯೂಯಾರ್ಕ್ ನಗರಕ್ಕೆ ರೈಲಿನಲ್ಲಿ ಎರಡೂವರೆ ದಿನಗಳ ಪ್ರಯಾಣ. ರೈಲ್ವೆ ಛಾರ್ಜು ಪ್ರಥಮ ತರಗತಿಯಲ್ಲಿ (ಪುಲ್‌ಮನ್ ಗಾಡಿ) ೯೨ ಡಾಲರು. ವಿಮಾನದಲ್ಲಿ ಪ್ರಯಾಣ ಬೆಳೆಸಿದ್ದರೆ ೧೨೫ ಡಾಲರು ಕೊಟ್ಟು ಕೇವಲ ೧೦ ಘಂಟೆಗಳಲ್ಲಿ ನ್ಯೂಯಾರ್ಕ್ ತಲ್ಪಬಹುದಿತ್ತು. ಸ್ಯಾನ್‌ಫ್ರಾನ್‌ಸಿಸ್ಕೋದಿಂದ ನ್ಯೂಯಾರ್ಕಿಗೆ ೩೨೦೦ ಮೈಲಿ ದೂರ.

## ಪ್ರಯಾಣ ಸೌಕರ್ಯ

ಅಮೇರಿಕದ ದೊಡ್ಡ ಮತ್ತು ಸಣ್ಣ ಪಟ್ಟಣಗಳಿಗೆ ಸಾಮಾನ್ಯವಾಗಿ ರೈಲು ಪ್ರಯಾಣ ಸೌಕರ್ಯವಿದೆ– ದೂರದ ಪಟ್ಟಣಗಳಿಗೆ ಹೋಗಲು ರೈಲ್ವೆ ಪ್ರಯಾಣವೇ ಒಳ್ಳೆಯದು. ಇತ್ತೀಚೆಗೆ ವಿಮಾನ ಪ್ರಯಾಣ ದೂರ ಪಟ್ಟಣಗಳ ಅಂತರವನ್ನು ಕೂಡ ಕಡಿಮೆಮಾಡಿದೆ. ಸ್ಯಾನ್‌ಫ್ರಾನ್‌ಸಿಸ್ಕೋದಿಂದ ಬೆಳಿಗ್ಗೆ ೮ ಘಂಟೆಗೆ ಹೊರಟರೆ ಸಂಜೆ ೬ ಘಂಟೆಗೆ ನ್ಯೂಯಾರ್ಕಿನಲ್ಲಿರಬಹುದು. ಇದು ಶ್ರೀಮಂತರ ಮತ್ತು ಅತಿ ತ್ವರಿತವಾಗಿ ಹೋಗುವವರ ಮಾತು. ಸಾಮಾನ್ಯ ಜನರಿಗೆ ರೈಲ್ವೆ ಅಥವಾ ಬಸ್ಸೇ ಸರಿ.

## ಸಾಮಾನ್ಯ ರೀತಿಯ ಕೋಚ್

ರೈಲ್ವೆ ಪ್ರಯಾಣದಲ್ಲಿ ಅನೇಕ ವಿಧಗಳಿವೆ. ಇದರಲ್ಲಿ ಪ್ರಯಾಣದ ವೆಚ್ಚ ತುಂಬಾ ಕಡಿಮೆಯಾಗುತ್ತದೆ. ಇದರ ಹೆಸರು "**ಡೇ ಕೋಚ್**". ಆದರೂ ರಾತ್ರಿ ಪ್ರಯಾಣವನ್ನು ಇದರಲ್ಲಿ ಮಾಡಬಹುದು. ಮಲಗಿ ನಿದ್ರಿಸಿ ಪ್ರಯಾಣ ಮಾಡಲು ಸಾಧ್ಯವಾಗುವುದಿಲ್ಲ. ಇಳಿಜಾರಾದ ಕುರ್ಚಿಯಲ್ಲಿ ಕುಳಿತು ತುಸು ನಿದ್ರೆ ಮಾಡುತ್ತಾ ತೂಕಡಿಸುತ್ತ ಇರಬಹುದು. ಒಂದು ಮೈಲಿಗೆ ೨.೨ ಸೆಂಟ್ಸೆಂದರೆ ನಮ್ಮಲ್ಲಿಯ ಒಂದಾಣೆ ಒಂದು ಕಾಸು. ಅಮೇರಿಕದ ದಕ್ಷಿಣಕ್ಕೆ ಹೋದ ಹಾಗೆ ಇನ್ನೂ ಕಡಿಮೆ ದರ ಬೀಳುತ್ತದೆ.

ಇತ್ತೀಚೆಗೆ ನವೀನ ರೀತಿಯ ಕೋಚ್‌ಗಳನ್ನು ನಿರ್ಮಿಸಿದ್ದಾರೆ. ಗಾಳಿ ಆಡಲು ಅವಕಾಶವಿದ್ದು, ಕುರ್ಚಿಗಳಲ್ಲಿ ಮೆತ್ತೆ ಹಾಕಿದ್ದು. ಯಾವ ಕಡೆ ಬೇಕೋ ಆ ಕಡೆ ತಿರುಗಿಸಲು ಅನುಕೂಲವಿರುತ್ತದೆ. ಗಂಡಸರಿಗೆ ಹೆಂಗಸರಿಗೆ ಬೇರೆ ಬೇರೆಯಾದ ಸ್ನಾನದ ಮನೆಯಿದೆ. ಆದರೆ ಸ್ನಾನಕ್ಕವಕಾಶವಿಲ್ಲ. ಮುಖ ತೊಳೆದುಕೊಳ್ಳಬಹುದು. ಆರಾಮವಾಗಿ ಕುಳಿತುಕೊಂಡು ಹರಟೆ ಹೊಡೆಯಲು ಎರಡು ಬೆಂಚು ಹಾಕಿದ್ದಾರೆ. ಪಕ್ಕದಲ್ಲಿ ಪಾಯಖಾನೆಯ ಗುಂಡಿಯೂ ಇದೆ. ಈ ಕೋಚ್ ಗಾಡಿಗಳಲ್ಲಿ ಪ್ರತಿಯೊಂದು ಸೀಟಿಗೂ ನಂಬರು ಇರುತ್ತದೆ. ಪ್ರಯಾಣಿಕರು ಟಿಕೆಟ್ಟು ಕೊಂಡ ಕೂಡಲೆ ಅದರ ಸೀಟಿನ ನಂಬರು ಗೊತ್ತಾಗುತ್ತದೆ. ಹೀಗೆ ಸ್ಥಳ ಮೊದಲೇ ಗೊತ್ತು ಮಾಡಿ ಇಟ್ಟುಕೊಂಡಿರುವುದರಿಂದ ಭಾರತದಲ್ಲಿನಂತೆ, ರೈಲು ಹೊರಡುವುದಕ್ಕೆ ಮುಂಚೆ ಕೆಲವು ನಿಮಿಷಗಳಲ್ಲಿ ಟಿಕೆಟ್ಟು ಕೊಂಡು ಅವಸರವಸರವಾಗಿ ಪ್ರಯಾಣ ಮಾಡುವಂತಿಲ್ಲ. ಕೋಚ್‌ಗಳಲ್ಲಿ ರಾತ್ರಿ ಪ್ರಯಾಣ ಮಾಡುವವರಿಗೆ ರೈಲ್ವೆ ಗಾರ್ಡುಗಳು ತಲೆದಿಂಬನ್ನು ರಾತ್ರಿಗಾಗಿ ೨೫ ಸೆಂಟ್ಸಗೆ (೦-೧೨-೬) ಬಾಡಿಗೆಗೆ ಕೊಡುತ್ತಾರೆ. ಅಮೇರಿಕದಲ್ಲಿ ಸಾಮಾನ್ಯ ಜನರು ಪ್ರಯಾಣ ಮಾಡುವ ತರಗತಿ ಇದು.

## ಪುಲ್‌ಮನ್ ಗಾಡಿ ಪ್ರಯಾಣ

ನಮ್ಮಲ್ಲಿಯ ಒಂದನೆ ತರಗತಿಯ ಡಬ್ಬಿಗಳಿದ್ದಂತೆ ಅವಕ್ಕಿಂತಲೂ ಸುಂದರವಾಗಿಯೂ, ಸ್ವಚ್ಛವಾಗಿಯೂ, ಅನುಕೂಲವಾಗಿ ಇವೆ ಈ ಪುಲ್‌ಮನ್ ಡಬ್ಬಿಗಳು. ಕೋಚ್ ಗಾಡಿಗಳ ಹಿಂದೆಯೋ ಮುಂದೆಯೋ ಈ ಡಬ್ಬಿಗಳನ್ನು ಹಚ್ಚಿರುತ್ತಾರೆ. ಮೇಲೆ ಪುಲ್‌ಮನ್ ಪ್ರಯಾಣ (Pull man Travel) ಎಂದು ಬರೆದಿರುತ್ತದೆ. ಈ ಪುಲ್‌ಮನ್ ಗಾಡಿಗಳು ರಾತ್ರಿ ಪ್ರಯಾಣಕ್ಕೆ ತುಂಬಾ ಅನುಕೂಲ. ಸುಖವಾಗಿ ನಿದ್ರೆ ಮಾಡಬಹುದು. ಇದಿರು ಬದಿರಾಗಿಯೂ, ಕೆಳಗೂ ಮೇಲೂ ಕಪ್ಪು ಮೆತ್ತೆಗಳಿರುತ್ತವೆ. ಈ ಮೆತ್ತೆಗಳು ನಮ್ಮಲ್ಲಿಯವಕ್ಕಿಂತ ಅಗಲವಾಗಿಯೂ ಉದ್ದವಾಗಿಯೂ ಇವೆ. ಕೆಳಗಡೆ ಮೆತ್ತೆಗೆ ಸ್ವಲ್ಪ ದರ ಜಾಸ್ತಿ. ರಾತ್ರಿ ಮಲಗಲು ಗಾದೆ, ಮಗ್ಗಲು ಹಾಸಿಗೆ, ತಲೆದಿಂಬು, ಹೊದಿಕೆ ಒದಗಿಸುತ್ತಾರೆ. ಇನ್ನೊಬ್ಬರ ಗೊಡವೆ ಬೇಡವೆಂದು ಒಂದು ಪರದೆಯನ್ನು ಹಾಕಿ, ಚಿಕ್ಕ ಕೊಠಡಿಯೋಪಾದಿಯಲ್ಲಿ ಏಕಾಂತಮಾಡಿರುತ್ತಾರೆ. ಓದಲು ಅನುಕೂಲವಾಗುವಂತೆ ಅಲ್ಲಿಯೇ ಒಂದು ದೀಪ. ಕುಳಿತುಕೊಳ್ಳುವ ಸೀಟಿನ ಕೆಳಗಡೆ ಸೂಟ್‌ಕೇಸ್ ಮುಂತಾದ ನಮ್ಮ ಸಾಮಾನುಗಳನ್ನು ಇಡಲು ಅನುಕೂಲವಿರುತ್ತದೆ. ನಮ್ಮ ಬೂಟುಗಳನ್ನು ಕೆಳಗಡೆಯೇ ಇಡಬೇಕು. ರಾತ್ರಿಯ ವೇಳೆಯಲ್ಲಿ ರೈಲ್ವೆ ಪೋರ್ಟರರು ಈ ಬೂಟುಗಳನ್ನು ಪಾಲೀಷ್ ಮಾಡಿಡುತ್ತಾರೆ. ಇಲ್ಲಿಯೂ ಸ್ನಾನಗೃಹವಿದ್ದು ಎಲ್ಲ ಅನುಕೂಲಗಳೂ ಇವೆ. ಈ ತೆರನಾದ ಗಾಡಿಗಳಿಗೆ, ಸ್ವಲ್ಪ ಬೇರೆಯದಾಗಿ **ಚಿಕಾಗೋ, ಸೆಂಟ್ ಲೂಯಿಸ್**, ಮಧ್ಯೆ ಓಡಾಡುವ ರೈಲುಗಳಲ್ಲಿ, ಮಲಗುವ ಡಬ್ಬಿಗಳಿವೆ ಸ್ವಲ್ಪ ಪ್ರಯಾಣ ದರವೂ ಕಡಿಮೆ; ಅನುಕೂಲವೂ ಅದಕ್ಕೆ ತಕ್ಕ ಹಾಗೆ. ಈ ಪುಲ್‌ಮನ್ ಗಾಡಿಗಳಲ್ಲಿ, ಪ್ರತ್ಯೇಕವಾಗಿ ಸಂಸಾರವೊಂದಿಗರಿಗೆ ಅನುಕೂಲವಾಗುವಂತೆ ಕೆಲವು ಡಬ್ಬಿಗಳಿವೆ. ಇವುಗಳಿಗೂ ದರ ಜಾಸ್ತಿ. ಗಾಡಿಗಳಲ್ಲಿ ಪ್ರಯಾಣ ಮೈಲು ಒಂದಕ್ಕೆ ೩.೩ ಸೆಂಟ್ಸ್ ಅಂದರೆ ರೂ ೦–೧–೯. ಅಮೇರಿಕದಲ್ಲಿ ಜಾರಿ ಇರುವ ಪದ್ಧತಿಯ

ಪ್ರಕಾರ ರೈಲ್ವೆ ಪೋರ್ಟರುಗಳಿಗೆ ರಾತ್ರಿ ಒಂದಕ್ಕೆ ೨೫ ಸೆಂಟ್ಸ್ ಇನಾಮು ಕೊಡಬೇಕು. ಇನಾಮಿಲ್ಲದ ಸೇವೆ ಈ ದೇಶದಲ್ಲಿ ಅನಾಗರಿಕತೆಯಂತೆ.

## ರೈಲಿನಲ್ಲಿ ಉಪಹಾರ

ದೂರದ ಪಟ್ಟಣಗಳಿಗೆ ಹೋಗುವ ರೈಲ್ವೆಗಳಲ್ಲಿ ಉಪಹಾರ ಊಟ ಬಡಿಸುವ ಡಬ್ಬಿ ಇರುತ್ತದೆ. ಬೆಳಿಗ್ಗೆ–ಬ್ರೇಕ್‌ಫಾಸ್ಟ್, ಮಧ್ಯಾಹ್ನ–ಲಂಚ್ ಸಂಜೆ–ಸಪ್ಪರ್, ಇಲ್ಲಿ ಯಥಾವತ್ತಾಗಿ ಸಿಕ್ಕುತ್ತದೆ. ಆದರೆ ಇಲ್ಲಿ ಚಪಾತಿ ಯಾಗಲಿ, ಸಾರು ಹುಳಿಯಾಗಲಿ, ಅನ್ನವಾಗಲಿ, ಮೊಸರಾಗಲಿ ಸಿಕ್ಕುವು ದಿಲ್ಲ. ಬೇಯಿಸಿದ ಮಾಂಸ, ಹಸಿತರಕಾರಿ, ಹಾಲು, ಕಾಫಿ, ಹಣ್ಣು, ಬ್ರೆಡ್, ತತ್ತಿ ಇವೇ. ಇದೇ ಅಮೆರಿಕದ ಆಹಾರ, ರಸಕವಳ ಭುಂಜಿ ಸುವ ಕನ್ನಡಿಗರಿಗೆ ಇಲ್ಲಿ ಊಟ ಬರೀ ಕನಸು. ಊಟದ ಗಾಡಿಗೆಬಂದು ಊಟ ಮಾಡಬೇಕು. ಟೇಬಲ್ ಮೇಲೆ ಸೇವಕರು ಊಟದ ವೇಳಾ ಪತ್ರಿಕೆಯನ್ನಿ ಟ್ಟಿರುತ್ತಾರೆ. ನಮಗೆ ಬೇಕಾದದ್ದನ್ನು ನಾವು ತರಿಸಿಕೊಂಡು ಊಟ ಮಾಡ ಬಹುದು. ಊಟವಾದನಂತರ, ಈ ಸೇವಕರುಗಳಿಗೆ ಸೇ. ೧೦ ರಂತೆ ಇನಾಮು ಕೊಡಬೇಕು. ಇದಲ್ಲದೆ ರೈಲಿನ ಡಬ್ಬಿಗಳಲ್ಲಿ ಸ್ಯಾಂಡ್ ವಿಚಸ್, ಹಾಲು, ಕಾಫಿ, ಐಸ್‌ಕ್ರೀಮ್, ಕ್ಯಾಂಡಿ ಮತ್ತು ಹಣ್ಣುಗಳನ್ನು ಮಾರು ತ್ತಾರೆ. ಪ್ರತಿಯೊಂದು ರೈಲ್ವೆ ಸ್ಟೇಷನ್ನುಗಳಲ್ಲಿಯೂ, ಪತ್ರಿಕೆಗಳು, ಮಾರಾ ಟಕ್ಕೆ ಸಿಕ್ಕುತ್ತವೆ.

## ಸಾಮಾನಿನ ವ್ಯವಸ್ಥೆ

ಒಂದೊಂದು ಟಿಕ್ಕೆಟ್ಟಿಗೆ ೧೫೦ ಪೌಂಡು ಭಾರದ ಸಾಮಾನುಗಳು ರೈಲುಗಾಡಿಗಳಲ್ಲಿ ಪುಕ್ಕಟೆಯಾಗಿ ಸಾಗಿಸಬಹುದು. ಈ ಸಾಮಾನುಗಳನ್ನು ಬ್ಯಾಗೇಜ್ ರೂಂ ಗುಮಾಸ್ತರು ಕಳುಹಿಸುವ ಜವಾಬ್ದಾರಿ ತೆಗೆದುಕೊಳ್ಳು ತ್ತಾರೆ. ಪ್ರತಿಯೊಂದು ಸಾಮಾನಿಗೆ ನಂಬರು ಇರುವ ಚೀಟಿಯನ್ನಂಟಿಸಿ ಅದರ ಅರ್ಧ ಚೀಟಿಯನ್ನು ನಮಗೆ ಕೊಡುತ್ತಾರೆ. ಈ ಚೀಟಿಗಳನ್ನು ಕಳೆದುಕೊಳ್ಳ ಬಾರದು. ಸಾಮಾನುಗಳು ನಾವು ಪ್ರಯಾಣಮಾಡುವ ರೈಲಿನಲ್ಲಿ ಬರುವುದಿಲ್ಲ. ಆ ಕಾರಣ ನಾವು ಹೊರಡುವ ಮುನ್ನ ಸಾಮಾನುಗಳನ್ನು ಸಾಗಿಸುವುದು ಒಳ್ಳೆ

ಯದು. ನಾವು ಇಳಿದುಕೊಂಡಿರುವ ಸ್ಥಳದಿಂದ ರೈಲ್ವೆ ಸ್ಟೇಷನ್ನಿಗೆ ಹೋಗಲು ಕ್ಯಾಬ್‌ಗಳು ಸಿಕ್ಕುತ್ತವೆ. ಈ ದೇಶದಲ್ಲಿ ನ್ಯೂಯಾರ್ಕೊಂದನ್ನು ಬಿಟ್ಟು ಕುದುರೆ ಗಾಡಿ ಗಳಾಗಲಿ, ಟಾಂಗಾ, ಎತ್ತಿನ ಗಾಡಿಗಳಾಗಲಿ ಅಥವಾ ಮದ್ರಾಸಿನಲ್ಲಿ ರುವಂತೆ ನರವಾಹನಗಳಾಗಲಿ ಇಲ್ಲ. ಎಲ್ಲದಕ್ಕೂ ಟ್ಯಾಕ್ಸಿ ಕ್ಯಾಬ್, ಅಥವಾ ಟ್ರಕ್‌ಗಳನ್ನುಪಯೋಗಿಸಬೇಕು. ನಮ್ಮ ಸಾಮಾನುಗಳನ್ನು ವಿಮೆ ಮಾಡಿ ಸುವುದು ಒಳ್ಳೆಯದು. ಒಂದು ವೇಳೆ ಗೈರುವಿಲಿಯಾದರೆ, ವಿಮೆ ಮಾಡಿ ಸಿದಷ್ಟು ಹಣ ಸಿಕ್ಕುವುದು. ವಿಮೆಯ ಆಫೀಸು ಸಮೀಪದಲ್ಲಿಯೇ ಇದ್ದು ಕೇವಲ ೧೦ ಸೆಂಟುಗಳು, ವಿಮೆಯ ದರವಾಗುವುದು. ಈ ತೆರನಾದ ಕೆಲವು ಕೆಲಸ ಮಾಡಿ ಕೊಡುವ ಬ್ಯಾಗೇಜ್ ಗುಮಾಸ್ತರು ಇನಾಮು ನಿರೀಕ್ಷಿಸುವುದಿಲ್ಲ. ಅವರಿಗೆ ಕೊಡುವ ಪದ್ಧತಿಯೂ ಇಲ್ಲ.

ರೈಲ್ವೆ ಸ್ಟೇಷನ್ನುಗಳಲ್ಲಿ ನಮ್ಮ ಸಾಮಾನುಗಳನ್ನು ಕೆಲವು ಘಂಟೆಗಳ ಕಾಲ ಇಟ್ಟುಕೊಳ್ಳಲು 'ಪಾರ್ಸಲ್ ರೂಮು'ಗಳಿರುತ್ತವೆ. ಸಾಮಾನುಗಳನ್ನು ಈ ಪಾರ್ಸಲ್ ರೂಮಿನಲ್ಲಿಡಲು, ಒಂದೊಂದಕ್ಕೆ ೧೦ ಸೆಂಟ್ಸ್ ಕೊಡಬೇಕು. ಅಲ್ಲಿಯ ಗುಮಾಸ್ತರು ಒಂದು ಚೀಟಿ ಕೊಡುತ್ತಾರೆ. ಆ ಚೀಟಿ ಪುನಃ ತಂದಾಗ ನಮ್ಮ ಸಾಮಾನುಗಳನ್ನು ವಾಪಸು ಕೊಡುತ್ತಾರೆ. ಹೀಗೆ ಸಾಮಾನು ಇಟ್ಟು ಕೊಳ್ಳುವ ಅವಧಿ ಒಂದು ದಿನ ಮಾತ್ರ. ಪ್ರತಿ ಹೆಚ್ಚಿನ ದಿನಕ್ಕೂ ಬೇರೆ ಹಣ ಕೊಡಬೇಕು. ಸಾಮಾನುಗಳನ್ನಿಡಲು ಈ ದೇಶದಲ್ಲಿ ಇನ್ನೊಂದು ಪದ್ಧತಿ ಇದೆ. ಪ್ರತಿಯೊಂದು ರೈಲ್ವೆ ಸ್ಟೇಷನ್ನುಗಳ ವೆಯ್ಟಿಂಗ ರೂಮುಗಳ ಹತ್ತಿರ ೫೦, ೬೦, ಉಕ್ಕಿನ ಪೆಟ್ಟಿಗೆಗಳ (Steel lockers) ಬೀರುಗಳಿವೆ. ನಮ್ಮ ಸಾಮಾನುಗಳನ್ನು ಆ ಪೆಟ್ಟಿಗೆಗಳಲ್ಲಿಟ್ಟು ಆ ಪೆಟ್ಟಿಗೆಯ ಬಾಗಿಲನ್ನು ಮುಚ್ಚಬೇಕು. ಮುಚ್ಚಳದ ಬುಡದಲ್ಲಿ ಒಂದು ತೂತಿರುತ್ತದೆ. ಅಲ್ಲಿ ನಿಗದಿ ಮಾಡಿದ ಹಣ ಹಾಕಿದರೆ ಪೆಟ್ಟಿಗೆಯು ತನ್ನಷ್ಟಕ್ಕೆತಾನೇ ಬೀಗ ಹಾಕಿ ಕೊಳ್ಳುತ್ತದೆ. ಬೀಗದ ಕೈ ನಮ್ಮ ಹತ್ತಿರ ಇಟ್ಟುಕೊಳ್ಳಬೇಕು. ಅದೇ ನಮ್ಮ ಚೀಟಿ. ಇದಕ್ಕೂ ಕಾಲ ೨೪ ಘಂಟೆ ಮಾತ್ರ.

## ರೈಲ್ವೆ ಪ್ರಯಾಣದ ಸುದ್ದಿ ಸಿಕ್ಕುವ ಸ್ಥಳಗಳು

ದೊಡ್ಡ ದೊಡ್ಡ ಸ್ಟೇಷನ್ನುಗಳಲ್ಲಿ '**ಸಮಾಚಾರ**' (Information) ಎಂದು ಬೋರ್ಡು ತಗಲು ಹಾಕಿರುವ ಆಫೀಸಿರುತ್ತದೆ. ಇಲ್ಲಿರುವ ಸ್ತ್ರೀ ಕಾರ್ಯಕರ್ತರು, ಅತಿ ಶೀಘ್ರವಾಗಿ ನಿಮಗೆ ಬೇಕಾದ ಸುದ್ದಿ, ರೈಲು ಹೊರಡುವ ಸಮಯ, ದರ, ಮುಂತಾದವುಗಳನ್ನು ತಿಳಿಸುತ್ತಾರೆ. ಮತ್ತು ರೈಲ್ವೆ ಕಂಪೆನಿಗಳು ಸ್ವಂತವಾದ ಅನೇಕ ಕಚೇರಿಗಳನ್ನು ನಗರದ ನಾನಾ ಕಡೆಗಳಲ್ಲಿ ತೆರೆದಿರುತ್ತಾರೆ. ಅಲ್ಲಿಯೂ ಸುದ್ದಿ ಸಿಕ್ಕುವುದು, ಟಿಕೆಟ್ಟುಗಳನ್ನೂ ಕೊಂಡುಕೊಳ್ಳಬಹುದು. ಪ್ರಯಾಣಿಕರ ಸೇವಾ ಸಂಘದ ಪ್ರತಿನಿಧಿಗಳು ಪ್ರತಿಯೊಂದು ದೊಡ್ಡ ಸ್ಟೇಷನ್ನುಗಳಲ್ಲಿಯೂ ಇರುವರು. ಅವರ ಮುಖಾಂತರ ನಗರದ ಉಪಹಾರ ಗೃಹಗಳು, ಉಳಿದುಕೊಳ್ಳಲು ಸ್ಥಳ, ಸ್ಥಳೀಯ ವಿದ್ಯಮಾನ ಎಲ್ಲ ಸಿಕ್ಕುವುದು.

## ಬಸ್ಸಿನ ಮೂಲಕ ಪ್ರಯಾಣ

ಈ ದೇಶದ ಯಾವ ಭಾಗದಲ್ಲಾದರೂ ಬಸ್ಸಿನ ಪ್ರಯಾಣಕ್ಕನುಕೂಲವಾದ ರಸ್ತೆಗಳಿರುವುವು, ಕಾರಣ ಕೆಲವು ಕಂಪೆನಿಗಳು ಸಂಪೂರ್ಣವಾಗಿ ಇಡೀ ದೇಶದ ತುಂಬಾ ಬಸ್ಸುಗಳನ್ನು ಓಡಿಸುತ್ತಾರೆ. ಇವರಲ್ಲಿ '**ಗ್ರೇ ಹೌಂಡ್**' ಕಂಪೆನಿಯ ಸರ್ವೀಸು ಬಹು ಮುಖ್ಯವಾದುದು. ರೈಲ್ವೆಗಳಂತೆಯೇ, ಈ ಬಸ್ಸುಗಳು ಸಾಮಾನುಗಳನ್ನು ದೂರದ ಪ್ರಯಾಣಕ್ಕೂ ಸಾಗಿಸುತ್ತವೆ. ಬಸ್ಸಿನ ಪ್ರಯಾಣದ ದರ ರೈಲ್ವೆದಕ್ಕಿಂತ ಸುಲಭ. ಹೋಗಿಬರುವ ಟಿಕೆಟ್ಟು ಕೊಂಡರೆ ಇನ್ನೂ ಕಮ್ಮಿ ಛಾರ್ಜು ಬೀಳುತ್ತದೆ. ಬಸ್ಸಿನ ಪ್ರಯಾಣದಲ್ಲಿ ಇನಾಮು ಕೊಡುವ ಪದ್ಧತಿಯಿಲ್ಲ. ದೂರದ ಪ್ರಯಾಣದ ಬಸ್ಸುಗಳು ಮಧ್ಯ ವಿಶ್ರಾಂತಿ, ಉಪಹಾರಕ್ಕೋಸ್ಕರವಾಗಿ ನಿಲ್ಲುವುವು.

## ಸ್ಥಳವಿದ್ಯಮಾನ

ಪತ್ರಿಕೆ ಮಾರುವ ಅಂಗಡಿ ಅಥವಾ ಡ್ರಗ್ ಸ್ಟೋರುಗಳಲ್ಲಿ ನಗರದ ನಕ್ಷೆಯೊಂದಿಗಿರುವ ಮಾಹಿತಿ ಪುಸ್ತಕ ಸಿಕ್ಕುವುದು. ಇದಕ್ಕಿಂತ ಹೊಸಬರಿಗೆ

ಟ್ಯಾಕ್ಸಿ ಕ್ಯಾಬ್ ಪ್ರಯೋಜನ ಬಹಳ. ಡ್ರೈವರನಿಗೆ ಸಾಮಾನ್ಯವಾಗಿ ಎಲ್ಲ ಸ್ಥಳಗಳು, ವಿದ್ಯಮಾನಗಳು ತಿಳಿದಿರುತ್ತದೆ. ಈ ಟ್ಯಾಕ್ಸಿ ಕ್ಯಾಬ್‌ಗಳಿಗೆ ಒಂದು ನಿರ್ದಿಷ್ಟ ದರವಿದ್ದು ಅವರ ಮೇಲೆ, ದೂರ ಹೋದಷ್ಟು, ಮಿಾಟರು ತೋರಿಸಿದಷ್ಟು, ಛಾರ್ಜು ಕೊಡಬೇಕು. ಒಂದು ಮೈಲಿಗೆ ೫೦ ಸೆಂಟ್ಸಗೆ ಜಾಸ್ತಿ ಆಗುವುದಿಲ್ಲ. ಇದರ ಮೇಲೆ ಟ್ಯಾಕ್ಸಿ ಡ್ರೈವರಿಗೆ ೧೦ ಸೆಂಟ್ಸ್ ಇನಾಮು ಕೊಡಬೇಕು. ಬೆಂಗಳೂರಿನ ಜಟ್ಕಾ ಸಾಹೇಬರು ನಾಲ್ಕಾರು ಜನರನ್ನು ತಮ್ಮ ಜಟ್ಕದಲ್ಲಿ ಕೂಡ್ರಿಸಿಕೊಂಡು, ಅವರವರ ಸ್ಥಳದಲ್ಲಿ ಬಿಡುವಂತೆ, ಈ ಕ್ಯಾಬ್ ಡ್ರೈವರುಗಳು ಇಲ್ಲಿಯೂ ಮಾಡುತ್ತಾರೆ. ಯುದ್ಧಾನಂತರ ಈ ತೆರನಾದ ವಾಡಿಕೆ ಬಂದಿದೆಯಂತೆ.

ಇದಲ್ಲದೆ ನಗರದ ನಾನಾ ಭಾಗಗಳಿಗೆ ಹೋಗಲು ಬೊಂಬಾಯಿಯಂತೆ ಟ್ರಾಮ್ ಕಾರುಗಳಿವೆ. ಇಲ್ಲಿ ಅದನ್ನು ಟ್ರಾಲಿ ಕಾರುಗಳೆನ್ನುತ್ತಾರೆ. ಪ್ರಯಾಣಿಕರು, ಮುಂಭಾಗದ ಬಾಗಿಲಲ್ಲಿ ಪ್ರವೇಶಿಸಿ, ಕೂತಿರುವ ಸ್ಥಳದಲ್ಲಿ ೫ ಅಥವಾ ೧೦ ಸೆಂಟ್ಸುಗಳನ್ನು ಹಾಕಬೇಕು. ಒಂದು ಟ್ರಾಲಿಯಿಂದ ಇನ್ನೊಂದಕ್ಕೆ ಹೋಗಲು ಬೇರೆ ಚೀಟಿಗಳನ್ನು ಕೊಡುತ್ತಾರೆ. ಬೇರೆ ಛಾರ್ಜು ಕೊಡಬೇಕಾದಲ್ಲಿ ಒಂದು ದಿನಕ್ಕಾಗಲಿ, ಅಥವಾ ವಾರದ ಟಿಕೆಟ್ಟುಗಳನ್ನು ಪಡೆದು ಎಷ್ಟು ಸಲ ಬೇಕಾದರೂ ಈ ಟ್ರಾಲಿಗಳಲ್ಲಿ ಪ್ರಯಾಣ ಮಾಡಬಹುದು.

ಈ ಆಧುನಿಕ ನಗರಗಳಲ್ಲಿ ಪ್ರಯಾಣಿಕರ ಅನುಕೂಲಕ್ಕಾಗಿ ದೀಪಗಳನ್ನು ಕೈದೀವಿಗೆಯನ್ನಾಗಿ ಮಾಡಿದ್ದಾರೆ. ಕೆಂಪು ಹಸರು ದೀಪಗಳು ತಮ್ಮಷ್ಟಕ್ಕೆ ತಾವೇ ಒಂದೊಂದು ನಿಮಿಷಕ್ಕೆ ಹತ್ತುತ್ತವೆ. ಹಸರು ದೀಪ ಬಂದಾಗ ಪ್ರಯಾಣಿಕರು ರಸ್ತೆಯನ್ನು ದಾಟಬೇಕು; ಕೆಂಪು ಬಂದಾಗ ಬಸ್ಸು, ಸೈಕಲ್ ಟ್ರಕ್‌ಗಳು ಹೋಗಲು ದಾರಿ ಬಿಡಬೇಕು. ಈ ನಿಯಮ ತಪ್ಪಿ ನಡೆದರೆ ಪೋಲೀಸಿನವನು ಕಾದೇ ಇರುತ್ತಾನೆ. ಈ ನಿಯಮವನ್ನು ನಮ್ಮವರು ತಿಳಿಯಬೇಕಾದುದು ಒಳ್ಳೆಯದು. ನ್ಯೂಯಾರ್ಕ್ ನಗರದಲ್ಲಿ ಈ ನಿಯಮ ಸ್ವಲ್ಪ ಬಿಗಿ; ಕಾರಣ, ಜನಸಂಖ್ಯೆ ಮತ್ತು ಪ್ರಯಾಣ ಬಹಳವಾದ್ದರಿಂದ.

## ವಿಮಾನ ಪ್ರಯಾಣ

ಇತ್ತೀಚೆಗೆ ವಿಮಾನ ಪ್ರಯಾಣ ಜಾರಿಗೆ ಬರುತ್ತಲಿದೆ. ಅನೇಕ ಮುಖ್ಯ ಪಟ್ಟಣಗಳಲ್ಲಿ ನಿಲ್ದಾಣ ಕೇಂದ್ರಗಳನ್ನು ನಿರ್ಮಿಸಿದ್ದಾರೆ. ಛಾರ್ಜು ಕಡಿಮೆ ಮಾಡುತ್ತಲಿದ್ದಾರೆ. ರೈಲ್ವೆ ಪ್ರಯಾಣಕ್ಕಿಂತ ಸ್ವಲ್ಪ ಜಾಸ್ತಿ ಕೊಡ ಬೇಕಾಗುತ್ತದೆ. ಸೆಂಟಲೂಯಿಸ್‌ನಿಂದ ನ್ಯೂಯಾರ್ಕಿಗೆ ರೈಲಿನಲ್ಲಿ ೨೬ ಘಂಟೆ ಗಳ ಪ್ರಯಾಣ, ೩೨ ಡಾಲರು; ವಿಮಾನದಲ್ಲಿ ೫೪ ಡಾಲರು, ಛಾರ್ಜು. ೬ ಘಂಟೆಗಳ ಪ್ರಯಾಣ: ದೂರ ೧೫೦೦ ಮೈಲು. ಇತ್ತೀಚೆಗೆ ವಿಮಾನ ಅನಾ ಹುತಗಳು ಜಾಸ್ತಿ ಆಗುತ್ತಲಿದ್ದರೂ, ಪ್ರಯಾಣಿಕರೇನೂ ಕಡಿಮೆಯಾಗಿಲ್ಲ. ಹೊಸಬರು ಒಂದು ಸಲ ಈ ವಿಮಾನ ಪ್ರಯಾಣದ ವೈಖರಿಯನ್ನು ರುಚಿ ನೋಡಬೇಕು; ಧೈರ್ಯವಿರಬೇಕು ಅಷ್ಟೆ!

ಅಮೇರಿಕದ ಪ್ರಯಾಣ ಸೌಕರ್ಯದ ಸವಿಯನ್ನನುಭವಿಸಿ ೨|| ದಿನ ಗಳ ಪ್ರವಾಸ ಮಾಡಿ ನ್ಯೂಯಾರ್ಕ್ ಸೆಂಟ್ರೆಲ್ ಸ್ಟೇಷನ್ನಿಗೆ ಬಂದಿಳಿದೆನು. ನನ್ನ ಜೊತೆಯಲ್ಲಿ ಇನ್ನೂ ಅನೇಕ ಭಾರತೀಯ ವಿದ್ಯಾರ್ಥಿಗಳಿದ್ದರು.

ಪ್ರೊ|| ಎಂ. ಎಸ್. ಸುಂದರಂರವರು ಮತ್ತು ಅವರ ಸಹಾಯಕ ರಾದ **ಶ್ರೀ ಕೆ. ಆರ್. ಪೂರ್ಣ**ರವರೂ ನಮ್ಮನ್ನು ಸ್ವಾಗತಿಸಿದರು. ಶ್ರೀ ಪೂರ್ಣರವರನ್ನು ನೋಡಿದ ಕೂಡಲೆ ನನಗೆ ಆನಂದವಾಯಿತು. ಅವರು ಮಹಾರಾಜಾ ಕಾಲೇಜಿನಲ್ಲಿ ನನಗೆ ರಾಜಕೀಯ ಶಾಸ್ತ್ರದ ಗುರುಗಳಾಗಿ ದ್ದರು. ಅವರು ನನ್ನನ್ನು ತಕ್ಷಣ ಜ್ಞಾಪಿಸಿಕೊಂಡು, ಹಸ್ತಲಾಘವವನ್ನಿತ್ತು ಕ್ಷೇಮಸಮಾಚಾರ ವಿಚಾರಿಸಿಕೊಂಡರು. ನನಗೆ ಬೇಕಾದ ಅನುಕೂಲಗ ಳನ್ನು ಮಾಡಿಕೊಟ್ಟರು.

ಬರ್ಕ್ಲೆಯಲ್ಲಿದ್ದಂತೆ ನ್ಯೂಯಾರ್ಕಿನಲ್ಲಿಯೂ ಒಂದು ಅಂತರ ರಾಷ್ಟ್ರೀಯ ವಿದ್ಯಾರ್ಥಿ ಮಂದಿರವಿದೆ. ಅಲ್ಲಿ ನಮಗೆಲ್ಲರಿಗೂ ವಸತಿ ಏರ್ಪಾಡು ಮಾಡಿದ್ದರು. ಇಲ್ಲಿಯೂ ಒಂದು ಸತ್ಕಾರ ಸಭೆ ನಡೆದು ಪ್ರೊ|| ಸುಂದರಂರವರು ನಮಗೆ ಹಿತವಚನಗಳನ್ನಿತ್ತರು.

ನಾನು ನ್ಯೂಯಾರ್ಕಿನಿಂದ ೩೦೦ ಮೈಲಿ ದೂರವಿರುವ ಸಿರಾಕ್ಯೂಸ್ ವಿಶ್ವವಿದ್ಯಾನಿಲಯಕ್ಕೆ ಹೋಗಬೇಕಾಗಿತ್ತು. ಕಾಲೇಜಿಗೆ ಸೇರಿದ ಮೇಲೆ ಪುನಃ ನ್ಯೂಯಾರ್ಕಿಗೆ ಬರಲು ಜಾಗ್ರತೆ ಆಗುವುದಿಲ್ಲವೆಂದು ತಿಳಿದು ಈಗಲೇ ನಾಲ್ಕಾರು ದಿನವಿದ್ದು ನ್ಯೂಯಾರ್ಕ್ ನಗರವನ್ನು ನೋಡಿಕೊಂಡು ಹೋಗೋಣವೆಂದು ತೀರ್ಮಾನಿಸಿದೆನು.

---

# ನ್ಯೂಯಾರ್ಕಿನಲ್ಲಿ

**ನ್ಯೂಯಾರ್ಕಿನಲ್ಲಿ!** ಪ್ರಪಂಚದ ಅದ್ಭುತ ನಗರವಾದ ಈ ನ್ಯೂಯಾರ್ಕಿನಲ್ಲಿ ಏನಿಲ್ಲ! ನ್ಯೂಯಾರ್ಕ್ ನಗರದ ಜೀವನ ಮನುಷ್ಯನ ಮೇಲೆ ಬೇಕಾದಷ್ಟು ಪರಿಣಾಮವನ್ನುಂಟುಮಾಡುತ್ತದೆ. ಘಳಿಗೆ ಘಳಿಗೆಗೂ ಬದಲಾವಣೆ ಈ ನಗರದಲ್ಲಿ. ಮಂಜು ಮುಸುಕಿ ಥಂಡಿಯಲ್ಲಿ ಕೊರಗುವ ನ್ಯೂಯಾರ್ಕಿಗೂ, ಬಿಸಲು ಬಂದು ಸೂರ್ಯನ ಕಿರಣಗಳಿಗೆ ಮೈಯೊಡ್ಡಿ ಬತ್ತಲೆಯಾಗಿರುವ ನ್ಯೂಯಾರ್ಕಿಗೂ ಎಷ್ಟೋ ವ್ಯತ್ಯಾಸವಿದೆ. ವಸಂತ ರೋಗದಿಂದ ಪೀಡಿತರಾದ ನ್ಯೂಯಾರ್ಕಿನ ಜನ **ಹಡ್ಸನ್‌ನದೀ** ತೀರದಲ್ಲೋ, ಫಾರೆಸ್ಟ್ ಪಾರ್ಕಿನಲ್ಲೋ ಲೀಲಾಜಾಲವಾಗಿ ಮುತ್ತುತ್ತಿರುವುದನ್ನು ನೋಡಬಹುದು ನ್ಯೂಯಾರ್ಕ್ ನಗರದಲ್ಲಿ.

ಪ್ರಪಂಚದಲ್ಲೆಲ್ಲ ಇಂದು ಅತಿ ದೊಡ್ಡದಾದ ಪಟ್ಟಣ ನ್ಯೂಯಾರ್ಕ್. ಅಂದಿನ ಲಂಡನ್ ಇಂದಿನ ನ್ಯೂಯಾರ್ಕ್. ಹೌದು ಎಂದೆನೆ, ಇನ್ನೂ ಹೆಚ್ಚು. ಈ ನಗರದ ಜನಸಂಖ್ಯೆ ಸುಮಾರು ೮೦ ಲಕ್ಷ. ಅಬ್ಬಾ, ನಮ್ಮ ಮೈಸೂರು ಸಂಸ್ಥಾನವೇ ಈ ನಗರವೊಂದರಲ್ಲಿದೆ. ಇದನ್ನು ಐದು ಭಾಗಗಳನ್ನಾಗಿ ವಿಂಗಡಿಸಿದ್ದಾರೆ **ಮ್ಯಾನ್ ಹಟ್ಟನ್, ಬ್ರಾಂಕ್ಸ್, ಬ್ರುಕ್‌ಲಿನ್, ಕ್ವೀನ್ಸ್, ರಿಚ್‌ಮಂಡ್** ಎಂದು. ಇದರಲ್ಲಿ ಮ್ಯಾನ್ ಹಟ್ಟನ್ ಮುಖ್ಯವಾದ ಭಾಗ. ಇದೇ ನ್ಯೂಯಾರ್ಕ್. ಉಳಿದವು ನ್ಯೂಯಾರ್ಕಿನ ವಸಾಹತುಗಳು.

## ನ್ಯೂಯಾರ್ಕಿನಲ್ಲಿ

ಪ್ರತಿದಿನವೂ ಹೊರಗಿನಿಂದ ೧೫೦೦೦೦ ಮಂದಿ ನ್ಯೂಯಾರ್ಕಿಗೆ ಬರುತ್ತಾರೆ. ರಸ್ತೆಯ ಕೆಳಗಡೆ ಸುರಂಗ ಮಾರ್ಗದಲ್ಲಿ ಓಡಾಡುವ ರೈಲುಗಳಲ್ಲಿ ಕೇವಲ ಐದು ಸೆಂಟಿಗೆ (ಅಂದರೆ ಎರಡೂವರಾಣೆಗೆ) ನ್ಯೂಯಾರ್ಕ್ ನಗರದಲ್ಲಿ ಎಲ್ಲಿ ಬೇಕಾದರೆ ಅಲ್ಲಿಗೆ ಹೋಗಬಹುದು. ದಿನಂಪ್ರತಿ ಸುಮಾರು ೨೦ ಲಕ್ಷ ಜನ ಓಡಾಡುತ್ತಾರೆ ಈ ಸಬ್‌ವೇಸ್‌ಗಳಲ್ಲಿ. ೪೦೦ ಅಡಿಗಳಿಗಿಂತ ಎತ್ತರವಾದ ೪೦ ಕಟ್ಟಡಗಳಿವೆ. ಪ್ರಪಂಚದಲ್ಲೆಲ್ಲ ಎತ್ತರವಾದ ೧೦೪ ಮಹಡಿಗಳನ್ನುಳ್ಳ **ಎಂಪೈರ್ ಸ್ಟೇಟ್ ಬಿಲ್ಡಿಂಗ್** ೧೨೫೦ ಅಡಿ ಎತ್ತರವಾದದ್ದು. ಮನೆ ಮತ್ತು ಕಚೇರಿಗಳಲ್ಲಿ ಕೂಡಿ ನ್ಯೂಯಾರ್ಕಿನ ಜನ ೨ ಕೋಟಿ ಗ್ಯಾಲನ್ ನೀರನ್ನುಪಯೋಗಿಸುತ್ತಾರೆ.

ಪಾತಾಳ ಲೋಕದ ಮಾಯಾಬಜಾರವಿಲ್ಲಿದೆ. ಉದ್ಯಾನವನಗಳು, ಐದನೆಯ ರಸ್ತೆಯ ಶ್ರೀಮಂತರ ಅಂಗಡಿಗಳು, ಭವನಗಳು, ಹೋಟೆಲುಗಳು, ಸಿನಿಮಾಗಳು, ಹಡ್ಸನ್ ನದಿಯ ತೀರ, ಪುಸ್ತಕ ಭಂಡಾರ, ವಸ್ತು ಸಂಗ್ರಹಾಲಯ, ವಸ್ತು ಪ್ರದರ್ಶನಾಲಯ, ಕಾರುಗಳು, ಬಸ್ಸುಗಳು, ವಿಮಾನಗಳು, ಎಲ್ಲ ಜನಾಂಗಗಳ, ಎಲ್ಲ ದೇಶಗಳ ಜನರು, ಜಾತಿ ಮತ ಕೋಮುಗಳ ತಂಟೆಯಿಲ್ಲದೆ, ಐಶ್ವರ್ಯ, ಗೌರವ ಸಂಪಾದಿಸಬೇಕೆಂದು ದುಡಿಯುತ್ತಿರುವ ಜನ— ಇದೆಲ್ಲ ಈ ಹೊಸ ಪ್ರಪಂಚದ, ಅಮೇರಿಕದ ನ್ಯೂಯಾರ್ಕಿನ ವೈಶಿಷ್ಟ್ಯ.

## ಭಾರತೀಯ ವಿದ್ಯಾರ್ಥಿಗಳು

ಈ ನಗರದಲ್ಲಿ ಸುಮಾರು ೧೫೦ ಜನ ಭಾರತೀಯ ವಿದ್ಯಾರ್ಥಿಗಳಿದ್ದಾರೆ. ಸರಕಾರದ ಅತಿಥಿಗಳಾಗಿರುವ ವಿದ್ಯಾರ್ಥಿಗಳೇ ಹೆಚ್ಚು.

ಮೂರು ಭಾರತೀಯ ಫಲಾಹಾರ ಮಂದಿರಗಳೂ ಇಲ್ಲಿವೆ. ಅನ್ನ, ಸಾರು, ಹುಳಿ, ಪಲ್ಯ, ಬುರುಬುರಿ, ಹಪ್ಪಳ, ಚಟ್ನಿ, ಕೋಸಂಬರಿ, ಮೊಸರು, ಚಪಾತಿ ಎಲ್ಲವೂ ಸಿಕ್ಕುತ್ತದೆ. ಭಾರತದಿಂದ ಬಂದವರು ಮೊದಲು ಇಲ್ಲಿಗೆ ಬರುತ್ತಾರೆ. ನ್ಯೂಯಾರ್ಕಿನಲ್ಲಿ ಭಾರತೀಯರನ್ನೆಲ್ಲ ಈ ಫಲಾಹಾರ ಮಂದಿರಗಳಲ್ಲಿ ಕಾಣಬಹುದು.

**‘ಇಂಡಿಯಾ ಲೀಗ್ ಆಫ್ ಅಮೇರಿಕ’ ‘ಒನ್ ವರ್ಲ್ಡ್ ಅಸೋಸಿಯೇಷನ್,’ ‘ಈಸ್ಟ್ ಅಂಡ್ ವೆಸ್ಟ್ ಅಸೋಸಿಯೇಷನ್’, ‘ಹಿಂದೂಸ್ಥಾನ್ ವಿದ್ಯಾರ್ಥಿ ಸಂಘ’** ಎಂಬ ಸಂಸ್ಥೆಗಳು ಭಾರತದ ಪರವಾಗಿ ಇಲ್ಲಿ ಕೆಲಸ ಮಾಡುತ್ತಿವೆ.

## ಪುರಭವನ

ಪ್ರಪಂಚದ ಅತಿ ದೊಡ್ಡ ನಗರವಾದ ನ್ಯೂಯಾರ್ಕಿನ ಆಡಳಿತ ನಡೆಯುವುದು ಇಲ್ಲಿ. ಆಗಿನ ಮೇಯರಾದ **ಶ್ರೀ ವಿಲಿಯಂ ಒಡ್ವಾಯರರು** ೮,೬೭೭೦೦೦ ಜನರ ಆರೋಗ್ಯ, ಯೋಗಕ್ಷೇಮ ಪರಿಪಾಲಕರಾಗಿದ್ದರು.

ಈ ನಗರದ ಅಸ್ತಿಭಾರವಾದದ್ದು ೧೮೦೦ರಲ್ಲಿ. ಈ ಭವನದ ಗವರ್ನರರ ಕೊಠಡಿಯಲ್ಲಿ ಅಧ್ಯಕ್ಷರಾಗಿದ್ದ **ವಾಷಿಂಗ್‌ಟನ್** ಮತ್ತು **ಹ್ಯಾಮಿಲ್ಟನ್**ರವರ ಭಾವಚಿತ್ರಗಳನ್ನಿಡಲಾಗಿದೆ. ಇದೇ ಕೊಠಡಿಯಲ್ಲಿಯೇ ನ್ಯೂಯಾರ್ಕಿನ ಮೇಯರರು ಭಾರತದ ರಾಯಭಾರಿಗಳಾದ ಶ್ರೀ **ಅಸಫ್ ಅಲಿ**ಯವರನ್ನು ಸ್ವಾಗತಿಸಿದ್ದು. ಮೊದಲನೆಯ ಅಧ್ಯಕ್ಷ **ಜಾರ್ಜ್‌ವಾಷಿಂಗ್‌ಟನ್** ಗದ್ದುಗೆಗೇರಿದ ಕುರ್ಚಿಯನ್ನೂ, ಆತ ಕಾಂಗ್ರೆಸ್ಸಿಗೆ ಕಳುಹಿಸಲು ಸಂದೇಶ ಬರೆದ ಮೇಜುಗಳನ್ನೂ ಈಗಲೂ ನೋಡಬಹುದು. ೧೭೭೬ ಜುಲೈ ೪ರಲ್ಲಿ ಅಮೇರಿಕದ ಸೈನ್ಯಕ್ಕೆ, ಜನಕ್ಕೆ, ‘ಸ್ವಾತಂತ್ರ್ಯ ಪ್ರತಿಜ್ಞೆ’ಯನ್ನೋದಿದ್ದು ಈ ಸ್ಥಳದಿಂದಲೇ. ೧೮೬೫ರಲ್ಲಿ **ಅಬ್ರಹಾಂ ಲಿಂಕನ್ನರ ಕೊಲೆ**ಯಾದನಂತರ ರಾಜಮರ್ಯಾದೆಗಳೊಡನೆ ಅವರ ದೇಹವನ್ನು ಈ ಕೊಠಡಿಯಲ್ಲಿರಿಸಲಾಗಿತ್ತು.

## ಬ್ರಾಡ್‌ವೇ

ನ್ಯೂಯಾರ್ಕಿನ ಬೀದಿಗಳಲ್ಲೆಲ್ಲಾ ಬಹು ದೊಡ್ಡದಾದ ಬೀದಿ ಬ್ರಾಡ್‌ವೇ. ಹೆಸರೇ ಹೇಳುವಂತೆ ಇದು ತುಂಬಾ ಅಗಲವಾಗಿದೆ. ಈ ಬೀದಿ ಪ್ರಪಂಚದಲ್ಲೆಲ್ಲಾ ಹೆಸರುವಾಸಿಯಾಗಿದೆ. ಈ ರಸ್ತೆಯಲ್ಲಿಯೇ ಸುಂದರವಾದ **ಬೌಲಿಂಗ್ ಗ್ರೀನ್** ಉದ್ಯಾನವನವೂ ಮತ್ತು **ಸೆಂಟ್ರಲ್ ಪಾರ್ಕ್** ಎಂಬ ಉದ್ಯಾನವನವೂ ಇವೆ.

## ಚೈನಾ ಟೌನ್

ನ್ಯೂಯಾರ್ಕಿನ ಮೂರನೆ ಅವೆನ್ಯೂ ಭಾಗದಲ್ಲಿ **ಚೈನಾ ಟೌನ್** ಎಂಬ ಸುಂದರವಾದ ಸ್ಥಳವಿದೆ. ಇಲ್ಲಿ ಜನವಸತಿ ಜಾಸ್ತಿ, ಚೀನಿಯರ ಸಂಸ್ಕೃತಿ ಕುರುಹು ಇಲ್ಲಿ ಕಾಣುತ್ತದೆ. **ಚಾಪ್ಸ್ಯೂಯಿ** ಎಂಬ ಉಪಾಹಾರ ಮಂದಿರಗಳಲ್ಲಿ ಅಮೇರಿಕನ್ನರು ಚೈನಾದ ರುಚಿರುಚಿಯಾದ ಆಹಾರವನ್ನು ಇಲ್ಲಿ ತಿನ್ನುವುದು ನೋಡಬಹುದು.

## ಹ್ಯಾರ್ ಲೆಮ್

ಇದು ನೀಗ್ರೋಗಳು ವಾಸಿಸುವ ಸ್ಥಳ. ಇಲ್ಲಿ ಮೂರು ಲಕ್ಷ ಜನ ಬರೀ ನೀಗ್ರೋಗಳೇ ವಾಸ ಮಾಡುತ್ತಿದ್ದಾರೆ. ನಮ್ಮ ದೇಶದಲ್ಲಿರುವ ಹರಿಜನರ ಕೇರಿಗಳಂತೆ ಇಲ್ಲಿಯೂ ಬಿಳಿಯರಿಂದ ದೂರವಾಗಿ ನೀಗ್ರೋಗಳ ಜನವಸತಿ ಇದೆ. ನೀಗ್ರೋಗಳಿಗೆ ಪ್ರತ್ಯೇಕವಾದ ಶಾಲೆಗಳು, ಕಾಲೇಜುಗಳು ಉಪಹಾರ ಗೃಹಗಳು ಇವೆ.

**ಟೈಮ್ಸ್ ಸ್ಕ್ವೇರ್** ನ್ಯೂಯಾರ್ಕ್ ನಗರದ ಭವ್ಯವಾದ ಸುಂದರವಾದ ಚೌಕ. ರಂಗಸ್ಥಳಗಳು ಇರುವುದು ಇಲ್ಲಿಯೇ. ಇಪ್ಪತ್ತು ಲಕ್ಷ ಜನರು ಇಲ್ಲಿ ವಿಹಾರಕ್ಕಾಗಿ ನೆರೆಯುತ್ತಾರೆ. ಇಲ್ಲಿರುವಷ್ಟು ಚಲನಚಿತ್ರ ಮಂದಿರಗಳು, ನರ್ತನ ಮಂದಿರಗಳು, ರಾತ್ರಿ–ರಾಣಿಯರ ಸಂಘಗಳು, ಉಪಹಾರ ಮಂದಿರಗಳು, ಅಂಗಡಿಗಳು ಪ್ರಪಂಚದ ಇನ್ನಾವ ಕಡೆಯೂ ಇಲ್ಲ.

## ರಾಕ್ ಫೆಲರ್ ಕೇಂದ್ರ

ಟೈಮ್ಸ್ ಸ್ಕ್ವೇರಿಗೆ ಹತ್ತಿರದಲ್ಲಿ ಹದಿನಾಲ್ಕು ಆಕಾಶ ಗೋಪುರ ಕಟ್ಟಡಗಳಿಂದೊಡಗೂಡಿದ **ರಾಕ್‌ಫೆಲರ್ ಕೇಂದ್ರವು** ನಿರ್ಮಿತವಾಗಿದೆ. ಇವುಗಳಲ್ಲಿ ಆರ್. ಸಿ. ಎ. ಕಟ್ಟಡವು ಎಪ್ಪತ್ತು ಮಹಡಿಗಳನ್ನುಳ್ಳದ್ದಾಗಿದೆ.

ಈ ಕಟ್ಟಡಗಳಲ್ಲಿ **"ರೇಡಿಯೋ ಸಿಟಿ ಮ್ಯೂಸಿಕ್ ಹಾಲ್"** ಎಂಬ ನಾಟಕ ಮಂದಿರವು ಆರು ಸಾವಿರದಿನ್ನೂರು ಜನಗಳು ಹಿಡಿಸುವಷ್ಟು ದೊಡ್ಡ

ದಾಗಿದೆ. ಅಪೂರ್ವವಾದ **ನ್ಯೂಯಾರ್ಕ್ ಮ್ಯೂಸಿಯಂ ಆಫ್ ಸೈನ್ಸ್ ಅಂಡ್ ಇಂಡಸ್ಟ್ರೀಸ್"** ಎಂಬ ವಸ್ತು ಪ್ರದರ್ಶನಾಲಯ ಇದೆ.

## ವಿದ್ಯಾ ಕೇಂದ್ರಗಳು

ನ್ಯೂಯಾರ್ಕಿನಲ್ಲಿ ವಿಹಾರ ಕೇಂದ್ರಗಳಿರುವಷ್ಟೇ ವಿದ್ಯಾ ಕೇಂದ್ರಗಳಿವೆ. ನ್ಯೂಯಾರ್ಕ್ ಒಂದರಲ್ಲೇ ಸುಮಾರು ಐದು ಲಕ್ಷ ವಿದ್ಯಾರ್ಥಿಗಳಿದ್ದಾರೆ. ವಿದ್ಯಾಕೇಂದ್ರಗಳಲ್ಲಿ **ಕೊಲಂಬಿಯಾ ವಿಶ್ವವಿದ್ಯಾನಿಲಯ, ನ್ಯೂಯಾರ್ಕ್ ವಿಶ್ವವಿದ್ಯಾನಿಲಯ, ಫೋರ್ಡ್ ಹ್ಯಾಂವ್ ವಿಶ್ವವಿದ್ಯಾನಿಲಯ, ಲಾಂಗ್ ಐಲೆಂಡ್ ವಿಶ್ವವಿದ್ಯಾನಿಲಯ, ಬ್ರುಕ್‌ಲಿನ್ ಕಾಲೇಜ್, ಹಂಟರ್ ಕಾಲೇಜ್, ಮ್ಯೂನ್ ಹಟ್ಟನ್ ಕಾಲೇಜ್, ಬರ್ನಾಡ್ ಕಾಲೇಜ್ ಮತ್ತು ಕ್ವೀನ್ಸ್ ಕಾಲೇಜ್** ಇವೇ ಬಹು ಮುಖ್ಯವಾದುವು. ನ್ಯೂಯಾರ್ಕ್ ನಗರವೊಂದರಲ್ಲಿ ಸುಮಾರು ಒಂದು ಸಾವಿರ ಶಾಲೆಗಳಿವೆ.

ಇವುಗಳಲ್ಲದೆ ನ್ಯೂಯಾರ್ಕಿನಲ್ಲಿ ನೋಡತಕ್ಕಂಥಾ ಸ್ಥಳಗಳು ಬಹಳ ಇವೆ. **ಫ್ರಾನ್ಸಿಸ್ ಟ್ಯಾವೆರನ್, ವಾಲ್ ಸ್ಟ್ರೀಟ್, ಬವರಿ, ಗ್ರೀನ್ ವಿಚ್ ವಿಲೇಜ್, ನ್ಯೂಯಾರ್ಕ್ ಲೈಬ್ರರಿ,** ಅನೇಕ ವಸ್ತು ಪ್ರದರ್ಶನಾಲಯಗಳು, ಸೇತುವೆಗಳು ಮತ್ತು ಸುರಂಗಗಳು, ಚರ್ಚುಗಳು, ಸುಪ್ರಸಿದ್ಧ ವಾಲ್‌ಡಾರ್ಫ್ ಆಸ್ಟೋರಿಯ ಎಂಬ ಉಪಹಾರ ಮಂದಿರ, ಕೋನಿ ಐಲೆಂಡ್ ಎಂಬ ಸಮುದ್ರದ ದಂಡೆ, ಇವುಗಳನ್ನು ಅಗತ್ಯವಾಗಿ ನೋಡಬೇಕು.

## ವಾಲ್ಡಾರ್ಫ್ ಆಸ್ಟೋರಿಯ

ನ್ಯೂಯಾರ್ಕ್ ನಗರದ ಬಹು ದೊಡ್ಡದಾದ ಉಪಹಾರ ಮಂದಿರದ ವರ್ಣನೆಯನ್ನು ಮಾಡದ ಹೊರತು ನ್ಯೂಯಾರ್ಕ್ ನಗರದ ಚರಿತ್ರೆಯು ಸಂಪೂರ್ಣವಾಗುವುದಿಲ್ಲ.

ವಾಲ್ಡಾರ್ಫ್ ಆಸ್ಟೋರಿಯ ನ್ಯೂಯಾರ್ಕ್ ನಗರದ ಭೋಗ ಸಾಮ್ರಾಜ್ಯ-ಭೂ ವೈಕುಂಠ! ನ್ಯೂಯಾರ್ಕ್ ನಗರಕ್ಕೆ ಭೂಷಣವಾಗಿದೆ ಈ

ಹೋಟೇಲ್–ವಾಲ್ಡಾರ್ಫ್ ಅಸ್ಟೋರಿಯ! ಇದೊಂದು ಕುಬೇರರ ವಾಸ ಗೃಹ, ವಿಲಾಸ ಗೃಹ. ಪ್ರಪಂಚದ ಪ್ರಥಮ ಶ್ರೇಣಿಯ ಶ್ರೀಮಂತರು (Fifth Avenue Shoppers) ಅರ್ಥಾತ್ ೫ನೆಯ ರಸ್ತೆಯ ವ್ಯಾಪಾರಿಗಳು ಇಲ್ಲಿ ಉಳಿದುಕೊಳ್ಳುತಕ್ಕವರು. ಇತ್ತೀಚೆಗೆ ಸಂಯುಕ್ತರಾಷ್ಟ್ರ ಸಂಘದ ಪ್ರತಿನಿಧಿಗಳು ಇಲ್ಲಿಯೇ ಉಳಿದುಕೊಳ್ಳುತ್ತಾರೆ. ಬರೋಡದ ಮಹಾರಾಜರು ಬಂದಾಗ ಸಪತ್ನೀಕರಾಗಿ ಇಲ್ಲೇ ಉಳಿದಿದ್ದರು. ಬ್ರಿಟನ್ನಿನ **"ಪ್ರೇಮ ಭೂಪತಿ" ಡ್ಯೂಕ್ ಆಫ್ ವಿಂಡ್ಸರರು** ಇಲ್ಲಿಯೇ ಬಿಡಾರ ಮಾಡಿದ್ದರು.

ಪ್ರಪಂಚದಲ್ಲೆಲ್ಲಾ ಅತ್ಯಂತ ದೊಡ್ಡದಾದ ಈ ಭೋಗ ಮಂದಿರವು ೧೯೩೧ರಲ್ಲಿ ಪ್ರಾರಂಭವಾಯಿತು! ಇದರ ವಿಸ್ತಾರ ೮೧,೩೩೭ ಚ. ಅಡಿಗಳಷ್ಟು! ಇದು ಮ್ಯಾನ್ ಹಟನ್ ದ್ವೀಪದ ಪಾರ್ಕ್ ಮತ್ತು ಲೆಕ್ಸಿಂಗ್ಟನ್ ರಾಜಮಾರ್ಗಗಳ ನಡುವೆ—ಎಂದರೆ—ನ್ಯೂಯಾರ್ಕಿನ ೪೯ ಮತ್ತು ೫೦ನೆಯ ಬೀದಿಗಳ ಮಧ್ಯದಲ್ಲಿದೆ. ಇದಕ್ಕೆ ಸುತ್ತಲೂ ವಿಶಾಲವಾದ ಜಗುಲಿಗಳು ಇದ್ದು ಗಾಳಿ ಬೆಳಕು ನಿರರ್ಗಳವಾಗಿ ಬರುತ್ತವೆ. ನಗರದಲ್ಲಿ ಇದು ಅಮೇರಿಕದ ನಗ್ನಶಿಲ್ಪಕಲೆಯ ಮೂರ್ತಿಮತ್ ಸ್ವರೂಪವಾಗಿ ಎದ್ದು ಕಾಣುತ್ತದೆ!

ಈ ಕಟ್ಟಡದ ನಿರ್ಮಾಣಕ್ಕೆ ಒಟ್ಟು ೨೭೦೦೦ ಟನ್ ಉಕ್ಕನ್ನು ಉಪಯೋಗಿಸಿದ್ದಾರೆ. ಕೆಳಗಿನ ತಳಹದಿಗೆ ೨೦೦೦ ಟನ್ ಮತ್ತು ಮೇಲಿನ ಮುಖ್ಯ ಕಟ್ಟಡಕ್ಕೆ ೨೫೦೦೦ ಟನ್ ಹೀಗೆ ಉಪಯೋಗಿಸಿದ್ದಾರೆ. ಇದಲ್ಲದೆ ೮೦,೦೦೦ ಟನ್ ಸುಣ್ಣದ ಹರಳು, ೩೦೦೦,೦೦೦ ಇಟ್ಟಿಗೆಗಳು ೮೦೦೦,೦೦೦ ವಜ್ರದ ಕಲ್ಲುಗಳು! ಈ ಕಟ್ಟಡದ ಅಸ್ತಿವಾರಕ್ಕೆ ತಾಮ್ರ, ಕಂಚು, ಅಲ್ಲಲ್ಲಿ ಉಪಯೋಗಿಸಲ್ಪಟ್ಟಿವೆ. **ನೈನ್ ಸಾಮುಂಡ್ ಸನ್** ತಯಾರಿಸಿದ ಕಂಚಿನ ವಿಗ್ರಹವೊಂದು, ಪಾರ್ಕ್ ಅವೆನ್ಯೂ ಮುಂಭಾಗದ ಬಾಗಿಲ ಮೇಲಿದೆ. ಒಳಗಡೆಯ ಕಟ್ಟಡದ ಅಂದ ಸಂಗಮವರಿ ಕಲ್ಲಿನಿಂದ ಹೆಚ್ಚಾಗಿದೆ. ಆಧುನಿಕ ರೀತಿಯಲ್ಲಿ ಎಲ್ಲ ಕೊಠಡಿಗಳನ್ನು ಶೃಂಗರಿಸಿದ್ದಾರೆ. **ಶ್ರೀ ಸ್ಕಲ್ಪ** ಮತ್ತು **ವೀವರ್** ಎಂಬು

ವರೇ ಈ ಕಟ್ಟಡದ ಚಿತ್ರವನ್ನು ತಯಾರಿಸಿದ ಶಿಲ್ಪಿಗಳು. **ಥಾಮ್ಸನ್-ಸ್ಟಾರೆಟ್** ಕಂಪೆನಿಯರು ಈ ಕಟ್ಟಡವನ್ನು ಕಟ್ಟಿದರು.

ಈ ಉಪಹಾರ ಗೃಹಕ್ಕೆ ಮೂರು ದಿಕ್ಕಿನಿಂದ ಬರಲು ಬಾಗಿಲುಗಳಿವೆ. ಆ ದಾರಿಗಳು ಮಹಡಿ ಹತ್ತುವ (Elèvator) ಏರುದೊಟ್ಟಲಿಗೆ ಕರೆದೊಯ್ಯುವುವು. ದಾರಿಯಲ್ಲಿ ಅಂಗಡಿಗಳು ಕುಳಿತುಕೊಳ್ಳುವ ಸೋಫಾಗಳು, ಪೋಸ್ಟಾಫೀಸು, ಆಸ್ಪತ್ರೆ, ಟೆಲಿಗ್ರಾಫ್ ಆಫೀಸು, ವಿಮಾನ, ರೈಲು, ಬಸ್ಸು ಟಿಕೆಟ್ಟು ಕೊಡುವ ಕಚೇರಿಗಳು ಹತ್ತುತ್ತವೆ. ಇವೆಲ್ಲವೂ ಹೊಟೇಲಿನ ಒಳಗಡೆಯೇ! ಮುಖ್ಯವಾದ ಸಭಾಗೃಹದಲ್ಲಿ, **ಕ್ಲಿಯೋಪಾತ್ರ, ಸಿನೇಕಾ,** ಮತ್ತು **ಪೊಂಪೆಯ** ವಿಗ್ರಹಗಳು ವಿರಾಜಿಸಿವೆ. ಈ ಸಭಾಗೃಹದಲ್ಲಿ ಹಾಸಿದ ಜಮಖಾನ ಫ್ರಾನ್ಸ್ ದೇಶದಿಂದ ಬಂದಿದೆ. ೮೨ ಅಡಿ ಉದ್ದ ೨೨ ಅಡಿ ಅಗಲವಿರುವ ಸಭಾಗೃಹಕ್ಕೆ ೪೯ ಅಡಿ ಅಗಲ ೬೯ ಅಡಿ ಉದ್ದವಿರುವ ಜಮಖಾನ ತಯಾರಿಸಲು ಒಂದು ವರ್ಷ ಬೇಕಾಯಿತಂತೆ. ಜಮಖಾನೆಯಲ್ಲಿ ಹೆಣೆದಿರುವ ಶಿಲ್ಪಕಲೆ ಸ್ಕಾಂಡಿನೇವಿಯ ದೇಶದ ರೀತಿಯದು. ಈ ಜಮಖಾನ ತಯಾರಿಸಿದ ಶಿಲ್ಪಿಗಳ ಗುಂಪು ಫ್ರಾನ್ಸಿನ ನಾಲ್ಕನೆಯ ಹೆನ್ರಿಯ ಕಾಲದಿಂದ ಬಂದವರು. ಆದ್ದರಿಂದ ಅದಕ್ಕೆ ಹೆಚ್ಚು ಪ್ರಾಮುಖ್ಯತೆ. ಇಂತಹ ಜಮಖಾನ ತಯಾರಿಸಲು ಫ್ರಾನ್ಸಿನ ಇನ್ನೊಬ್ಬ ರಾಜ **೧೨ನೆಯ ಲೂಯಿ** ಉತ್ತೇಜನವಿತ್ತು ಒಮ್ಮೆಲೆ ೯೦ ಜಮಖಾನಗಳನ್ನು ತನ್ನ ಅರಮನೆಗೆ ತರಿಸಿಕೊಂಡ.

ಈ ಉಪಹಾರ ಗೃಹದಲ್ಲಿ ೨೦೦೦ ಸಂಸಾರಗಳಿರಲು ಅವಕಾಶವಿದೆ. ಸ್ವಂತ ಮನೆಯಲ್ಲಿ ವಾಸಿಸುವ ರೀತಿಯಲ್ಲಿ ವಾತಾವರಣವನ್ನು ಕಲ್ಪಿಸಿರುವರಾದರೂ ಹೊಟೇಲು, ಹೊಟೇಲೇ!

ಸ್ವಂತವಾಗಿ ಹೊಟೇಲಿಗೆ ಸೇರಿದ ರೇಡಿಯೋ ಯಂತ್ರವಿದೆ. ಲಂಡನ್, ಪ್ಯಾರಿಸ್, ಬರ್ಲಿನ್, ಮಾಸ್ಕೋ, ಟೋಕಿಯೋ, ಆಸ್ಟ್ರೇಲಿಯಾ, ದಕ್ಷಿಣ ಆಫ್ರಿಕ, ದಕ್ಷಿಣ ಅಮೇರಿಕಗಳಿಂದ ರೇಡಿಯೋ ಕೇಳಬಹುದು.

## ನ್ಯೂಯಾರ್ಕಿನಲ್ಲಿ

ಉಪಹಾರ ಗೃಹದ ಉತ್ತರ ದಕ್ಷಿಣ ಭಾಗಗಳಲ್ಲಿ ದೊಡ್ಡದಾದ ನರ್ತನ ಶಾಲೆಗಳಿವೆ. ಅವುಗಳಿಗೆ ಹೊಂದಿಕೊಂಡು ಫಲಾಹಾರ ಮಂದಿರಗಳೂ ಊಟದ ಸಭಾಗೃಹಗಳೂ ಇವೆ. ೧೯೪೮ ನೇ ಮೇ ತಿಂಗಳಲ್ಲಿ ಇಲ್ಲಿ, ಎರಡು ಅದ್ಭುತ ರಾಜಕೀಯ ಭೋಜನಗಳು ನಡೆದುವು. ಒಂದನ್ನು ನ್ಯೂಯಾರ್ಕಿನ ಗವರ್ನರ್ ಥಾಮಸ್ ಡ್ಯೂಯಿಯ ಅಧ್ಯಕ್ಷ ಚುನಾವಣೆಯ ಉಮೇದುವಾರಿಕೆಯ ಮೊದಲಿನ ಹಂತವಾಗಿಯೂ, ಇನ್ನೊಂದನ್ನು ನ್ಯೂಯಾರ್ಕಿನ ಮೇಯರಾಗಿದ್ದ ವಿಲಿಯಂ ಓಡ್ವಾಯಿಯವರು ಪ್ರಜಾಪಕ್ಷದ ಉಮೇದುವಾರರ ಪರವಾಗಿಕೊಟ್ಟಿದ್ದರು. ಥಾಮಸ್ ಡ್ಯೂಯಿಯ ಭೋಜನಕ್ಕೆ ಬರುವವರ ಪ್ಲೇಟಿಗೆ ೫೦ ಡಾಲರು ಬೆಲೆ. ಅವರು ಎಷ್ಟೆಂದರೂ ರಿಪಬ್ಲಿಕನ್ಸ್. ಮೇಯರರ ಭೋಜನದ ಪ್ಲೇಟಿಗೆ ೧೦೦ ಡಾಲರು! ಈ ಹಣ ಪಕ್ಷಗಳಪ್ರಚಾರಕ್ಕೆ ಉಪಯೋಗಿಸುತ್ತಾರೆ. ಇಬ್ಬರ ಭೋಜನಕ್ಕೂ ೧೦೦೦ ಅಮೇರಿಕನ್ನರು ಹೋಗಿದ್ದರು.

ಈ ಹೊಟೇಲಿಗೆ ಬರುವ ನಾನಾ ದೇಶದ ಜನರ ಉಪಯೋಗಕ್ಕಾಗಿ ಅನೇಕ ಏರ್ಪಾಡುಗಳನ್ನು ಮಾಡಿದ್ದಾರೆ.

(೧) ವಿದೇಶಾಂಗ ಕಚೇರಿ — ಇಲ್ಲಿ ಪರದೇಶಗಳಿಂದ ಹಲವಾರು ಭಾಷೆಗಳನ್ನು ಮಾತನಾಡುವ ಜನರ ಕಷ್ಟಗಳನ್ನು ನೀಗಿಸಲು ಸುಮಾರಾಗಿ ಪ್ರಪಂಚದ ಮುಖ್ಯ ಭಾಷೆಗಳು ಬರುವವರನ್ನು ನೇಮಿಸಿದ್ದಾರೆ, ಸುಮಾರು ೨೦ ಭಾಷೆ ಬರುವ ಜನರಿದ್ದಾರೆ.

(೨) ಸ್ಪ್ಯಾನಿಷ್, ಪೋರ್ಚುಗೀಸ್, ಮತ್ತು ಫ್ರೆಂಚ್ ಮಾತನಾಡುವವರ ಉಪಯೋಗಕ್ಕಾಗಿ ವಿಶೇಷವಾಗಿ ಲ್ಯಾಟಿನ್ ಅಮೇರಿಕನ್ ಶಾಖೆ ಇದೆ.

(೩) ವೈದ್ಯಶಾಖೆ—೧೭ನೆಯ ಮಹಡಿಯಲ್ಲಿ ವೈದ್ಯಶಾಖೆಯ ಮುಖ್ಯ ಆಸ್ಪತ್ರೆ ಇದೆ. ೨೧ನೆಯ ಮಹಡಿಯಲ್ಲಿ ದಂತವೈದ್ಯರಿದ್ದಾರೆ. ಇವೆಲ್ಲವನ್ನೂ ಹೊಟೇಲಿನವರೇ ಇಟ್ಟಿದ್ದಾರೆ.

(೪) ಬ್ಯಾಂಕುಗಳು,—ಕೆಮಿಕಲ್ ಬ್ಯಾಂಕ್ ಮತ್ತು ಟ್ರಸ್ಟ ಕಂಪೆನಿ.

ಬ್ಯಾಂಕಿನ ಎಲ್ಲ ವ್ಯವಹಾರಗಳನ್ನೂ ಉಪಹಾರ ಗೃಹದವರ ಅನುಕೂಲ ಕ್ಕಾಗಿ ತೆರೆಯಲಾಗಿದೆ.

(೫) ಸಿನೆಮಾ ನಾಟಕ ಮಂದಿರ, ನರ್ತನಗಳಿಗೆ ಹೋಗಲು ಟಿಕೆಟ್ಟು ಕಚೇರಿ ಅಲ್ಲಿಯೇ ಇವೆ.

(೬) ಪ್ರಯಾಣಿಕರಿಗೆ ಬೇರೆ ಬೇರೆ ನಗರಗಳಿಗೆ, ದೇಶಗಳಿಗೆ ಹೋಗಲು ಅನುಕೂಲವಾಗುವಂತೆ ಥಾಮಸ್ ಕುಕ್ ಮತ್ತು ಅಮೇರಿಕನ್ ಎಕ್ಸ್‌ಪ್ರೆಸ್ ಕಂಪೆನಿಯ ಕಚೇರಿ ಅಲ್ಲಿಯೇ ಇವೆ.

(೭) ಅಮೇರಿಕದ ಮನೆಗಳಲ್ಲಿ ಅಡಿಗೆ ಮಾಡುವಂತೆ, ಅಡಿಗೆ ಮಾಡಿ ಕೊಳ್ಳಲು ವಿಶೇಷವಾದ ಅಡಿಗೆಮನೆ ಇದೆ.

(೮) ನಾನಾ ತರಹದ ಆಹಾರಗಳನ್ನು ತಯಾರಿಸಲು ವಿಶೇಷ ಪರಿಶ್ರಮ ಹೊಂದಿದ ತಜ್ಞರಿದ್ದಾರೆ. ಮಕ್ಕಳಿಗೆ, ರೋಗಿಗಳಿಗೆ ತಕ್ಕ ಆಹಾರವನ್ನು ಸಿದ್ಧ ಪಡಿಸಿಕೊಳ್ಳುವ ಅನುಕೂಲತೆ ಇದೆ.

(೯) ಬಟ್ಟೆಗಳನ್ನು ಒಗೆದು, ಇಸ್ತ್ರಿ ಮಾಡಿ ಒಂದೇ ದಿನದಲ್ಲಿ ಒದಗಿ ಸುವ ಅನುಕೂಲತೆ, ೫ನೆಯ ಮಹಡಿಯಲ್ಲಿದೆ. ಹಗಲೂ ರಾತ್ರಿ ಈ ಕೆಲಸ ನಡೆದಿರುತ್ತದೆ.

(೧೦) ಬರವಣಿಗೆ, ಟೈಪಿಂಗ್ ಮತ್ತು ಗುಮಾಸ್ತೆಯ ಕೆಲಸ ಮಾಡಲು ವಿಶೇಷ ಜನರೇ ಇದ್ದಾರೆ, ಇಲ್ಲಿ ಪುಸ್ತಕ ಭಂಡಾರವಿದೆ. ನ್ಯೂಯಾರ್ಕಿನ ನಕ್ಷೆ ಇದೆ. ಸಬ್‌ವೆ, ಟ್ರಾಂ, ಬಸ್ಸು ಮುಂತಾದುವುಗಳ ಸುದ್ದಿ ಇಲ್ಲಿ ಪಡೆಯ ಬಹುದು.

(೧೧) ಮೊದಲನೆಯ ಮಹಡಿಯಲ್ಲಿ ಸುಂದರವಾಗಿ ಅಲಂಕರಿಸಿದ ಕ್ಷೌರದ ಅಂಗಡಿ ಇದೆ. ಆದರೆ ನಗ್ನ ಚಿತ್ರಗಳನ್ನು ಗೋಡೆಗೆ ತಗಲು ಹಾಕಿಲ್ಲ.

(೧೨) ಸೌಂದರ್ಯವನ್ನು ಹೆಚ್ಚಿಸಿಕೊಳ್ಳಲು ಸ್ತ್ರೀಯರ ಅನುಕೂಲ ಕ್ಕಾಗಿ ಸೌಂದರ್ಯಶಾಲೆ (Beauty Saloon) ಇದೆ.

(೧೩) ದಕ್ಷಿಣ ದಿಕ್ಕಿನಲ್ಲಿ ಒಂದು ಪುಸ್ತಕದ ಅಂಗಡಿ ಇದೆ. ಹೊಸ ಪುಸ್ತಕಗಳು ಆಗತಾನೇ ಪ್ರಕಟವಾದವು, ಇಲ್ಲಿ ಸಿಕ್ಕುತ್ತವೆ.

(೧೪) ಕೋಟುಗಳು, ಗೌನುಗಳು, ಸೂಟುಗಳು, ಸ್ತ್ರೀಯರ ಬಟ್ಟೆಗಳು ಇರುವ ಅಂಗಡಿ ಇದೆ.

(೧೫) ಒಡವೆಗಳ ಅಂಗಡಿ, ನಾನಾ ದೇಶದ ನಾನಾ ತರಹದ ಒಡವೆಗಳನ್ನೊಳಗೊಂಡಿದ್ದು ನೋಡಲು ಬಲು ಚೆಂದವಾಗಿ ಕಾಣುತ್ತದೆ.

(೧೬) ಕೆಳಗಡೆಯ ಮಹಡಿಯಲ್ಲಿ ಒಬ್ಬ ಫೋಟೋ ತೆಗೆಯುವವನಿದ್ದಾನೆ. ಹಿಂದಿನ ಅಧ್ಯಕ್ಷ ರೂಸವೆಲ್ಟ್, ಡ್ಯೂಕ್ ಮತ್ತು ಡಚ್ಯಸ್ ಆಫ್ ವಿಂಡ್ಸರರು ಇಲ್ಲಿ ಫೋಟೋ ತೆಗೆಯಿಸಿಕೊಂಡಿದ್ದಾರೆ.

ಈ ಎಲ್ಲ ಅಂಗಡಿಗಳೂ ಹೊಟೇಲಿನ ಆಡಳಿತಕ್ಕೆ ಸೇರಿವೆ. ಇದೇ ನ್ಯೂಯಾರ್ಕಿನ ಅಧಿಕೃತ ಅರಮನೆ-ಪ್ರಪಂಚದ ದೊಡ್ಡ ತರಗತಿಯ ಉಪಹಾರಗೃಹ-ವಾಲ್ಡಾರ್ಫ್ ಆಸ್ಟೋರಿಯಾ!

ಮನಮೋಹಕರವಾದ ನ್ಯೂಯಾರ್ಕಿನ ಸುಪ್ರಸಿದ್ಧ ಉಪಹಾರ ಮಂದಿರದ ವಿವರವನ್ನು ತಿಳಿದನಂತರ, ನ್ಯೂಯಾರ್ಕಿನ ಇನ್ನೊಂದು ಸುಪ್ರಸಿದ್ಧವಾದ ವಿದ್ಯಾರ್ಥಿ ಮಂದಿರದ ವಿಷಯ ತಿಳಿಯಬೇಕು.

---

## ಅಂತರ ರಾಷ್ಟ್ರೀಯ ವಿದ್ಯಾರ್ಥಿ ಮಂದಿರಗಳು

ಬರ್ಕ್ಲೀಯ ಅಂತರ ರಾಷ್ಟ್ರೀಯ ವಿದ್ಯಾರ್ಥಿಮಂದಿರದ ಬಗ್ಗೆ ಹಿಂದೆಯೇ ಸ್ವಲ್ಪ ವಿಷಯ ತಿಳಿಸಲಾಗಿದೆ. ಈ ಅಂತರ ರಾಷ್ಟ್ರೀಯ ವಿದ್ಯಾರ್ಥಿ ಮಂದಿರಗಳು ಅಮೇರಿಕದ ಮೂರು ನಾಲ್ಕು ಮಹಾ ನಗರಗಳಲ್ಲಿ ಸ್ಥಾಪಿತವಾಗಿವೆ. ನಾಲ್ಕನೆಯದು ಫ್ರಾನ್ಸಿನ ಸುಂದರ ನಗರವಾದ ಪ್ಯಾರಿಸ್ಸಿನಲ್ಲಿದೆ.

## ಸಾಗರದಾಚೆ

ಹೊರ ದೇಶದ ವಿದ್ಯಾರ್ಥಿ ನ್ಯೂಯಾರ್ಕಿಗೆ ಬಂದ ಕೂಡಲೇ ತನ್ನ ಕಣ್ಣನ್ನು "**ನಿನ್ನ ಭ್ರಾತೃಭಾವ ಉಳಿಯಲಿ**" ಎಂಬ ಉದ್ದೇಶವಿರುವ ಅಂತರರಾಷ್ಟ್ರೀಯ ವಿದ್ಯಾರ್ಥಿ ಮಂದಿರದ ಕಡೆ ಹೊರಳಿಸುತ್ತಾನೆ. ಕಾರಣ, ತನ್ನಂತೆ ಓದಲು ಬಂದ ಸಹಪಾಠಿಗಳನ್ನು ಕಂಡು ಮಾತನಾಡಿಸ ಬಹುದು. ಸಾಮಾನ್ಯವಾಗಿಬರುವ ಮನೆಕಡೆಯ ಆಸೆಯನ್ನು ಪರಿಹರಿಸಿಕೊಳ್ಳ ಬಹುದು. ತನ್ನಂತೆಯೇ ಸಾವಿರಾರು ವಿದ್ಯಾರ್ಥಿಗಳಿರುವುದನ್ನು ನೋಡಿ ಧೈರ್ಯ ತಂದುಕೊಳ್ಳಬಹುದು ಎಂದು. ಕೆಲವು ದಿನ ಈ ಮಂದಿರಗಳಲ್ಲಿ ವಾಸ ಮಾಡಿದ ವಿದ್ಯಾರ್ಥಿ ಕೊನೆಗೆ ತನ್ನ ದೇಶವನ್ನೂ ಕೂಡ ಮರೆತು, ಅಂತರರಾಷ್ಟ್ರೀಯ ಹೆಣ್ಣೊಂದನ್ನು ಜೀವನದ ಗೆಳತಿಯನ್ನಾಗಿ ಮಾಡಿ ಕೊಂಡು, ಇಲ್ಲಿಯೇ ನೆಲಸಿದ ಸಂದರ್ಭಗಳು ಎಷ್ಟೋ!

ಈ ವಿದ್ಯಾರ್ಥಿ ಮಂದಿರಗಳು ಪ್ರಾರಂಭವಾಗಿ ೨೦ ವರ್ಷಗಳಾಯಿತು. ನಾನಾ ದೇಶಕ್ಕೆ ಸೇರಿದ ಸುಮಾರು ೪೫ ಸಾವಿರ ವಿದ್ಯಾರ್ಥಿಗಳು ಈ ನಿಲಯ ಗಳಲ್ಲಿ ವಾಸ ಮಾಡಿದ್ದಾರೆ. ಜಾತಿಯ ಬಡಿದಾಟ, ಕೋಮುವಾರು ಪ್ರಾತಿ ನಿಧ್ಯ, ಬುದ್ಧಿಶಕ್ತಿಯ ಹೆಚ್ಚಳ ಯಾವುದಕ್ಕೂ ಗಮನ ಕೊಡದೆ, ಮೊದಲು ಯಾವ ವಿದ್ಯಾರ್ಥಿ ಬಂದು ಸೇರುತ್ತಾನೋ ಅವನಿಗೆ ಇಲ್ಲಿ ವಾಸಿಸಲು ಸ್ಥಳ ಕೊಡುತ್ತಾರೆ. ನಿಬಂಧನೆಗಳಾಗಲಿ, ಕಟ್ಟಳೆಗಳಾಗಲಿ ಇಲ್ಲವೆಂದಲ್ಲ-ಇವೆ. ಇಲ್ಲಿರುವವರು ವಿದ್ಯಾರ್ಥಿ, ಅಥವಾ ವಿದ್ಯಾರ್ಥಿನಿಯಾಗಿರಬೇಕು. ಶಾಲೆ ಅಥವಾ ಕಾಲೇಜಿನ ಅಧಿಕಾರಿಗಳಿಂದ ಗುರುತಿನ ಚೀಟಿ ತರಬೇಕು. ಇಲ್ಲ ದಿದ್ದರೆ ಪ್ರವೇಶ ಸಾಧ್ಯವಿಲ್ಲ.

ಪ್ರಪಂಚದ ನಾನಾ ವಿದ್ಯಾರ್ಥಿಗಳಲ್ಲಿ ಅಂತರರಾಷ್ಟ್ರೀಯ ಸ್ನೇಹ ಸೌಹಾರ್ದಗಳು ಬೆಳೆದು ವಿಶ್ವಶಾಂತಿಯನ್ನು ಪ್ರಪಂಚ ಬೆಳಗಲೆಂಬ ಉದ್ದೇಶ ವನ್ನಿಟ್ಟುಕೊಂಡು, ನ್ಯೂಯಾರ್ಕ್, ಚಿಕಾಗೋ, ಬರ್ಕ್ಲಿ ಮತ್ತು ಪ್ಯಾರಿಸ್ ಗಳಲ್ಲಿ ಭವ್ಯವಾದ ಈ ಸುಂದರ ಮಂದಿರಗಳನ್ನು ಸ್ಥಾಪಿಸಿದರು. ಸ್ಥಾಪಿಸಿದ ಉದ್ದೇಶವೂ ತಕ್ಕಮಟ್ಟಿಗೆ ನೆರವೇರಿದೆ.

# ಅಂತರ ರಾಷ್ಟ್ರೀಯ ವಿದ್ಯಾರ್ಥಿ ಮಂದಿರಗಳು

೧೯೨೪ನೇ ಇಸವಿಯಲ್ಲಿ ನ್ಯೂಯಾರ್ಕಿನ ನಿಲಯವು ಸ್ಥಾಪಿಸಲ್ಪಟ್ಟಿತು. 'ಮ್ಯಾನ್ ಹಟ್ಟನ್' ದ್ವೀಪದ ಕೊನೆಯ ಭಾಗದ ಪ್ರಶಾಂತವಾದ ವಾತಾವರಣದಿಂದೊಡಗೂಡಿ ಪ್ರಕಾಶಿಸುವುದು. ಈ ಭವನದ ಎದುರುಗಡೆ ಸುಂದರವಾದ ಉದ್ಯಾನವನ. ಪಕ್ಕದಲ್ಲಿ ಹಡ್ಸನ್ ನದೀತೀರ. ಮೇಲ್ಗಡೆ ಅಂತರ ರಾಷ್ಟ್ರೀಯ ನಿಶಾನೆ. ಅನತಿ ದೂರದಲ್ಲಿಯೇ ಅಧ್ಯಕ್ಷ ಗ್ರ್ಯಾಂಟನ ಸಮಾಧಿಯು ನಿಲಯದ ಕಡೆ ನೋಡುತ್ತಿದೆ. ಸಬ್‌ವೇದಲ್ಲಿ ಬರುವವರು ೧೨೫ನೇ ರಸ್ತೆಯ ರೈಲ್ವೆ ಸ್ಟೇಷನ್ನಿನಲ್ಲಿಳಿಯಬೇಕು. **ಈ ಮಂದಿರದ ವಿಳಾಸ ೫೦೦, "ರಿವರ್ ಸೈಡ್,"** ನ್ಯೂಯಾರ್ಕಿನ ಯಾವ ಭಾಗದಿಂದಲಾದರೂ ೫ಸೆಂಟ್ಸಿಗೆ (೦-೨-೬) ಇಲ್ಲಿಗೆ ಬರಬಹುದು. ಇಂದು ಈ ನಿಲಯದಲ್ಲಿ ೫೦ ದೇಶಗಳಿಗೆ ಸೇರಿದ ೬೨೫ ವಿದ್ಯಾರ್ಥಿ ವಿದ್ಯಾರ್ಥಿನಿಯರು ವಾಸ ಮಾಡುತ್ತಿದ್ದಾರೆ.

ಈ ನಿಲಯಗಳಲ್ಲಿ ಎರಡು ಭಾಗಗಳಿವೆ; ಒಂದು ವಿದ್ಯಾರ್ಥಿಗಳಿಗೆ ಮತ್ತೊಂದು ವಿದ್ಯಾರ್ಥಿನಿಯರಿಗೆ. ಈ ನಿಲಯಗಳಲ್ಲೆಲ್ಲ ನ್ಯೂಯಾರ್ಕಿನ ನಿಲಯವೇ ದೊಡ್ಡದು. ವಾಸಕ್ಕನುಕೂಲವಾದ ಊಟದ ಮನೆ, ಉಪಹಾರ ಗೃಹ, ಪುಸ್ತಕ ಭಂಡಾರ, ಗರಡಿ ಮನೆ, ನರ್ತನ ಶಾಲೆ, ಪೋಸ್ಟ್ ಆಫೀಸ್, ಆಸ್ಪತ್ರೆ, ಚಿಲ್ಲರೆ ಅಂಗಡಿ, ಹೊಂದಿಕೊಂಡಿವೆ. ವಿದ್ಯಾರ್ಥಿ ವಿದ್ಯಾರ್ಥಿನಿಯರ ವಾಸದ ಕೊಠಡಿಗಳ ಮಧ್ಯೆ ದೊಡ್ಡದಾದ ಎಲ್ಲರೂ ಉಪಯೋಗಿಸಬಹುದಾದ ಸಭಾ ಗೃಹವೊಂದಿದೆ. ಇಲ್ಲಿಯೇ ಅದೆಷ್ಟೋ ಅಂತರ ರಾಷ್ಟ್ರೀಯ ಸ್ನೇಹಗಳು ಮದುವೆಯಲ್ಲಿ ಪರಿಣಮಿಸಿ ಹೂವಾಗಿ ಅರಳಿವೆ, ಕೆಲವು ಬಾಡಿ ಬತ್ತಿಯೂ ಇವೆ. ಈ ಸಭಾ ಗೃಹದ ಒಂದು ಗೋಡೆಯ ಪಕ್ಕದಲ್ಲಿ ಕವಿ **ರವೀಂದ್ರನಾಥ ಠಾಕೂರರ** ಭಾವಚಿತ್ರವನ್ನು ಅನಾವರಣ ಮಾಡಿದ್ದಾರೆ. ಭಾರತೀಯ ವಿದ್ಯಾರ್ಥಿಗಳು ತಮ್ಮ ಕಾರ್ಯ ಚಟುವಟಿಕೆಗಳನ್ನು ನಡೆಯಿಸುವುದು ಇಲ್ಲಿಯೇ. **ಶ್ರೀ ವಿಜಯಲಕ್ಷ್ಮಿ ಪಂಡಿತ್, ಹಂಸಾಮೆಹ್ತ, ಅಸಫ್ ಆಲಿಗಳು,** ಭಾರತೀಯ ವಿದ್ಯಾರ್ಥಿಗಳನ್ನು ಒಟ್ಟಾಗಿ ಇಲ್ಲಿಯೇ ಕಂಡದ್ದು, ಮಾತನಾಡಿದ್ದು. ಅಮೇರಿಕದಲ್ಲಿ ಈ ದಿನಕ್ಕೆ ೩೦೦೦

ವಿದ್ಯಾರ್ಥಿಗಳು ನಾನಾ ವಿಷಯಗಳನ್ನು ಕುರಿತು ಅಭ್ಯಾಸ ಮಾಡುತ್ತಿದ್ದಾರೆ. ಅವರಲ್ಲಿ ಸುಮಾರು ೧೫೦ ವಿದ್ಯಾರ್ಥಿಗಳು ನ್ಯೂಯಾರ್ಕಿನಲ್ಲಿಯೇ ಇದ್ದಾರೆ. ಅವರ ಪೈಕಿ ಸುಮಾರು ೭೫ ವಿದ್ಯಾರ್ಥಿಗಳು ಈ ನಿಲಯದಲ್ಲಿ ವಾಸ ಮಾಡುತ್ತಿದ್ದಾರೆ. ಚಿಕಾಗೋ ಮತ್ತು ಬರ್ಕ್ಲೀಗಳಲ್ಲಿಯೂ ಇದೇ ರೀತಿಯ ವ್ಯವಸ್ಥೆ ಇದೆ. ಕ್ರಮವಾಗಿ ಇಲ್ಲಿಯೂ ಸುಮಾರು ೪೦, ೬೦ ಭಾರತೀಯ ವಿದ್ಯಾರ್ಥಿಗಳಿದ್ದಾರೆ. ನಾನು ನೋಡಿದುವುಗಳ ಪೈಕಿ, (ಪ್ಯಾರಿಸ್ಸೊಂದನ್ನು ಬಿಟ್ಟು) ಬರ್ಕ್ಲೀಯ ನಿಲಯವೇ ಅತಿ ಸುಂದರವಾಗಿದೆ.

ಈ ವಿದ್ಯಾರ್ಥಿ ಮಂದಿರಗಳ ಸ್ಥಾಪನೆಯ ನೆನಪು, ಶಿವಮೊಗ್ಗೆಯ ಕರ್ಣಾಟಕ ಸಂಘ ಹೇಗೆ ಜಾಯಿಕಾಯಿ ಪೆಟ್ಟಿಗೆಯ ಮೇಲೆ **ಕೂಡಲಿ ಚಿದಂಬರಂ, ಎಸ್.ವಿ. ಕೃಷ್ಣಮೂರ್ತಿರಾಯರು, ಭೂಪಾಳಂ ಪುಟ್ಟೆ ನಂಜಪ್ಪ,** ಇವರ ಭಾವನೆಯಿಂದ ಮೂಡಿತೋ ಆ ನೆನಪಿಗೆ ಇಂಬುಗೊಡುತ್ತದೆ. ಒಂದು ದಿನ ಒಬ್ಬ ಚೀನಿ ವಿದ್ಯಾರ್ಥಿ ಒಬ್ಬಂಟಿಯಾಗಿ ಕೊಲಂಬಿಯಾ ವಿಶ್ವವಿದ್ಯಾನಿಲಯದ ಕಡೆ ಸಾಗುತ್ತಿದ್ದ. ಅಮೇರಿಕನ್ನರೊಬ್ಬರು ಆತನನ್ನು ಕೈಸನ್ನೆ ಮಾಡಿ ಕರೆದು "ಹಲೋ"ಎಂದರು. ಆತನಿಗೆ ಹಿಡಿಸಲಾರದಷ್ಟು ಸಂತೋಷ ಉಂಟಾಯಿತು.

ಮೂರು ವಾರಗಳಾದರೂ ಒಬ್ಬರೂ ಆತನನ್ನು ಮಾತನಾಡಿಸಿರಲಿಲ್ಲ. ಈ ಅಮೇರಿಕನ್ ಸಹನೀಯರು ಮಾತನಾಡಿಸಿದುದೂ ಅಲ್ಲದೆ ಯೋಗಕ್ಷೇಮ ವಿಚಾರಿಸಿ ಮುಂದಿನ ಭಾನುವಾರ ಭೋಜನಕ್ಕೆ ಬರಬೇಕೆಂದು ಆಹ್ವಾನವಿತ್ತರು. ಇವರೇ ಮುಂದಿನ ಅಂತರ ರಾಷ್ಟ್ರೀಯ ಮಂದಿರಗಳ ಸ್ಥಾಪಕರಾದ **ಶ್ರೀ ಹ್ಯಾರಿ ಎಡ್ಮಂಡ್ಸರು**. ಅಂದಿನ ಆದಿತ್ಯವಾರ ಕೊಲಂಬಿಯಾ ವಿಶ್ವವಿದ್ಯಾನಿಲಯದಲ್ಲಿ ಓದುತ್ತಿದ್ದ ಉಳಿದ ಹೊರ ದೇಶದ ವಿದ್ಯಾರ್ಥಿಗಳಿಗೂ ಔತಣವಿತ್ತಿದ್ದರು. ಅಂದಿನಿಂದ ಶ್ರೀ ಎಡ್ಮಂಡ್ಸರ ಭಾನುವಾರದ ಭೋಜನಗಳು ರೂಢಿಗೆ ಬಂದುವು. ಇಂದಿಗೂ ಭಾನುವಾರದ ಭೋಜನವೆಂದರೆ ಅದೊಂದು ಆಡಂಬರ, ಒಂದು ಮೋಜು.

## ಅಂತರ ರಾಷ್ಟ್ರೀಯ ವಿದ್ಯಾರ್ಥಿ ಮಂದಿರಗಳು

ಶ್ರೀ ಎಡ್‌ಮಂಡ್ಸರು ನ್ಯೂಯಾರ್ಕಿನಲ್ಲಿದ್ದ ವೈ. ಎಂ. ಸಿ. ಎ. ಸಂಸ್ಥೆಯ ಕಾರ್ಯದರ್ಶಿಗಳಾಗಿದ್ದರು. ನ್ಯೂಯಾರ್ಕಿನಲ್ಲಿದ್ದ ಪರದೇಶದ ವಿದ್ಯಾರ್ಥಿಗಳ ಸರ್ವೆಯೊಂದನ್ನು ಮಾಡಿ ಅವರ ಸ್ಥಿತಿಗತಿಗಳನ್ನರಿತುಕೊಂಡರು. ಒಂಟಿ ಜೀವನ ನಡೆಸುತ್ತಿದ್ದ ಈ ವಿದ್ಯಾರ್ಥಿಗಳು ಅಮೇರಿಕನ್ನರ ಕೂಡ ಬೆರೆಯುತ್ತಿರಲಿಲ್ಲ. ಕಾರಣ ಅಮೇರಿಕನ್ನರ ನಿಜ ಜೀವನ ತಿಳಿಯಲು ಸಾಧ್ಯವಾಗುತ್ತಿರಲಿಲ್ಲ. ಎಡ್‌ಮಂಡ್ಸರ ಭಾನುವಾರದ ಭೋಜನಗಳು ಈ ಕೊರತೆಯನ್ನು ನೀಗಿಸಿದುವು. ಎಡ್‌ಮಂಡ್ಸರ ಮನೆಯಲ್ಲಿ ಭಾನುವಾರದ ಭೋಜನಕ್ಕೆ ಜಾಗ ಸಾಲದಾಯಿತು. ಸರಿ, ಕೊಲಂಬಿಯಾ ವಿಶ್ವವಿದ್ಯಾನಿಲಯದ **"ಅರ್ಲ್‌ಹಾಲಿ"**ನಲ್ಲಿ ಈ ಸಮಾರಂಭದ ಊಟದ ಜೊತೆಗೆ ಸಂಗೀತ, ಭಾಷಣ, ಸಂಭಾಷಣೆ, ಸಂತೋಷಕೂಟ ಮೊದಲಾದುವು ಪ್ರಾರಂಭವಾದುವು. ಈ ರೀತಿಯಲ್ಲಿ ಒಂದು ದಿನ ಈ **ವಿಶ್ವ ಜನಾಂಗ ಸಂಘ**ವು ಉದ್ಭವವಾಯಿತು.

ಪರದೇಶದ ವಿದ್ಯಾರ್ಥಿಗಳಿಗೋಸ್ಕರ ಅಂತರ ರಾಷ್ಟ್ರೀಯ ವಿದ್ಯಾರ್ಥಿ ನಿಲಯವೊಂದನ್ನು ಸ್ಥಾಪಿಸಬೇಕೆಂಬ ಹಂಬಲ ಶ್ರೀ ಎಡ್‌ಮಂಡ್ಸರ ದಂಪತಿಗಳಿಗೆ ಪ್ರತಿ ದಿನದ ಯೋಚನೆಯಾಯಿತು. ಆ ಕನಸು ಎಂದು ಕಾರ್ಯರೂಪಕ್ಕೆ ಬರುವುದೋ ಎಂದು ಅವರು ಯೋಚಿಸುತ್ತಿದ್ದರು. ಬರೀ ಯೋಚನೆಯಿಂದ ಸಾಧ್ಯವಾಗದೆಂದು ಆ ವರ್ತುಳದಲ್ಲಿ ಕೆಲಸ ಮಾಡಲು ಪಕ್ರಮಿಸಿದರು. ತಮ್ಮ ಭಾನುವಾರದ ಭೋಜನಗಳಿಗೆ ಅನೇಕ ಶ್ರೀಮಂತರನ್ನೂ, ದೊಡ್ಡ ಮನುಷ್ಯರನ್ನೂ, ವಿಜ್ಞಾನಿಗಳನ್ನೂ, ರಾಜಕಾರಣ ಪಟುಗಳನ್ನೂ ಕರೆತಂದರು. ಅಂತರ ರಾಷ್ಟ್ರೀಯ ವಿದ್ಯಾರ್ಥಿಗಳ ಸಮಸ್ಯೆಗಳಲ್ಲಿ ಅಭಿರುಚಿಯನ್ನುಂಟುಮಾಡುತ್ತಿದ್ದರು. ಅಂತೂ ಒಂದು ಭಾನುವಾರ **ಶ್ರೀ ಜಾನ್ ಡಿ. ರಾಕ್‌ಫೆಲರ್** ಜೂನಿಯರರವರನ್ನು ಕರೆತಂದು ಅವರ ಯೋಜನೆಗಳನ್ನೆಲ್ಲಾ ತಿಳಿಸಿದರು. ಶ್ರೀ ರಾಕ್‌ಫೆಲರರು ಕೆಲವು ದಿನ ಯೋಚಿಸಿ, ಇಂತಹ ನಿಲಯಗಳ ಸ್ಥಾಪನೆಗೆ ತಮ್ಮ ಬೆಂಬಲ ಸೂಚಿಸಿ ಕಾಗದ

ಬರೆದರು. ಅದರೊಂದಿಗೆ ತಮ್ಮ ಮೊದಲ ದೇಣಿಗೆಯಾಗಿ ೩,೦೦,೦೦೦೦ ಡಾಲ ರುಗಳನ್ನೂ, ಈಗಿನ ನ್ಯೂಯಾರ್ಕ್ ಮಂದಿರದ ನಿವೇಶನವನ್ನು ಪಯೋಗಿಸಿ ಕೊಳ್ಳಲು ಅನುಮತಿಯನ್ನೂ ಕೊಟ್ಟರು. ಶ್ರೀ ಎಡ್‌ಮಂಡ್ಸರ ಸಂತೋ ಷಕ್ಕೆ ಪಾರವೇ ಇರಲಿಲ್ಲ.

೧೯೨೪ರಲ್ಲಿ ಸ್ಥಾಪಿತವಾದ ನ್ಯೂಯಾರ್ಕ್ ನಿಲಯದ ಪ್ರಥಮ ವ್ಯವ ಸ್ಥಾಪಕರಾಗಿ ಶ್ರೀ ಎಡ್‌ಮಂಡ್ಸರೇ ನಿಯಮಿಸಲ್ಪಟ್ಟರು. ಇದೊಂದರಿಂದ ಎಡ್‌ಮಂಡ್ಸರು ಸುಮ್ಮನೆ ಕೂಡ್ರಲಿಲ್ಲ. ಚಿಕಾಗೋ ಮತ್ತು ಕ್ಯಾಲಿಫೋರ್ನಿ ಯಕ್ಕೆ ಹೋಗಿ ಅಲ್ಲಿಯ ಸ್ಥಿತಿಗತಿಗಳನ್ನರಿತುಕೊಂಡು ಬಂದರು. ಶ್ರೀ ಎಡ್‌ಮಂಡ್ಸರ ಸಲಹೆಯ ಪ್ರಕಾರ ಶ್ರೀ ರಾಕ್ ಫೆಲ್ಲರರು ಕ್ಯಾಲಿಫೋರ್ನಿ ಯಾದ ಬರ್ಕ್ಲೆ ನಿಲಯಕ್ಕೆ ೧೨,೬೦,೦೦೦ ಡಾಲರುಗಳನ್ನೂ ಚಿಕಾಗೋ ನಿಲ ಯಕ್ಕೆ ೩,೦೦೦,೦೦೦ ಡಾಲರುಗಳನ್ನೂ ಕೊಟ್ಟರು. ೧೯೩೨ರಲ್ಲಿ ಈ ನಿಲ ಯಗಳು ಪ್ರಾರಂಭವಾದುವು.

'University' ಎಂಬ ಪದ ೧೩ನೇ ಶತಮಾನದಿಂದ ರೂಢಿಗೆ ಬಂದಿತು. **ನಾಟರ್ ಡ್ಯಾಮ್ ಕ್ಯಾಥೆಡ್ರಲ್** ಸುತ್ತಮುತ್ತಲಿರುವ ಅನೇಕ ಶಾಲೆಗಳ ಗುಂಪಿಗೆ ಈ ಹೆಸರನ್ನು ಕೊಟ್ಟರು. ಅಂದಿನಿಂದ ೧೯೪೦ರವರೆಗೆ ಪ್ಯಾರಿಸ್ ಪ್ರಪಂಚದ ಸಂಸ್ಕೃತಿ ಮತ್ತು ಬುದ್ಧಿಶಕ್ತಿಯ ಕೇಂದ್ರವೆಂದು ಹೆಸರಾಗಿತ್ತು. ೧೯೨೧ರಲ್ಲಿ ಪ್ಯಾರಿಸ್ ವಿಶ್ವವಿದ್ಯಾನಿಲಯವು ವಿದ್ಯಾರ್ಥಿ ವಸತಿಗೃಹವೊಂ ದನ್ನು ಸ್ಥಾಪಿಸಿತು. ಇದರಲ್ಲಿ ೧೯ ಕಟ್ಟಡಗಳಿದ್ದುವು. ಪ್ರತಿಯೊಂದು ಜನಾಂ ಗದ ವಿದ್ಯಾರ್ಥಿಗಳೂ ಇಲ್ಲಿದ್ದರು. ಬರಬರುತ್ತ ಹೊರದೇಶೀಯರು ಒಟ್ಟಾಗಿ ಕಲೆಯಲು ಪ್ರಾರಂಭಿಸಿದರು. ಅವರಿಗೊಂದು ಪ್ರತ್ಯೇಕ ನಿಲಯದ ಆವಶ್ಯ ಕತೆಯುಂಟಾಯಿತು. ರಾಕ್‌ಫೆಲ್ಲರರ ನಿಧಿಯಿಂದ ಇಲ್ಲಿಯೂ ಒಂದು ಅಂತರ ರಾಷ್ಟ್ರೀಯ ವಿದ್ಯಾರ್ಥಿ ಮಂದಿರವನ್ನು ಕಟ್ಟಲಾಯಿತು.

ಅಮೇರಿಕದಲ್ಲಿರುವ ವಿದ್ಯಾರ್ಥಿ ಮಂದಿರಗಳು ಬರೀ ವಾಸ ಮಾಡುವ ಕೊಠಡಿಗಳಲ್ಲ; ಸಾಮಾಜಿಕ, ಬೌದ್ಧಿಕ ಚಟುವಟಿಕೆಗಳ ಕೇಂದ್ರಗಳು.

ಇಲ್ಲಿ ವಾಸಮಾಡುವ ವಿದ್ಯಾರ್ಥಿಗಳಲ್ಲದೆ, ಉಳಿದ ವಿದ್ಯಾರ್ಥಿಗಳು ಈ ಮಂದಿರದ ಸದಸ್ಯರುಗಳಾಗಿ ನಿಲಯದ ಚಟುವಟಿಕೆಗಳಲ್ಲಿ ಭಾಗವಹಿಸಬಹುದು.

**ಕ್ಯಾಂಡಲ್ ಲೈಟ್ ಹಬ್ಬ** ವರ್ಷದ ಕೊನೆಯಲ್ಲಿ ವಿಜೃಂಭಣೆಯಿಂದ ಜರುಗವುದು. ಈ ನಿಲಯಗಳ ವೈಶಿಷ್ಟ್ಯ ಇದು. ವರ್ಷದ ಕೊನೆಯ ಭಾನುವಾರದ ಭೋಜನದಲ್ಲಿ ಈ ಹಬ್ಬ ನಡೆಯುತ್ತದೆ, ಊಟಕ್ಕೆ ಮೊದಲು ಮೇಜಿನ ಮೇಲೆ ಪ್ರತಿಯೊಬ್ಬ ವಿದ್ಯಾರ್ಥಿಗೂ ಕ್ಯಾಂಡಲ್ ಬತ್ತಿಯನ್ನು ಕೊಡುತ್ತಾರೆ. ಒಬ್ಬೊಬ್ಬರಾಗಿ ದೀಪ ಹಚ್ಚುತ್ತ ಬರಬೇಕು. ಆಗ ಮಂದಿರವೆಲ್ಲ ಬೆಳಕಾಗಿ **'ದೀಪಾವಳಿ'** ಯಾಗುತ್ತದೆ. ಆಗ ಪ್ರತಿಯೊಬ್ಬ ವಿದ್ಯಾರ್ಥಿಯೂ ಪ್ರಪಂಚದ ಶಾಂತಿಗೆ ಅನುಕೂಲವಾಗುವಂತೆ ತಮ್ಮ ತಮ್ಮ ದೇಶಗಳಲ್ಲಿ ಅಂತರ ರಾಷ್ಟ್ರೀಯ ಸ್ನೇಹ ಸೌಹಾರ್ದಗಳನ್ನು ಬೀರುವ ಈ ನಿಲಯದ ತತ್ವವನ್ನು ಪ್ರತಿಪಾದಿಸುವುದಾಗಿ ಕೆಳಗೆ ಕಂಡಂತೆ ಪ್ರತಿಜ್ಞೆ ಗೈಯುತ್ತಾನೆ.

''ದೀಪ, ದೀಪವನ್ನು ಹೊತ್ತಿಸಿದಂತೆ ಪ್ರೀತಿ ಸ್ನೇಹ, ಅನ್ಯೋನ್ಯತೆಗಳು ಒಬ್ಬರಿಂದೊಬ್ಬರಿಗೆ ಪ್ರವಹಿಸುತ್ತವೆ. ಆದಿತ್ಯವಾರದ ಸಂಜೆಯ ವಿಶೇಷ ಭೋಜನಕ್ಕೆ ಬಂದ ನಾವು ಈ ಪ್ರಕಾರ ಹೊತ್ತಿಸಲ್ಪಟ್ಟ ಸ್ನೇಹ ಜ್ಯೋತಿಯು, ಎಂದೂ ನಂದದಂತೆ ನೋಡಿಕೊಳ್ಳಲು ಪ್ರತಿಜ್ಞಾ ಬದ್ಧರಾಗಿದ್ದೇವೆ''.

ಈ ನಿಲಯಗಳನ್ನು ನೋಡುತ್ತ ಭಾರತದ ಕಡೆ ಕಣ್ಣು ಹೊರಳಿಸಿದೆ. ನಮ್ಮಲ್ಲೂ ಇಂತಹ ನಿಲಯಗಳು ಸಾಧ್ಯ. ಜಾತಿಯ ಜಗಳ ನಿರ್ಮೂಲವಾಗಬೇಕು. ಪರಸ್ಪರ ವೈಷಮ್ಯ ತೊಲಗಬೇಕು. ಮೊದಲು ರಾಷ್ಟ್ರೀಯ ನಿಲಯಗಳ ಸ್ಥಾಪನೆಯಾಗಬೇಕು. ಅನಂತರ ವಿಶ್ವನಿಲಯದ ಮಾತು.

ನ್ಯೂಯಾರ್ಕಿನ ಇನ್ನೊಂದು ಅತಿ ವೈಭವವಾದ ನೋಟವೆಂದರೆ, ಅಲ್ಲಿರುವ "ಸಾಮ್ರಾಜ್ಯ ಭವನ". ಆ ಕಟ್ಟಡಕ್ಕೆ ಇಂಗ್ಲೀಷಿನಲ್ಲಿ "ಎಂಪೈರ್ ಸ್ಟೇಟ್ ಬಿಲ್ಡಿಂಗ್" (Empire State Building) ಎಂದು ಹೆಸರು.

---

# ಸಾಮ್ರಾಜ್ಯ ಭವನ

ನ್ಯೂಯಾರ್ಕ್ ನಗರಕ್ಕೆ ಬರುವ ಯಾವೊಬ್ಬ ಆಗಂತುಕನ ಮನಸ್ಸನ್ನು ಸೆಳೆಯಬಲ್ಲ ವಿಖ್ಯಾತವಾದ ಸಾಮ್ರಾಜ್ಯ ಭವನವು ಗಗನಚುಂಬಿ ಕಟ್ಟಡಗಳಲ್ಲಿ ಅಗ್ರಗಣ್ಯವಾಗಿದೆ. ಅದರ ಅತಿ ಎತ್ತರವಾದ ಪರೀಕ್ಷಾಲಯಗಳಿಂದ ಕಾಣುವ ವಿಹಂಗಮ ನೋಟಗಳು ಅದರ ಒಂದು ಮುಖ್ಯವಾದ ಆಕರ್ಷಣೆ.

ಸಾಮ್ರಾಜ್ಯ ಭವನವು ಜಗತ್ತಿನಲ್ಲಿರುವ ಅತಿ ಎತ್ತರದ ಕಟ್ಟಡಗಳಲ್ಲೊಂದಾಗಿದೆ. ಅದರ ಎತ್ತರ ೧೨೫೦ ಅಡಿ. ನ್ಯೂಯಾರ್ಕ್ ನಗರದ ಇತರ ಗಣನೀಯ ಗಗನಚುಂಬಿಗಳಾದ **ಕ್ರೈಸ್ಲರ್ ಭವನ, ಆರ್.ಸಿ.ಎ. ಭವನ** ಮತ್ತು **ವೂಲ್‌ವರ್ತ್ ಭವನ**ಗಳ ಎತ್ತರವು ಅನುಕ್ರಮವಾಗಿ ೧೦೪೬ಅಡಿ, ೯೦೦ ಅಡಿ ಮತ್ತು ೭೯೨ ಅಡಿಗಳಾಗಿವೆ. ನ್ಯೂಯಾರ್ಕನ್ನು ಬಿಟ್ಟರೆ, ಪ್ಯಾರಿಸ್ ನಗರದಲ್ಲಿರುವ ಸುಪ್ರಸಿದ್ಧವಾದ **ಎಫೆಲ್ ಟವರ್** ೧೦೨೪|| ಅಡಿ ಎತ್ತರವಿದೆ.

ಮ್ಯಾನ್ ಹಟ್ಟನ್ನಿನ ಐದನೇ ಅವೆನ್ಯೂವಿನ ೩೩ನೇ ಮತ್ತು ೩೪ನೇ ರಸ್ತೆಗಳ ಮಧ್ಯೆ ಸಾಮ್ರಾಜ್ಯ ಭವನವು ನಿಂತಿದೆ. ಅಲ್ಲಿಗೆ ಐ. ಆರ್. ಟಿ. ಲೆಕ್ಸಿಂಗ್ಟನ್ ಅವೆನ್ಯೂ ಇಲ್ಲವೇ ಐ. ಆರ್. ಟಿ. ಬ್ರಾಡ್ವೇ ಸೆವೆನ್ತ್ ಅವೆನ್ಯೂಗಳ ಮೂಲಕವಾಗಿ ಹೋಗಬಹುದು. ಐದನೇ ಅವೆನ್ಯೂ ಬಸ್ಸು ೩೪ನೇ ರಸ್ತೆಯಲ್ಲಿ ಸಾಮ್ರಾಜ್ಯ ಭವನದ ಬಳಿ ಹೋಗುತ್ತದೆ.

ಈ ಕಟ್ಟಡವನ್ನು ರಚಿಸಿದವರು **ಶೆರ್ವ್, ಲ್ಯಾಂಬ್** ಮತ್ತು **ಹಾರ್ಮನ್** ಎಂಬುವರು. ಇವರಿಗೆ ಶಿಲ್ಪಿ ಸಂಘವು ೧೯೩೧ರಲ್ಲಿ ಬಂಗಾರದ ಪದಕವನ್ನಿತ್ತಿತ್ತು. ೧೯೨೯ನೇ ಅಕ್ಟೋಬರ್ ೧ ರಂದು ಪ್ರಾರಂಭವಾದ ಈ ಕಟ್ಟಡದ ಕೆಲಸವು ೧೯೩೦ನೇ ಮೇ ೮ ರಂದು ಪೂರ್ಣವಾಯಿತು. ಅದರ ಅಧ್ಯಕ್ಷನಾದ **ಆಲ್ಫ್ರೆಡ್ ಇ. ಸ್ಮಿತ್ತರು** ಆರಂಭೋತ್ಸವವನ್ನು ನಡೆಸಿದರು.

ಕಟ್ಟಡವನ್ನು ಕಟ್ಟಿದ ವೇಗವೇ ಒಂದು ಹೊಸ ದಾಖಲೆಯನ್ನು ಸ್ಥಾಪಿಸಿತು: ಸರಾಸರಿಯಾಗಿ ವಾರಕ್ಕೆ ನಾಲ್ಕೂವರೆ ಮಾಳಿಗೆಗಳ ರಚನೆಯಾಯಿತು; ಒಮ್ಮೆ ಹತ್ತು ದಿನಗಳಲ್ಲಿ ಹದಿನಾಲ್ಕೂವರೆ ಮಾಳಿಗೆಗಳ ಕೆಲಸವೂ ಮುಗಿಯಿತು. ಐದನೇ ಅವೆನ್ಯೂವಿಗೆ ತಾಗಿರುವ ಎರಡು ಎಕರೆ ಭೂಮಿಯಲ್ಲಿ ಕಟ್ಟಲ್ಪಟ್ಟ ಐದು ಮಾಳಿಗೆಗಳ ಅಸ್ತಿವಾರದ ಮೇಲೆ ಈ ಕಟ್ಟಡವು ಕಟ್ಟಲ್ಪಟ್ಟಿದೆ: ಇದರ ಮುಖ್ಯ ಸ್ತಂಭವು ೮೬ನೆಯ ಮಾಳಿಗೆಯವರೆಗೆ ಮಧ್ಯದಲ್ಲಿ ಛಿದ್ರವಾಗದೆ ಏರಿದೆ. ಇದರ ತುದಿಯಲ್ಲಿ ೨೦೦ ಅಡಿ ಎತ್ತರದ ಪರೀಕ್ಷಾಲಯದ ಗೋಪುರವಿದೆ. ಈ ಗೋಪುರದ ಕಟ್ಟಡಕ್ಕೆ ಕೇವಲ ಲೋಹ ಮತ್ತು ಗಾಜು ಮಾತ್ರ ಉಪಯೋಗಿಸಲ್ಪಟ್ಟಿವೆ.

ಸಾಮ್ರಾಜ್ಯ ಭವನವು ನಿಂತಿರುವ ಭೂಮಿಗೆ ಹದಿನೆಂಟು ಮಿಲಿಯನ್ ಡಾಲರು ಬೆಲೆಯಾಗಿತ್ತು. ಅಲ್ಲದೆ ಆ ಭೂಮಿಯಲ್ಲಿ ಹಿಂದಿದ್ದ ಹಳೆಯ ವಾಲ್ಡಾರ್ಫ್ ಆಸ್ಟೋರಿಯಾ ಹೊಟೇಲಿನ ಮಾಲಕರಿಗೆ ಹದಿಮೂರು ಮಿಲಿಯನ್ ಡಾಲರುಗಳನ್ನು ಪ್ರತ್ಯೇಕ ಕೊಡಬೇಕಾಯಿತು.

ಭವನದ ೮೬ ಮತ್ತು ೧೦೨ನೇ ಮಾಳಿಗೆಯಲ್ಲಿರುವ ಪರೀಕ್ಷಾಲಯಗಳಿಂದ ಭವ್ಯವಾದ ೫೦ ಮೈಲಿ ವಿಹಂಗಮ ದೃಶ್ಯವನ್ನು ನೋಡಬಹುದು. ವಾಲ್ ಸ್ಟ್ರೀಟ್, ಬ್ರುಕ್ಲಿನ್, ವಿಲಿಯಮ್ಸ್ ಬರ್ಗ್, ಮ್ಯಾನ್ ಹಟ್ಟನ್, ಬ್ರುಕ್ಲಿನ್ ಪ್ರದೇಶಗಳು ಮತ್ತು ಸುಪ್ರಸಿದ್ಧ ಸ್ವಾತಂತ್ರ್ಯಮೂರ್ತಿ **ಲಿಬರ್ಟಿ ಸ್ಟ್ಯಾಚ್ಯು**–ಇವೆಲ್ಲ ಪರೀಕ್ಷಾಲಯಗಳಿಂದ ಕಾಣುವ ಹೃದಯಸ್ಪರ್ಶಿ ನೋಟಗಳು.

ಸಾಮ್ರಾಜ್ಯ ಭವನವನ್ನು ಕಟ್ಟಿದ ಪ್ರಾರಂಭದ ಐದು ವರ್ಷಗಳಲ್ಲಿ ಐದು ಮಿಲಿಯನ್‌ಗಿಂತಲೂ ಹೆಚ್ಚಿಗೆ ಜನ ಅದನ್ನು ಸಂದರ್ಶಿಸಿದರು: ಏರುತೊಟ್ಟಿಲು ಮೂಲಕ ೮೬ನೆಯ ಮಾಳಿಗೆಗೆ ಸೀದಾ ಏರಬಹುದು. ಆದರೆ ಕಟ್ಟಡದ ಸಂಪೂರ್ಣ ನೋಟವು ಸಿಗಬೇಕಾದರೆ ೧೦೨ನೆಯ ಮಾಳಿಗೆಯ ತನಕ ಹೋಗಬೇಕು. ಇದರ ಪ್ರವೇಶಕ್ಕೆ ಟಿಕೆಟ್ ಪಡಕೊಳ್ಳಬೇಕು:

ದೊಡ್ಡವರಿಗೆ ಒಂದು ಡಾಲರ್ ಹತ್ತು ಸೆಂಟುಗಳು ಪ್ರವೇಶಧನ: ಮಕ್ಕಳಿಗೆ ಇಪ್ಪತ್ತೈದು ಸೆಂಟುಗಳು ಮಾತ್ರ. ೮೬ನೆಯ ಮಾಳಿಗೆಯಲ್ಲಿ, ಒಂದು ಹೊಟೇಲು, ಸಣ್ಣದೊಂದು ಅಂಗಡಿ ಮತ್ತೊಂದು ಮದ್ಯದಂಗಡಿಗಳಿವೆ. ಅಲ್ಲೇ ಒಂದು ಧ್ವನಿಮುದ್ರಕ ಯಂತ್ರವೂ ಇದೆ. ಅದರಲ್ಲಿ ಸಂದರ್ಶಕರು ತಮ್ಮ ಧ್ವನಿಯನ್ನು ಮುದ್ರಿಸಿ, ಅದನ್ನು ಸಮೀಪದಲ್ಲಿರುವ ತನ್ನಷ್ಟಕ್ಕೆ ತಾವೇ ಕೆಲಸ ಮಾಡುವ ಅಂಚೆಕಟ್ಟೆಯ ಮೂಲಕ ತಮ್ಮ ಮನೆಗಳಿಗೆ ಕಳಿಸಬಹುದು.

ಸಂಯುಕ್ತ ಸಂಸ್ಥಾನದಲ್ಲಿ ಕಚೇರಿಗಳುಳ್ಳ ಮೂರು ಬೃಹದಾಕಾರವಾದ ಕಟ್ಟಡಗಳ ಕೊಠಡಿಗಳನ್ನು ವಾಣಿಜ್ಯ ವ್ಯಾಪಾರಾದಿ ಕಚೇರಿಗಳಿಗಾಗಿ ಬಾಡಿಗೆಗೆ ಕೊಡುವರು. ಇಂಥ ಉಳಿದ ಎರಡು ಕಟ್ಟಡಗಳೆಂದರೆ ಚಿಕಾಗೋ ನಗರದ **ಮರ್ಚೆಂಡೈಸ್ ಮಾರ್ಟ್** ಮತ್ತು **ರಾಕ್ ಫೆಲ್ಲರ್ ಸೆಂಟರಿ**ನಲ್ಲಿರುವ **ಆರ್. ಸಿ. ಎ.** ಕಟ್ಟಡ.

ಐದು ಟೆಲಿವಿಜನ್ ಪ್ರಸರಣಾ ಕೇಂದ್ರಗಳ ನಿರ್ಮಾಣಕ್ಕಾಗಿ, ಸಾಮ್ರಾಜ್ಯ ಭವನವು ಇನ್ನು ೧೯೯ ಅಡಿ ಎತ್ತರದ ಕಟ್ಟಡವನ್ನು ತುದಿಯಲ್ಲಿ ಕಟ್ಟಿದೆ. ಟೆಲಿವಿಜನ್ನಿನ ಅಲೆಗಳು ಸಾಮಾನ್ಯ ರೇಡಿಯೋದ ಅಲೆಗಳಂತೆ ಸುಲಭವಾಗಿ ಚಲಿಸವು; ಅವಕ್ಕೆ ಎತ್ತರ ಬಹು ಮುಖ್ಯವಾದುದು. ಈ ಹೊಸ ಕೆಲಸ ಮುಗಿದ ಬಳಿಕ ಸಾಮ್ರಾಜ್ಯ ಭವನವು ೧೪೪೯ ಅಡಿ ಎತ್ತರವಾಗಿ ಪ್ರಪಂಚದಲ್ಲೇ ಅತೀವಿಸ್ಮಯಕರ ಶಿಲ್ಪಕೃತಿಯಾಗಿ ಉಳಿಯುವುದು.

**ನ್ಯೂಯಾರ್ಕ್ ವಿಷಯದಲ್ಲಿ ಬೇಕಾದಷ್ಟು ಪುಸ್ತಕಗಳನ್ನೇ ಬರೆಯಬಹುದು. ಸಂಕ್ಷೇಪವಾಗಿ ನ್ಯೂಯಾರ್ಕ್ ನಗರವನ್ನು ಪರಿಚಯ ಮಾಡಿಕೊಡಲು ಪ್ರಯತ್ನಿಸಿದ್ದೇನೆ. ಒಂದೇ ಮಾತಿನಲ್ಲಿ ಹೇಳುವುದಾದರೆ ನ್ಯೂಯಾರ್ಕ್ ನಗರವು ಇಂದು ಪ್ರಪಂಚದಲ್ಲಿ ಅತಿ ಮಹತ್ವವಾದ ಸ್ಥಾನವನ್ನು ಪಡೆದಿದೆ.**

---

# ವಿಷಘುಳಿಗೆ

ನ್ಯೂಯಾರ್ಕಿನ ವೈಭವವನ್ನು ನೋಡಿಕೊಂಡು ವಿಶ್ವವಿದ್ಯಾನಿಲಯಕ್ಕೆ ಸೇರಲು ಸಿರಾಕ್ಯೂಸ್ ನಗರಕ್ಕೆ ಪ್ರಯಾಣ ಬೆಳಿಸಿದೆನು. ಸಿರಾಕ್ಯೂಸ್ ನಗರವು ನ್ಯೂಯಾರ್ಕ್ ಸಂಸ್ಥಾನದ ಉತ್ತರಕ್ಕಿದೆ. ಅಲ್ಲಿ ವರ್ಷಕ್ಕೆ ಒಂಭತ್ತು ತಿಂಗಳು ವಿಪರೀತ ಚಳಿ. ಸರೋವರಗಳಿಂದಾವೃತವಾದ ಬಹು ಸುಂದರವಾದ ಪಟ್ಟಣವದು. ನಾನು ಆ ನಗರದಲ್ಲಿಳಿದಾಗ ನಗರವೆಲ್ಲಾ ಬಿಳಿಯಮಂಜಿನ ಗಡ್ಡೆಗಳಿಂದ ತುಂಬಿಕೊಂಡುಬಿಟ್ಟಿತ್ತು. ಎಲ್ಲಿ ನೋಡಿದರೂ ಬಿಳಿಯ ಮಂಜಿನ ಗಡ್ಡೆಗಳೇ. ಬರಿಯ ಕಾಲಿನಿಂದ ಓಡಾಡಲು ಸಾಧ್ಯವೇ ಇರಲಿಲ್ಲ. ಮನೆಯಲ್ಲಿ ಕೂಡ ಕಾಲಿಗೆ ಉಣ್ಣೆಯ ಕಾಲುಚೀಲವನ್ನು ಹಾಕಿಕೊಳ್ಳಬೇಕಾಗಿತ್ತು.

ನನಗೆ ಸಿರಾಕ್ಯೂಸ್‌ನಲ್ಲಿ ಯಾರೂ ಗೊತ್ತಿರಲಿಲ್ಲ. ಆದ್ದರಿಂದ ಅಲ್ಲಿನ ವೈ. ಎಂ. ಸಿ. ಎ.ನಲ್ಲಿ ಇಳಿದು ಕೊಂಡು ಮರುದಿನ ಬೆಳಿಗ್ಗೆ ವಿಶ್ವವಿದ್ಯಾನಿಲ ಯಕ್ಕೆ ಹೋದೆನು. ಅಲ್ಲಿಯ ಪತ್ರಿಕೋದ್ಯಮದ ಪ್ರಾಧ್ಯಾಪಕರು ನನ್ನನ್ನು ಬಹಳ ಆದರದಿಂದ ಬರಮಾಡಿಕೊಂಡು ಯೋಗಕ್ಷೇಮ ವಿಚಾರಿಸಿದರು. ಕಾಲೇಜಿಗೆ ಸೇರಲು ಕಾತುರನಾಗಿದ್ದ ನಾನು ಸ್ವಲ್ಪವೂ ತಡಮಾಡದೆ ನನ್ನ ಕಾಗದಪತ್ರಗಳನ್ನೂ, ಕಾಲೇಜಿಗೆ ಸೇರಲು ಕೊಟ್ಟ ಅನುಮತಿ ಪತ್ರವನ್ನೂ, ನಮ್ಮ ಪ್ರೊಫೆಸರರಿಗೆ ತೋರಿಸಿದೆನು. ನಾನು ಹೋದದ್ದು ಫೆಬ್ರವರಿ ೬ನೇಯ ತಾರೀಖು. ಆ ವೇಳೆಗಾಗಲೇ ಕಾಲೇಜಿನ ಪಾಠಪ್ರವಚನಗಳು ಪ್ರಾರಂಭ ವಾಗಿ ಒಂದು ತಿಂಗಳ ಮೇಲಾಗಿತ್ತು. ಅಧಿಕಾರಿಯುತವಾಗಿ ಕಾಲೇಜಿಗೆ ಸೇರಿ ಟರ್ಮು ಹಾಕಲು ಕಾಲಾವಕಾಶವಿಲ್ಲವಾದುದರಿಂದ ಸಾಧ್ಯವಿಲ್ಲವೆಂದೂ, ಹಾಗೆಯೇ ತರಗತಿಗಳಿಗೆ ಹಾಜರಾಗಬಹುದೆಂದೂ ನಮ್ಮ ಪ್ರೊಫೆಸರರು ತಿಳಿ ಸಿದರು. ಅಂದರೆ ಬರುವ ಜೂನ್ ತಿಂಗಳವರೆಗೂ ನಾನು ಕಾಲೇಜಿಗೆ ಸೇರದೆ ಕಾಲಕಳೆಯಬೇಕಾಗಿತ್ತು. ಮನಸ್ಸಿಗೆ ತುಂಬಾ ನಿರಾಸೆಯುಂಟಾ ಯಿತು. ಜಾಗ್ರತೆಯಾಗಿ ನನ್ನ ಅಭ್ಯಾಸವನ್ನು ಮುಗಿಸಿಕೊಂಡು ಭಾರತಕ್ಕೆ ತೆರಳಬೇಕೆಂಬ ನನ್ನ ಆಸೆಯು ನಿರಾಸೆಯಾಯಿತು. ಈ ಹೊತ್ತಿಗಾಗಲೇ

ಮನೆಕಡೆಯಾಸೆ ಬಲವಾಗಿತ್ತು. ಆದರೂ ಧೈರ್ಯ ತೆಗೆದುಕೊಂಡು ಅನಧಿಕಾರಿಯುಃತವಾಗಿ ಕಾಲೇಜಿನಲ್ಲಿ ಪತ್ರಿಕೋದ್ಯಮದ ತರಗತಿಗಳಿಗೆ ಹೋಗಿ ಪಾಠಪ್ರವಚನಗಳನ್ನು ಕೇಳುತ್ತಿದ್ದೆನು. ಆ ಶಾಲೆಯಲ್ಲಿ ನಡೆಸುತ್ತಿದ್ದ ಪಾಠಗಳೆಲ್ಲಾ ಕೇವಲ ಪ್ರಾಥಮಿಕ ಪತ್ರಿಕೋದ್ಯಮದ ಪಾಠಗಳಾಗಿದ್ದುವು. ಆ ಪಾಠಗಳನ್ನು ಕೇಳಲು ಆಸಕ್ತಿಯಾಗಲಿ, ಅಭಿರುಚಿಯಾಗಲಿ ಇರಲಿಲ್ಲ.

ಸಿರಾಕ್ಯೂಸ್‌ನಲ್ಲಿ ಆಗ ನಾಲ್ಕಾರು ಭಾರತೀಯ ವಿದ್ಯಾರ್ಥಿಗಳಿದ್ದರೂ ಒಬ್ಬರೂ ಗೆಳೆಯರಾಗಲಿಲ್ಲ. ಹೊತ್ತು ಕಳೆಯುವುದು ದುಸ್ತರವಾಯಿತು. ಜೊತೆಗೆ ಅಲ್ಲಿಯ ಥಂಡಿಯ ಹವಾ. ಊಟದ ಕಷ್ಟವಂತೂ ಹೇಳತೀರದು. ಮಾಂಸಾಹಾರಿಯಲ್ಲದ ನನಗೆ ಅಲ್ಲಿಯ ಆಹಾರ ಹಿಡಿಸಲಿಲ್ಲ. ಹೀಗಾಗಿ ದಿನವೂ ಉಪವಾಸ, ವನವಾಸ ಅನುಭವಿಸಬೇಕಾಗಿತ್ತು. ಸಿರಾಕ್ಯೂಸಿನ ಒಂಟಿ ಜೀವನ ಮನಸ್ಸಿನ ಮೇಲೆ ಬಹಳ ಪರಿಣಾಮವನ್ನುಂಟುಮಾಡಿತು.

ಸಿರಾಕ್ಯೂಸಿನಲ್ಲಿ ಒಂದು ವಾರ ಕಳೆದಿರಬಹುದು. ಜೀವನ ತುಂಬ ಬೇಸರವಾಗಿ ಮನಸ್ಸು ಚಿಂತೆಯ ಹುತ್ತವಾಯಿತು. ಅಲ್ಲಿಯ ವಾತಾವರಣ ಹಿಡಿಸಲಿಲ್ಲ. ಭಾರತದಲ್ಲಿ ಯಾವ ಕಷ್ಟಗಳು ಬಂದರೂ ಹೆದರದ ನಾನು, ಕೇವಲ ಕಲ್ಪನೆಯ ಕೆಲವು ಕಷ್ಟಗಳಿಗೆ ಹೆದರಿ ಸೋತುಬಿಟ್ಟೆನು. ಒಂದು ದಿನ ಬೆಳಿಗ್ಗೆ ಯಾವುದೋ ಒಂದು **ವಿಷಘಳಿಗೆ**ಯಲ್ಲಿ ಮರಳಿ ಭಾರತಕ್ಕೆ ಹೊರಡಬೇಕೆಂದು ತೀರ್ಮಾನಿಸಿ ನನ್ನ ನಿರ್ಧಾರವನ್ನು ನಮ್ಮ ಪ್ರೊಫೆಸರರಿಗೆ ತಿಳಿಸಿದೆನು. ನಮ್ಮ ಪ್ರೊಫೆಸರರಿಗೆ ನನ್ನ ನಿರ್ಧಾರ ಅದೆಷ್ಟು ವ್ಯಸನವನ್ನುಂಟುಮಾಡಿರಬೇಕೋ! ನನ್ನನ್ನು ಬಹಳವಾಗಿ ಸಮಾಧಾನ ಪಡಿಸಿದರು. ಬೇಕಾದಷ್ಟು ಸಂತೈಸಿದರು. ಆದರೂ ನನ್ನ ಮಂಗನಂತಿದ್ದ ಮನಸ್ಸಿಗೆ ಅವರ ಉಪದೇಶಗಳೊಂದೂ ಹಿಡಿಸಲಿಲ್ಲ. ಮರುದಿನ ಸಾಮಾನುಗಳನ್ನು ಹೊತ್ತುಕೊಂಡು ದುಃಖದಿಂದ ಭಾರತಕ್ಕೆ ಹೊರಡಲು ನ್ಯೂಯಾರ್ಕಿಗೆ ಪ್ರಯಾಣ ಬೆಳೆಸಿದೆನು.

ನ್ಯೂಯಾರ್ಕಿನ ಅಂತರ ರಾಷ್ಟ್ರೀಯ ವಿದ್ಯಾರ್ಥಿ ಮಂದಿರದಲ್ಲಿ ಸಾಮಾ

ನುಗಳನ್ನಿಟ್ಟು, ಮನಸ್ಸಿಗೆ ಶಾಂತಿಯನ್ನು ಪಡೆಯಲು, ರಾಮಕೃಷ್ಣಾಶ್ರ ಮಕ್ಕೆ ತೆರಳಿದೆನು. ಅಲ್ಲಿಯ ಸ್ವಾಮಿಗಳಾದ **ಸ್ವಾಮಿ ನಿಖಿಲಾನಂದರು** ನನ್ನನ್ನು ತುಂಬಾ ಆದರದಿಂದ ಬರಮಾಡಿಕೊಂಡು ನನ್ನ ಕಥೆಯನ್ನು ಕೇಳಿ ಕನಿಕರಪಟ್ಟರು. ನಾನು ಇಟ್ಟ ಹೆಜ್ಜೆಯು ತಪ್ಪೆಂದೂ, ಪುನಃ ನಾನು ವಿಶ್ವವಿದ್ಯಾನಿಲಯಕ್ಕೆ ಮರಳಬೇಕೆಂದೂ ಬುದ್ಧಿ ಹೇಳಿದರು. ಅವರ ಬುದ್ಧಿವಾದವು ನನ್ನ ಮನಸ್ಸನ್ನು ಪ್ರವೇಶಿಸಲಿಲ್ಲ. ಭಾರತಕ್ಕೆ ಹಿಂತಿರುಗುವುದೇ ಸರಿ ಎಂದು ನಿರ್ಧರಿಸಿದೆನು. ಆಗಿನ ನನ್ನ ಪರಿಸ್ಥಿತಿಯು ಬಹಳ ಕೆಟ್ಟದಿತ್ತು. ಮನಸ್ಸು ವಿಕಾರವಾಗಿತ್ತು. ಸರಿಯಾಗಿ ಓಡಾಡಲು ಸಹ ಶಕ್ತಿ ಇರಲಿಲ್ಲ. ನರಗಳ ದುರ್ಬಲತೆಯು ಕಂಡುಬಂದಿತು. ಧೈರ್ಯವಾಗಿ ಎರಡು ಮಾತುಗಳನ್ನು ಆಡಲು ಸಹಾ ಆಗುತ್ತಿರಲಿಲ್ಲ. ಯಾರು ಏನು ಹೇಳಿದರೂ ಕೇಳುತ್ತಿದ್ದೆನು. ಈ ಸ್ಥಿತಿಯಲ್ಲಿದ್ದ ನನ್ನನ್ನು ಹಿಂತಿರುಗಿ ಕಳುಹಿಸುವುದೇ ಸರಿ ಎಂದು ಸ್ವಾಮಿಗಳೂ ತೀರ್ಮಾನಕ್ಕೆ ಬಂದರು. ೪೫೦ ಡಾಲರು ಕೊಟ್ಟು ಭಾರತಕ್ಕೆ ಹಡಗಿನಲ್ಲಿ ಹೋಗಬೇಕೆಂದು ನಿರ್ಧರಿಸಿದೆನು. ಹಡಗಿನ ೩೦ ದಿನಗಳ ಪ್ರಯಾಣ ತಲೆಯನ್ನೆಲ್ಲಿ ಕೆಡಿಸೀತೋ ಎಂದು ೮೪೮ ಡಾಲರು ಕೊಟ್ಟು ಟಿ. ಡಬ್ಲ್ಯು. ಎ. ವಿಮಾನದಲ್ಲಿ ಹೋಗಬೇಕೆಂದು, ವಿಮಾನ ಟಿಕೆಟ್ಟು ಕೊಂಡು ಬಂದೆನು. ಸಿರಾಕ್ಯೂಸಿನಿಂದ ಬಂದ ಎರಡು ದಿನಗಳಲ್ಲಿ ಭಾರತಕ್ಕೆ ಮರಳುವ ಸಿದ್ಧತೆಗಳೆಲ್ಲವನ್ನೂ ಮಾಡಿಕೊಂಡೆನು.

ನಾನು ಎಂತಹ ತಪ್ಪು ಕೆಲಸ ಮಾಡುತ್ತಿರುವೆನೆಂಬ ಅರಿವೇ ನನಗಾಗಲಿಲ್ಲ. ಭಾರತದಲ್ಲಿ ನಾನು ಅಮೇರಿಕಕ್ಕೆ ಹೋಗಿ ಪತ್ರಿಕೋದ್ಯಮ ಕಲೆಯನ್ನು ಕಲಿತುಕೊಂಡು ಬರಲು ಸಹಾಯ ಮಾಡಿದ ಸಾವಿರಾರು ಜನ ಹಿತೈಷಿಗಳ ಆಸೆ ಆಕಾಂಕ್ಷೆಗಳಿಗೆ ತಿಲಾಂಜಲಿಯನ್ನು ಹೇಗೆ ಕೊಡುತ್ತಿದ್ದೆನೆಂಬುದರ ಅರಿವೂ ನನಗಾಗಲಿಲ್ಲ. ಅಮೇರಿಕದಲ್ಲಿಯೇ ಇದ್ದು, ಕಷ್ಟವನ್ನು ಸಹಿಸಿ ಬಂದ ಕೆಲಸವನ್ನು ಮುಗಿಸಿಕೊಂಡು ಹೋಗುವ ಆಲೋಚನೆ ಬಿಟ್ಟು ಭಾರತಕ್ಕೆ ಮರಳಿ, ನನ್ನ ಹಿತೈಷಿಗಳಿಗೆ ಮುಖ ತೋರಿಸಲು ಅಸಹ್ಯವಾಗು

ವುದರಿಂದ **ಪಾಂಡಿಚೇರಿ**ಗೋ, ಇಲ್ಲವೆ **ಶಾಂತಿನಿಕೇತನ**ಕ್ಕೋ, ಹೋಗಿ ನೆಲಸಬೇಕೆಂದು, ಮನಸ್ಸು ಆಲೋಚಿಸುತ್ತಿತ್ತು.

ಫೆಬ್ರವರಿ ೧೫ನೇ ತಾರೀಖು ನಾನು ವಿಮಾನ ಹತ್ತಬೇಕಾಗಿತ್ತು. ಆ ದಿನ ಬಂದೇಬಿಟ್ಟಿತು. ಸಾಯಂಕಾಲ ನಾಲ್ಕು ಘಂಟೆಗೆ ವಿಮಾನ ಹೊರಡು ವುದು ಗೊತ್ತಾಗಿತ್ತು. ಹಿಂದಿನ ಸಂಜೆಯು ನನ್ನ ಮನಸ್ಸಿನ ಮನೋ ಗತಿಯು ನನ್ನ ಶತ್ರುಗಳಿಗೂ ಬರಬಾರದು. ಇಂದೂ ಆ ದಿನವನ್ನು ನೆನಸಿ ಕೊಂಡರೆ ಮೈ 'ಜುಂ' ಎನ್ನುತ್ತದೆ. ಆ ರಾತ್ರಿಯನ್ನು ಕಳೆಯುವುದೇ ಅಸಾಧ್ಯವಾಯಿತು. ನಾನು ವಿಮಾನ ಹತ್ತುವ ಸಮಯ ಹತ್ತಿರಕ್ಕೆ ಬಂದಂತೆಲ್ಲಾ ನಾನು ಮಾಡುತ್ತಿರುವ ಕೆಲಸವು ತಪ್ಪೆಂದು ಅರಿವಾದರೂ, ನಾನು ಏನೂ ಮಾಡಲಾರದ ಹೇಡಿಯಾಗಿಬಿಟ್ಟಿದ್ದೆನು. ಅಂದಿನ ರಾತ್ರಿ ಯೆಲ್ಲಾ ನಿದ್ರೆ ಇರಲಿಲ್ಲ. ರಾತ್ರಿ ಒಂದು ಘಂಟೆಗೆ ನೀರಡಿಕೆ ಜಾಸ್ತಿಯಾ ಯಿತು. ನೀರು ಕುಡಿಯಲು ನಲ್ಲಿ ಎಲ್ಲಿರುವುದೆಂಬುದನ್ನೂ ಪತ್ತೆ ಹಚ್ಚಲು ಸಾಧ್ಯವಾಗದಷ್ಟು ನರ ದೌರ್ಬಲ್ಯವಾಗಿತ್ತು. ರಾತ್ರಿ ಎದ್ದು ನೀರಿಗಾಗಿ ಹಾ ತೊರೆಯುವಾಗ ಕರಿಯ ಕೋಟನ್ನು ಧರಿಸಿದ ಭಾರತೀಯರೊಬ್ಬರು ನನ್ನ ಎದುರು ಬಂದರು. ಅವರನ್ನು ನೀರು ಎಲ್ಲಿರುವುದೆಂಬುದಾಗಿ ಕೇಳಿದೆ. ಅವರು ತಕ್ಷಣ ನಲ್ಲಿಯ ಹತ್ತಿರ ನನ್ನನ್ನು ಕರೆದೊಯ್ದರು. ನನ್ನ ದಾಹವನ್ನಡಗಿಸಿಕೊಂಡ ಮೇಲೆ ನನ್ನ ಕ್ಷೇಮಸಮಾಚಾರ ಕೇಳಿದರು. ನೀವು ಯಾವ ಊರಿನವರೆಂದಾಗ ನಾನು ಮೈಸೂರಿನವನೆಂದೆ. ತಕ್ಷಣ ಅವರು ಕನ್ನಡದಲ್ಲಿ, **'ನಾವೂ ಕನ್ನಡದವರು ಬರ್ರಿ'** ಎಂದರು. ನನಗಾಗ ಎಲ್ಲೂ ಇಲ್ಲದ ಧೈರ್ಯ ಬಂದಿತು. ಇಬ್ಬರೂ ರಾತ್ರಿಯೆಲ್ಲಾ ಮಾತನಾಡಿ ದೆವು. ನೀವು ಯಾವ ವಿಷಯದಲ್ಲಿ ಡಿಗ್ರಿ ಪಡೆದಿರಿ, ಎಂದಾಗ ಹಿಡಿಸಲಾರ ದಷ್ಟು ಅಳು ಬಂದಿತು. ನನ್ನ ಸ್ಥಿತಿಯನ್ನು ಅರಿಯಲು ಅವರಿಗೆ ತಡವಾಗ ಲಿಲ್ಲ. ನನ್ನ ಸಮಸ್ಯೆಯೇನೆಂಬುದನ್ನು ಅರಿತುಕೊಳ್ಳಲು ಸಮಾಧಾನದಿಂದ ನನ್ನನ್ನು ಪ್ರಶ್ನಿಸಿದರು. ಈ ವೇಳೆಗೆ ನನಗೂ ನನ್ನ ತಪ್ಪಿನ ಅರಿವು

ಬಂದಿತ್ತು. ಆದರೆ ಏನು ಮಾಡಲೂ ಸಾಧ್ಯವಿರಲಿಲ್ಲ. ಅವರೊಡನೆ ನನ್ನ ದಾರುಣ ಕಥೆಯನ್ನು ತೋಡಿಕೊಂಡೆ. ಅವರು ಕೂಡಲೇ ನನ್ನನ್ನು ಮರಳಿ ಭಾರತಕ್ಕೆ ಹೋಗಕೂಡದೆಂದು ಒತ್ತಾಯ ಮಾಡಿದರು. ಬೆಳಿಗ್ಗೆ ಎದ್ದಕೂಡಲೇ ನನ್ನ ವಿಮಾನ ಪ್ರಯಾಣದ ಕಚೇರಿಗೆ ಹೋಗಿ ನನ್ನ ಪ್ರಯಾಣವನ್ನು ರದ್ದುಗೊಳಿಸಿ ಹಣ ವಾಪಸು ತಂದರು. ವಿಷಘಳಿಗೆ ಮಾಯ ವಾಯಿತು.

ಈ ಕನ್ನಡಿಗರಾರು? **ಶ್ರೀ ಕೊಣ್ಣೂರ ಬಿಂದು ಮಾಧವರಾಯರು.** ಬೆಳಗಾವಿ ಜಿಲ್ಲೆಯ ಹುಕ್ಕೇರಿಯವರು. ಬೊಂಬಾಯಿನ ಹತ್ತಿ ಗಿರಣಿಯೊಂದ ರಲ್ಲಿ ಕೆಲಸ ಮಾಡುತ್ತಿದ್ದರು. ಇವರು ಪದವೀಧರರಲ್ಲವೆಂದು, ಇವರ ಕೈ ಕೆಳಗಿನವರೊಬ್ಬರನ್ನು ಇವರ ಮೇಲೆ ಹಾಕಿದ್ದರು. ಅದನ್ನು ಸಹಿಸಲಾರದೆ ತಮ್ಮ ಆತ್ಮಗೌರವಕ್ಕೆ ಕುಂದೆಂದು ಭಾವಿಸಿ ಕೆಲಸಕ್ಕೆ ರಾಜೀನಾಮೆ ಕೊಟ್ಟು, ಹೇಗಾದರೂ ಮಾಡಿ ಪರದೇಶದಲ್ಲಿ ಪದವಿ ಪಡೆಯಬೇಕೆಂದು ಪಣ ತೊಟ್ಟು ಬಂದಿದ್ದ ವೀರ ಕನ್ನಡಿಗರು. ಮೊದಲು ಇಂಗ್ಲೆಂಡಿಗೆ ಬಂದು ಗಿರಣಿಯೊಂ ದರಲ್ಲಿ ಎಂಟು ತಿಂಗಳು ಕಾಲ ದುಡಿದರು. ಅಲ್ಲಿ ಅವರು ಡಿಗ್ರಿಯನ್ನು ಪಡೆ ಯಲು ಸಾಧ್ಯವಾಗಲಿಲ್ಲ. ಕೆಲವೇ ಡಾಲರುಗಳನ್ನು ಪಡೆದು ಹೇಗೋ, ಅಮೇರಿಕಕ್ಕೆ ಬಂದು ಕೇವಲ ಒಂದೂವರೆ ತಿಂಗಳಾಗಿತ್ತು. ವಿಕಾರಾವಸ್ಥೆಯ ಲ್ಲಿದ್ದ ನನಗೆ ಪುಣ್ಯನಿಧಿಯಾಗಿ ದೊರಕಿದರು.

ಕೊಣ್ಣೂರರು ನನ್ನ ಸ್ನೇಹ ನಿಧಿಯಾದರು. ಇಬ್ಬರೂ ಬ್ರುಕ್‌ಲಿನ್ ನಲ್ಲಿ ಒಂದು ಕೊಠಡಿಯನ್ನು ತೆಗೆದುಕೊಂಡು ಜೀವಿಸಲು ಪ್ರಾರಂಭಿಸಿದೆವು. ಅಲ್ಲಿ ಅಡಿಗೆ ಮಾಡಿಕೊಳ್ಳಲು ಅವಕಾಶವಿತ್ತು. ಭಾರತೀಯ ಅಡಿಗೆಯನ್ನು ಮಾಡಿಕೊಂಡು, ಇಬ್ಬರೂ ಜೊತೆಯಾಗಿ ಕಾಲಕಳೆಯಲಾರಂಭಿಸಿದೆವು. ಅಮೇರಿಕದಲ್ಲಿರಲು ಘಟ್ಟಿ ಮನಸ್ಸು ಮಾಡಿಕೊಂಡು, ನ್ಯೂಯಾರ್ಕಿನ ನಾನಾ ಸಂಸ್ಥೆಗಳನ್ನೂ, ಜನರನ್ನೂ ಭೇಟಿ ಮಾಡತೊಡಗಿದೆನು.

ಭಾರತೀಯರಾದ **ಶ್ರೀ ರಾಮಕೃಷ್ಣ ಸಾಹು ನೋಡಕ್‌ರವರ**

ಪರಿಚಯವಾಯಿತು. ಇವರು ಪೂನಾದವರು. ಬೊಂಬಾಯಿನ ಹಿಂದಿನ ನ್ಯಾಯವಿಧಾಯಕ ಸಭೆಯ ಸದಸ್ಯರಾಗಿದ್ದರು. ಇವರ ಮಗನೇ ಸುಪ್ರಸಿದ್ಧ ನಟ, **ಸಾಹು ಮೋಡಕ್.** ಇವರು ಅಮೇರಿಕನ್ ತರುಣಿಯೊರ್ವಳನ್ನು ಮದುವೆಯಾಗಿ, ಕ್ರಿಶ್ಚಿಯನ್ ಮತಕ್ಕೆ ಮತಾಂತರ ಹೊಂದಿ, ಭಾರತದ ಬಗ್ಗೆ ಭಾಷಣ ಮಾಡುತ್ತಾ ಅಲ್ಲಿಯೇ ನೆಲಸಿದ್ದಾರೆ. ಈಗ ಇಂಡೋ ಅಮೇರಿಕನ್ ಟ್ರೇಡಿಂಗ್ ವಾಣಿಜ್ಯ ಸಂಸ್ಥೆಯನ್ನು ಸ್ಥಾಪಿಸಿ ವ್ಯಾಪಾರ ಮಾಡುತ್ತಿದ್ದಾರೆ. ಇವರು ನನಗೆ ತುಂಬಾ ಪರಿಚಯದವರಾದರು. ನನ್ನಲ್ಲಿದ್ದ ಹಣವನ್ನೆಲ್ಲಾ ಇವರಲ್ಲಿಟ್ಟು, ತಿಂಗಳೊಂದಕ್ಕೆ ಕೆಲವು ಹಣವನ್ನು ತೆಗೆದುಕೊಳ್ಳುತ್ತಿದ್ದೆ. ಶ್ರೀ ಕೊಣ್ಣೂರರು ಇವರಲ್ಲಿ ಕೆಲಸಕ್ಕೆ ನಿಂತರು.

೨೫ ವರ್ಷಗಳಿಂದ ಅಲ್ಲಿಯೇ ನೆಲಸಿದ್ದ ಪಂಜಾಬಿನ **ಶ್ರೀ ಆರ್. ಎಸ್. ಸೇಕಾನ್,** ಎಂಬುವರ ಪರಿಚಯವೂ ಆಯಿತು. ಇವರೂ ಆಗಾಗ್ಗೆ ನನಗೆ ಸಲಹೆಗಳನ್ನು ಕೊಡುತ್ತಿದ್ದು, ಅಮೇರಿಕದ ನನ್ನ ಜೀವವನ್ನು ಹಗುರ ಮಾಡಿದರು.

ಇಂಡಿಯಾ ಲೀಗ್ ಆಫ್ ಅಮೇರಿಕದ ಅಧ್ಯಕ್ಷರಾದ **ಸರ್ದಾರ್ ಜೆ. ಜೆ. ಸಿಂಗರು, ಶ್ರೀ ಮರಾಠೆಯವರು, ಶ್ರೀ ಸರನ್‌ರವರನ್ನು** ಭೇಟಿಯಾದರೂ ಅವರಲ್ಲಿ ಹೆಚ್ಚಾಗಿ ಪರಿಚಯ ಬೆಳೆಯಲಿಲ್ಲ.

ಇದೇ ಸಮಯಕ್ಕೆ ವಿಶ್ವಸಂಸ್ಥೆಯ ಅಧಿವೇಶನಗಳನ್ನು ನೋಡಲು ಅವಕಾಶ ದೊರಕಿತು. ಬೇರೆಯಾವುದೂ ಕೆಲಸವಿಲ್ಲದ್ದರಿಂದ ಬೋಸ್ಟನ್‌ನಲ್ಲಿದ್ದ **ಡಾ|| ಆನಂದ ಕುಮಾರಸ್ವಾಮಿ**ಯವರನ್ನು ನೋಡಲು ಬೋಸ್ಟನ್ನಿಗೆ ತೆರಳಿದೆನು.

---

# ಗಾಜಿನ ಸಸ್ಯಗಳ ವಸ್ತು ಪ್ರದರ್ಶನಾಲಯ

ಅಮೇರಿಕದ ೬೦೦ ವಿಶ್ವವಿದ್ಯಾನಿಲಯಗಳಲ್ಲಿ ಬೋಸ್ಟನ್ ನಗರದಲ್ಲಿ ರುವ **ಹಾರ್ವರ್ಡ್ ವಿಶ್ವವಿದ್ಯಾಲಯವು** ಪ್ರಪಂಚದ ಹೆಸರಾಂತ ವಿದ್ಯಾ ಪೀಠಗಳಲ್ಲೊಂದು. ಬೋಸ್ಟನ್ ನಗರದ ಅಂದಕ್ಕೆ ಈ ವಿದ್ಯಾ ಪೀಠವು ಕಳೆ ಕೊಡುತ್ತಿದೆ. ಹಾರ್ವರ್ಡ್ ಮಹಾಶಯನ ಹೆಸರಿನಿಂದ ಸ್ಥಾಪಿತವಾದ ಈ ವಿದ್ಯಾ ಪೀಠದ ಮಹಾ ದ್ವಾರದಲ್ಲಿ ಅವನ ಪ್ರತಿಮೆಯನ್ನು ನಿರ್ಮಿಸಿದ್ದಾರೆ. ಹಾರ್ವರ್ಡ್‌ದ ಗಾಜಿನ ಸಸ್ಯಗಳ ವಸ್ತು ಪ್ರದರ್ಶನಾಲಯದ ಕಥೆಯನ್ನೇ ನಾನು ಇಲ್ಲಿ ಬರೆಯುತ್ತಿರುವುದು.

ಇದು ಬರಿಯ ವಸ್ತು ಪ್ರದರ್ಶನಾಲಯವಲ್ಲ. ಜೀವಂತ ಸಸ್ಯಗಳೇ ಇಲ್ಲಿರುವುವೋ ಎಂಬಂತೆ ಭಾಸವಾಗುವುದು. ಜರ್ಮನಿ ದೇಶದ **ಲಿಯೋ ಪಾಲ್ಡ್** ಮತ್ತು **ರುಡಾಲ್ಫ್ ಬ್ಲಾಸ್ಕ** ಎಂಬಿಬ್ಬರ ಪರಿಶ್ರಮ, ಕೈ ಚಳಕದ ಫಲವೇ, ಈ ಸಂಗ್ರಹಾಲಯ. ನೈಜತೆ ಹಾಗೂ ವೈಜ್ಞಾನಿಕ ಸ್ಪಷ್ಟತೆ ಎದ್ದು ಕಾಣುವುದಿಲ್ಲಿ. ೫೦ ವರ್ಷಗಳ ಸತತವಾದ ದುಡಿತದ ಫಲವಾಗಿ ಈ ಜ್ಞಾನ ಭಂಡಾರ ಇಂದು ಹಾರ್ವರ್ಡ್‌ದ ಸೊತ್ತಾಗಿದೆ. ಪ್ರಪಂಚದ ಇನ್ನಾವ ಸಂಗ್ರಹಾಲಯದಲ್ಲಿಯೂ ಸಿಕ್ಕದ ಈ ವಸ್ತುಗಳು ತಂದೆ ಮಕ್ಕಳಿಬ್ಬ ರಿಂದಲೇ, ಒಂದೇ ಪ್ರಯೋಗ ಮಂದಿರದಲ್ಲಿ ಮಾಡಿದಂತಹವು. ಬ್ಲಾಸ್ಕ ಮಹನೀಯರು ಬರಿಯ ಕೆಲಸಗಾರರು ಮಾತ್ರವಾಗಿರಲಿಲ್ಲ. ಸಸ್ಯಶಾಸ್ತ್ರ ಪ್ರಾಣಿಶಾಸ್ತ್ರಗಳಲ್ಲಿ ಪಂಡಿತರಾಗಿದ್ದರು. ಸಸ್ಯಗಳ ಚಿತ್ರಗಳನ್ನು ತಯಾರಿಸು ವುದಕ್ಕಿಂತ ಮುಂಚೆ ಪ್ರಾಣಿಗಳ ಬೊಂಬೆಗಳನ್ನು ತಯಾರಿಸಿ ಹೆಸರುವಾಸಿ ಯಾಗಿದ್ದರು.

ಹಾರ್ವರ್ಡ್‌ದ ಪ್ರೊಫೆಸರ್ **ಜಾರ್ಜ್ ಲಿಂಕನ್ ಗೋಡೆಲ್** ಎಂಬು ವರು ೧೮೮೬ರಲ್ಲಿ ಈ ತೆರನಾದ ಸಂಗ್ರಹಾಲಯವನ್ನು ತೆರೆಯಲು ನಿರ್ಧರಿ ಸಿದರು. ೧೮೮೦ರಲ್ಲಿ ಕೆಲವು ಮಟ್ಟಿಗೆ ಹಣ ಶೇಖರಿಸಿ ಪ್ರಾಣಿಶಾಸ್ತ್ರದ ಸಂಗ್ರ ಹಾಲಯದ ನಿವೇಶನದಲ್ಲಿಯೇ ಸಣ್ಣದಾಗಿ ಸಸ್ಯಗಳನ್ನು ಪ್ರದರ್ಶಿಸಿದರು.

ಗಾಜಿನಲ್ಲಿ ತಯಾರಿಸಿದ ಪ್ರಾಣಿಗಳ ನೈಜತೆಯನ್ನು ಕಂಡು. ಸಸ್ಯಗಳಲ್ಲಿಯೂ ಏಕಾಗಕೂಡದೆಂದು ತರ್ಕಿಸಿ ಗಾಜಿನ ಪ್ರಾಣಿಗಳನ್ನು ತಯಾರಿಸಿದ ಮಹನೀಯರನ್ನು ಕಂಡು ಹಿಡಿಯಲಾಗಿ ಅವರು ಜರ್ಮನಿ ದೇಶದ **ಡ್ರೆಸಡೆನ್** ನಗರದ ಲಿಯೋಪೊಲ್ಡ್ ಮತ್ತು ರುಡಾಲ್ಫ್ ಬ್ಲಾಸ್ಕ ಎಂದು ತಿಳಿಯಿತು. ನಾನು ಈ ಸಸ್ಯಗಳ ಮಾದರಿಯನ್ನು ನೋಡಿದಾಗ ಅವು ಗಾಜಿನವೆಂದು ನಂಬಲಾರದೆ ಹೋದೆ. ಕಣ್ಣಿಗೆ ಎಷ್ಟು ಅಂದವೋ ಅಷ್ಟು ಜ್ಞಾನಪ್ರಚೋದಕವಾಗಿಯೂ ಇವೆ.

ಪ್ರೊ|| ಗೋಡೆಲ್ಲರು ೧೮೮೬ರಲ್ಲಿ ಜರ್ಮನಿಗೆ ತೆರಳಿ, ಬ್ಲಾಸ್ಕ ಮಹನೀಯರನ್ನು ಕಂಡು ಸಸ್ಯಗಳ ಮಾದರಿ ತಯಾರಿಸುವ ವಿಷಯ ಚರ್ಚಿಸಿದರು. ಲಿಯೋಪಾಲ್ಡರು, ಪ್ರಾಣಿಗಳ ಮಾದರಿಯನ್ನು ಮಾಡುವುದರಲ್ಲಿ ಎತ್ತಿದ ಕೈಯಾಗಿದ್ದರು. ಸಸ್ಯಗಳ ಮಾದರಿ, ಜಯಪ್ರದವಾಗುತ್ತದೋ ಇಲ್ಲವೋ ಎಂಬ ಹೆದರಿಕೆಯಿದ್ದರೂ ಕೊನೆಗೆ ಅವನ್ನು ತಯಾರಿಸಲು ಒಪ್ಪಿಕೊಂಡರು.

ಲಿಯೋಪಾಲ್ಡರು, ೧೮೮೭ರಲ್ಲಿ ಕೆಲವು ಮಾದರಿಗಳನ್ನು ತಯಾರಿಸಿ ಅಮೇರಿಕಕ್ಕೆ ಕಳುಹಿಸಿದರು. ದುರದೃಷ್ಟವಶಾತ್ ನ್ಯೂಯಾರ್ಕಿನ ತೆರಿಗೆಯ ಕಚೇರಿಯಲ್ಲಿ ಅವೆಲ್ಲವೂ ಕೆಟ್ಟುಹೋದುವು. ಅಂಥಹವುಗಳನ್ನೇ ಹಾರ್ವರ್ಡಿಗೆ ತೆಗೆದುಕೊಂಡು ಹೋಗಿ ಪ್ರದರ್ಶಿಸಲಾಯಿತು. ಆದರೂ ಅವುಗಳ, ಅಂದ ಚೆಂದ, ಸ್ಪಷ್ಟತೆ, ಯೋಗ್ಯತೆ, ಒಡೆದ ಕನ್ನಡಿಯಲ್ಲಿಯೇ ಕಂಡುಬಂದುವು. ಇಂತಹ ಸಸ್ಯಗಳ ಮಾದರಿಯನ್ನು ಬಹು ದೊಡ್ಡ ಪ್ರಮಾಣದಲ್ಲಿ ತಯಾರಿಸಬೇಕೆಂದು ಅಭಿಪ್ರಾಯ ಬಂದಾಗ, ಕೇಂಬ್ರಿಡ್ಜ್‌ದ **ಶ್ರೀಮತಿ ಎಲಿಜಿಬತ್ ಸಿ. ವೇರ್** ಮತ್ತು ಆಕೆಯ ಮಗಳು **ಕುಮಾರಿ ಮೇರಿ ಲಿವೇರ್** ಹಣ ಸಹಾಯ ಮಾಡಲು ಮುಂದೆ ಬಂದರು. ಅವರ ಉದಾರ ದಾನದ ಫಲವೇ ಇಂದಿನ ಸಂಗ್ರಹಾಲಯ.

ಬಣ್ಣದ ಗಾಜಿನಲ್ಲಿ ಸಸ್ಯಗಳ ಮಾದರಿಯನ್ನು ತಯಾರಿಸುವ ಕಲೆಯನ್ನು ಕಂಡುಹಿಡಿದ ಲಿಯೋಪಾಲ್ಡ್ ಬ್ಲಾಸ್ಕರು ೧೮೯೫ನೆಯ ಇಸ್ವಿ ಮೇ

# ಗಾಜಿನ ಸಸ್ಯಗಳ ವಸ್ತು ಪ್ರದರ್ಶನಾಲಯ

೨೭ನೆಯ ತಾರೀಖು ಉತ್ತರ ಬೋಹಿಮಿಯಾದ ಆಚಿಯಾ ಎಂಬ ಹಳ್ಳಿಯಲ್ಲಿ ಜನಿಸಿದರು. ಇವರ ತಂದೆ ಜೋಸೆಫ್ ಬ್ಲಾಸ್ಕ ಎಂಬುವರು ವಿದ್ಯುಚ್ಛಕ್ತಿಯ ಮತ್ತು ಗಾಜಿನ ಕಾರಖಾನೆಯಲ್ಲಿ ಯಂತ್ರಕುಶಲರಾಗಿದ್ದರು. ಈ ಮನೆತನದ ಜೀವನವೇ ಈ ತೆರನಾದ ಕಲೆಗೆ ಹೆಸರುವಾಸಿಯಾಗಿತ್ತು. ಲಿಯೋಪಾಲ್ಡರು ಅಭ್ಯಾಸ ಮುಗಿಸಿ ಕೆಲಸ ಪ್ರಾರಂಭಿಸಿದ ನಂತರ ಗಾಜಿನ ಕಲೆಯಲ್ಲಿ ಉದ್ಯುಕ್ತರಾದರು. ಚಿನ್ನ, ಮತ್ತು ಇತರ ಲೋಹದ ಕೆಲಸವನ್ನೂ ಮಾಡುತ್ತಿದ್ದರು. ಮುಖ್ಯವಾಗಿ ಗಾಜಿನ ಕಲ್ಲುಗಳನ್ನು ಕೊರೆಯುವುದೇ ಅವರ ಕೆಲಸ ಆಗಿತ್ತು.

೧೮೫೩ರಲ್ಲಿ ಅಮೇರಿಕದ ಸಂಯುಕ್ತ ಸಂಸ್ಥಾನಕ್ಕೆ ತೆರಳಿ, ಅಲ್ಲಿಯ ಸಸ್ಯ ಭಾಂಡಾಗಾರವನ್ನು ನೋಡಿ ಅವುಗಳನ್ನು ಗಾಜಿನಲ್ಲಿ ಕೊರೆದು ಡ್ರೆಸ್ಡನ್ ನಗರದ ಸಂಗ್ರಹಾಲಯದಲ್ಲಿ ಪ್ರದರ್ಶಿಸಿದಾಗ ಜನ ಅವನ್ನು ಮೆಚ್ಚಿದರು. ಈ ಕಲೆ ಪ್ರಸಿದ್ಧಿಯಾಗುತ್ತ ಬಂದ ಹಾಗೆ, ಅದು ಕೇವಲ ಇಬ್ಬರ ಸೊತ್ತೇ ಆಯಿತು. ತಂದೆ ಮಗ ಇಬ್ಬರೇ ಅದರ ಸರ್ವಾಧಿಕಾರಿಯಾದರು.

ಲಿಯೋಪಾಲ್ಡನ ಒಬ್ಬನೇ ಮಗ ರುಡಾಲ್ಫ್. ಈತ ಹುಟ್ಟಿದ್ದು ೧೮೫೭ನೆಯ ಜೂನ್ ೧೭ರಲ್ಲಿ. ಇವನು ಹೆಚ್ಚು ಜ್ಞಾನ ಪಡೆಯಲು ಅಮೇರಿಕಕ್ಕೆ ತೆರಳಿದನು. ಬಣ್ಣಗಳ ವಿಚಾರದಲ್ಲಿ ಪರಿಶ್ರಮ ಹೊಂದಿ, ಅನೇಕ ಹೊಸ ಸಸ್ಯಗಳ ಮತ್ತು ಹೂವುಗಳನ್ನು ಚಿತ್ರಿಸಿಕೊಂಡು ಜಮೇಕ, ಪೆಸಿಫಿಕ್ ತೀರ, ದಕ್ಷಿಣ ಅಮೇರಿಕಗಳಲ್ಲಿ ಪ್ರವಾಸ ಮಾಡಿದನು. ವರ್ಜಿನಿಯಾದಲ್ಲಿ ಕೆಲವು ವಸ್ತುಗಳನ್ನು ಸಂಗ್ರಹಿಸುತ್ತಿರುವಾಗ ತಂದೆಯ ಮರಣ ವಾರ್ತೆಯನ್ನು ಕೇಳಿ ಜರ್ಮನಿಗೆ ಹಿಂತಿರುಗಿದನು.

ಈ ಸಂಗ್ರಹಾಲಯದಲ್ಲಿ ೧೬೮ ವಿವಿಧ ಜಾತಿಯ, ಅಂತರ್ಜಾತೀಯ ಸಸ್ಯಗಳಿವೆ. ಹೂವಿನ ಛಾಯಾ ರೇಖೆಗಳದೆಷ್ಟೋ! ಸಸ್ಯಗಳಿಗೂ ಜೀವವಿದೆಯೆಂದು ಭಾರತೀಯ ವಿಜ್ಞಾನಿಗಳಾದ **ಜಗದೀಶಚಂದ್ರಬೋಸರು** ತೋರಿಸಿಕೊಟ್ಟಿದ್ದಾರಲ್ಲಾ! ಆ ಜೀವಕಳೆ ಇಲ್ಲಿ ತುಂಬಿ ಬಂದಿದೆ. ೧೮೯೩ರಲ್ಲಿ

ತಂದೆ ಲಿಯೋಪಾಲ್ಡನು ತೀರಿಕೊಂಡನಂತರ ರುಡಾಲ್ಫನು ೧೯೩೮ರವರೆಗೆ ಒಂಟಿಯಾಗಿ ಕೆಲಸ ಮಾಡಿದ. ಫಂಗಸ್ ಎಂಬ ರೋಗದ ಪರಿಣಾಮವಾಗಿ ಹುಟ್ಟಿದ ರೋಸಸ್ ಹಣ್ಣುಗಳ ಜಾತಿಯ ಗಿಡಗಳ ಚಿತ್ರವೇ ರುಡಾಲ್ಫನ ಕೊನೆಯ ಚಿತ್ರವಾಯಿತು. ರುಡಾಲ್ಫನು ೧೯೩೯ನೆಯ ಇಸ್ವಿ ಮೇ ೧ನೆಯ ತಾರೀಖು ತೀರಿಕೊಂಡನು.

ಲಿಯೋಪಾಲ್ಡ್ ಮತ್ತು ರುಡಾಲ್ಫರು ತಯಾರಿಸಿದ ಸಸ್ಯಗಳ ಮತ್ತು ಹೂಗಳ ಮಾದರಿ ಎಲ್ಲವೂ ಹಾರ್ವರ್ಡ್ ವಿಶ್ವವಿದ್ಯಾನಿಲಯದ ಸಂಗ್ರಹಾಲಯಕ್ಕೆ ಬಂದಿವೆ. ಪ್ರಪಂಚದ ಇನ್ನಾವ ಸ್ಥಳದಲ್ಲಿಯೂ ಈ ತೆರನಾದ ಗಾಜಿನ ಸಸ್ಯಗಳ ಮಾದರಿ ಸಿಕ್ಕಲಾರದು. ೧೮೮೬ನೆಯ ಇಸ್ವಿಯಲ್ಲಿ ಹಾರ್ವರ್ಡ್ ವಿಶ್ವವಿದ್ಯಾಲಯದಲ್ಲಿ ಓದುತ್ತಿದ್ದ **ಡಾ|| ಚಾರ್ಲ್ಸ್ ಇಲಿಯಟ್ ವೇರ್** ಮತ್ತು ಮಗಳು ಕುಮಾರಿ ಮೇರಿ ಲಿ ವೇರ್ ಉದಾರದ ದಾನದ ಫಲ. ಈ ಅದ್ಭುತವಾದ ಮತ್ತು ಚಮತ್ಕಾರವಾದ ವಸ್ತು ಸಂಗ್ರಹಾಲಯ.

ನಾನು ಬೋಸ್ಟನ್ನಿಗೆ ಹೋದಾಗ ಆಗತಾನೆ ಚಳಿಗಾಲ ಮರೆಯಾಗಿ ವಸಂತಮಾಸ ತಲೆದೋರಿತ್ತು. ಜನಗಳು ವಿಹಾರಾರ್ಥವಾಗಿ ಬೋಸ್ಟನ್ನಿಗೆ ಬಂದುಹೋಗುತ್ತಿದ್ದರು. ಸಂಗ್ರಹಾಲಯದ ಹಾಜರಿ ಪುಸ್ತಕದಲ್ಲಿ ನನ್ನ ರುಜು ಬಿದ್ದಾಗ ಆ ದಿನ ಸಂಗ್ರಹಾಲಯವನ್ನು ಸಂದರ್ಶಿಸಿದವರ ಸಂಖ್ಯೆ ೫೦೫. ನಾನು ೫೦೬ನೆಯವನಾಗಿದ್ದೆ.

ಬೋಸ್ಟನ್, ನ್ಯೂಯಾರ್ಕಿನಿಂದ ರೈಲ್ವೆಯಲ್ಲಿ ೫ ಘಂಟೆಗಳ ಪ್ರವಾಸ. ಈ ದೇಶದಲ್ಲಿ ರೈಲ್ವೆ ಪ್ರಯಾಣತುಂಬಾ ದುಬಾರಿ. ರೈಲ್ವೆ ದರ ನ್ಯೂಯಾರ್ಕ್ ನಿಂದ ಬೋಸ್ಟನ್ನಿಗೆ ೬ ಡಾಲರು ೬೫ ಸೇಂಟ್ಸ್(ಸುಮಾರು ೨೦ ರೂ.) ಬಸ್ಸಿನ ಪ್ರಯಾಣ ೯ ಘಂಟೆ ತೆಗೆದುಕೊಳ್ಳುವುದು. ದರ ೩ ಡಾಲರು ೫೦ ಸೇಂಟ್ಸ್. ಬೋಸ್ಟನ್‌ನಲ್ಲಿ ಮೂವರು ಭಾರತೀಯರು ನೆಲಸಿದ್ದಾರೆ. **ಡಾ|| ಎಡ್ಡಿ ಆಶೀರ್ವಾದಂ**ರವರು ಬೋಸ್ಟನ್ ವಿಶ್ವವಿದ್ಯಾಲಯದಲ್ಲಿ ರಾಜನೀತಿಯ ಅಧ್ಯಾಪಕರಾಗಿದ್ದರು. ವಿವೇಕಾನಂದರು ಜಯಭೇರಿ ಹೊಡೆದು ರಾಮ

ಕೃಷ್ಣ ಮಠವನ್ನು ಸ್ಥಾಪಿಸಿದ್ದಾರೆ. ಅದರ ಪೂಜಾರಿಯಾಗಿ ಇಂದು **ಸ್ವಾಮಿ ಅಖಂಡಾನಂದರು** ಅಮೇರಿಕನ್ನರಿಗೆ ಹಿಂದು ಧರ್ಮದ ಸಾರವನ್ನು ತಿಳಿಸುತ್ತಿದ್ದಾರೆ. ಮೂರನೆಯವರು **ಡಾ|| ಆನಂದಕುಮಾರ ಸ್ವಾಮಿಯವರು.** ಈ ದೇಶದಲ್ಲಿ ೩೫ ವರ್ಷಗಳಿಂದ ನೆಲೆಸಿದ್ದಾರೆ. ಬೋಸ್ಟನ್ ಪುಸ್ತಕ ಭಂಡಾರದ ಕ್ಯೂರೇಟರರಾಗಿ ಪ್ರಸಿದ್ಧಿ ಪಡೆದಿದ್ದಾರೆ. ಅನೇಕ ಪುಸ್ತಕಗಳನ್ನು ಬರೆದಿದ್ದಾರೆ. ನಾನು ಡಾ|| ಆನಂದ ಕುಮಾರಸ್ವಾಮಿಯವರನ್ನು ಅವರ ಮನೆಯಲ್ಲಿ ನೋಡಿದೆ. ಅವರು ನನ್ನನ್ನು ಅತ್ಯಾದರದಿಂದ ಸ್ವಾಗತಿಸಿ ನನ್ನ ಕ್ಷೇಮ ಸಮಾಚಾರವನ್ನು ವಿಚಾರಿಸಿದರು. ನಾನು ಮೈಸೂರಿನವರೆಂದಾಗ, **ಶ್ರೀ ಡಿ. ವಿ. ಗುಂಡಪ್ಪ**ನವರನ್ನು ವಿಚಾರಿಸಿದರು. ಶ್ರೀ ಗುಂಡಪ್ಪನವರ ಬಗ್ಗೆ ತುಂಬಾ ಗೌರವವನ್ನು ಸೂಚಿಸಿದರು. ಅವರ ಬಗ್ಗೆ ಅಭಿಮಾನದ ಮಾತುಗಳನ್ನಾಡಿದರು. ಶ್ರೀ ಗುಂಡಪ್ಪನವರ ಬಗ್ಗೆ ತಮಗಿದ್ದ ಅಪಾರವಾದ ಭಕ್ತಿ ವಿಶ್ವಾಸಗಳನ್ನು ತೋರ್ಪಡಿಸಿದರು. ನಾನು ಶ್ರೀ ಗುಂಡಪ್ಪನವರ ನಾಡಿನಿಂದಲೇ ಬಂದವನೆಂದು ತಿಳಿದಾಗ ಅವರ ಆನಂದ ಉಕ್ಕೇರಿತು. ಅಮೇರಿಕದ ವಿದ್ಯಾರ್ಥಿ ಜೀವನದ ಬಗ್ಗೆ ನನಗೆ ಕೆಲವು ಸಲಹೆಗಳನ್ನಿತ್ತು, ಆಶೀರ್ವದಿಸಿ ನನ್ನನ್ನು ಕಳುಹಿಸಿಕೊಟ್ಟರು.

ಬೋಸ್ಟನ್ ನಗರದ ಸುಂದರ ದೃಶ್ಯಗಳನ್ನು ನೋಡಿಕೊಂಡ ನ್ಯೂಯಾರ್ಕಿಗೆ ಬಂದಾಗ, ಮುಂದೇನು ಮಾಡಬೇಕೆಂಬ ಆಲೋಚನೆಯು ತಲೆಯನ್ನು ತಿನ್ನಲಿಕ್ಕೆ ಹತ್ತಿತು. ಸಿರಾಕ್ಯೂಸ್ ವಿಶ್ವವಿದ್ಯಾನಿಲಯಕ್ಕಂತೂ ಹೋಗುವಹಾಗಿರಲಿಲ್ಲ. ಧೈರ್ಯಗೆಡದೆ, ಪತ್ರಿಕೋದ್ಯಮವನ್ನು ಕಲಿಸುವ ನಾನಾ ವಿಶ್ವವಿದ್ಯಾನಿಲಯಗಳಿಗೆ, ಸೀಟಿಗಾಗಿ ಅರ್ಜಿ ಹಾಕಿದೆನು. ಮಿಸ್ಸೋರಿ ವಿಶ್ವವಿದ್ಯಾನಿಲಯದ ಪತ್ರಿಕೋದ್ಯಮದ ಕಾಲೇಜು ಬಹಳ ಹಳೆಯದೆಂದೂ, ಒಳ್ಳೆಯ ಹೆಸರುವಾಸಿಯಾದ ಕಾಲೇಜೆಂದೂ ಪ್ರತೀತಿ ಇತ್ತು. ಅಲ್ಲಿ ನನಗೆ ಸೀಟು ಸಿಕ್ಕಿತು. ಪತ್ರಿಕೋದ್ಯಮ ಕಾಲೇಜಿನ ಮುಖ್ಯರಾದ **ಡಾ|| ಫ್ರ್ಯಾಂಕ್ ಲ್ಯೂಥರ್ ಮಾಟ್** ಎನ್ನುವವರು, ನನಗೊಂದು ಕಾಗ

ದವನ್ನು ಬರೆದು ಕಾಲೇಜಿಗೆ ಸೇರಲು ಅನುಮತಿ ಇತ್ತರು. ನನ್ನ ಆನಂದಕ್ಕೆ ಪಾರವೇ ಇರಲಿಲ್ಲ. ಶ್ರೀ ಕೊಣ್ಣೂರರೂ ಕೂಡ ಹರ್ಷದಿಂದ ನನ್ನನ್ನು ಕಾಲೇಜಿಗೆ ಕಳುಹಿಸಿಕೊಡುವ ಸಂಭ್ರಮ ಮಾಡಿದರು. ಸೆಂಟ್‌ಲೂಯಿಗೆ ೧೨೫ ಮೈಲಿ ಇರುವುದು ಕೊಲಂಬಿಯಾ ನಗರ. ಅಲ್ಲಿಯೇ ಮಿಸ್ಸೋರಿ ವಿಶ್ವವಿದ್ಯಾನಿಲಯವಿರುವುದು. ನ್ಯೂಯಾರ್ಕಿನಿಂದ ಸುಮಾರು ೧೫೦೦ ಮೈಲಿ ದೂರ.

ಘಟ್ಟಿ ಮನಸ್ಸು ಮಾಡಿ, ಕೊಣ್ಣೂರರನ್ನು ನಮಸ್ಕರಿಸಿ, ಕೊಲಂಬಿಯಾಭಿಮುಖವಾಗಿ ಹೊರಟೆನು. ಕೊಣ್ಣೂರರು ನನ್ನನ್ನು ಬಿಟ್ಟಿರಲು ತುಂಬಾ ವ್ಯಸನಪಟ್ಟರು. ಪುನಃ ನಾನೆಲ್ಲಿ ವಿಕಾರನಾಗುವೆನೋ ಎಂದು ಅವರು ಹೆದರಿದ್ದರು. ನನ್ನನ್ನು ಬೀಳ್ಕೊಡುವಾಗ ಅವರು ಕೆಲವು ಸಂಸ್ಕೃತದ ಶ್ಲೋಕಗಳನ್ನು ನುಡಿದು ಹರಸಿ ಕಳುಹಿಸಿದರು. ಕಣ್ವ ಋಷಿಗಳು ಶಕುಂತಲೆಯನ್ನು ದುಷ್ಯಂತಮಹಾರಾಜನ ಮನೆಗೆ ಕಳುಹಿಸಿಕೊಡುವ ದೃಶ್ಯವನ್ನು ನೆನಸಿಕೊಂಡರು.

ಎರಡು ದಿನಗಳ ಪ್ರಯಾಣದ ನಂತರ ಕೊಲಂಬಿಯಾ ನಗರವನ್ನು ತಲ್ಪಿದೆನು. ಭಾರತೀಯ ವಿದ್ಯಾರ್ಥಿಗಳಾದ **ಶ್ರೀ ಜ್ಞಾನೇಂದ್ರ ಪ್ರಸಾದ್ ಜೈನ್**, ಎಂಬುವರು ನನ್ನನ್ನು ಸ್ವಾಗತಿಸಿದರು. ಅವರು ತಂಗಿದ್ದ ಹೊಟೇಲಿನಲ್ಲಿಯೇ ನಾನೂ ಹೋಗಿ ಬಿಡಾರ ಮಾಡಿದೆನು. ಬಿಹಾರಿನ **ಶ್ರೀ ಆರ್. ಎಸ್. ಸಿಂಗ್** ಎಂಬುವರೊಬ್ಬರಿದ್ದರು. ನಾವೆಲ್ಲ ಪತ್ರಿಕೋದ್ಯಮ ಓದುವವರೇ ಇದ್ದೆವು. ಮರುದಿನ ಕಾಲೇಜಿಗೆ ಹೋಗಿ ಸೇರಿದೆನು. ಡೀನ್ ಮಾಟರು ನನ್ನನ್ನು ಆದರದಿಂದ ಬರಮಾಡಿಕೊಂಡು ಕಾಲೇಜಿಗೆ ಸೇರಿಸಿದರು. ಪಠ್ಯಪುಸ್ತಕಗಳು, ವಿಷಯಗಳು, ಮುಂತಾದುವುಗಳ ಬಗ್ಗೆ ಮಾಹಿತಿ ಕೊಟ್ಟರು. ವಿಶ್ವವಿದ್ಯಾನಿಲಯ ಜೀವನದ ಬಗ್ಗೆ ಕೆಲವು ಬುದ್ಧಿವಾದವನ್ನಿತ್ತು ಅಭ್ಯಾಸವನ್ನು ಚೆನ್ನಾಗಿ ಮಾಡಬೇಕೆಂದು ಹೇಳಿದರು.

---

# ರಸ ನಿಮಿಷ

ಮಿಸ್ಸೋರಿ ವಿಶ್ವವಿದ್ಯಾನಿಲಯವನ್ನು ಸೇರಿ ಅಭ್ಯಾಸ ಪ್ರಾರಂಭ ಮಾಡಿದ ಮೇಲೆ ಎಲ್ಲವೂ ಸರಿಹೋಗುತ್ತದೆಂದು ತಿಳಿದಿದ್ದೆನು. ಆದರೆ ನನ್ನ ಎಣಿಕೆಯು ತಪ್ಪಾಗಿದ್ದಿತು. ವಿಶ್ವವಿದ್ಯಾನಿಲಯ ಸೇರಿ ಕೇವಲ ಏಳು ದಿನಗಳಾಗಿರಬಹುದು. ಮನಸ್ಸು ಚಂಚಲ ಸ್ಥಿತಿಗೆ ಬಂದು, ಹೊಯ್ದಾಡಲಾರಂಭಿಸಿತು. ಸಿರಾಕ್ಯೂಸ್ ವಿಶ್ವವಿದ್ಯಾನಿಲಯದಲ್ಲಿ ನನ್ನ ತಲೆಯನ್ನು ತಿಂದ ಹುಚ್ಚು ಅಭಿಪ್ರಾಯಗಳೇ ಇಲ್ಲೂ ಬರಲಾರಂಭಿಸಿದವು. ಇಲ್ಲಿಯ ವಿದ್ಯಾಭ್ಯಾಸ ಸರಿಯಿಲ್ಲ, ಭಾರತಕ್ಕೆ ಮರಳಬೇಕು, ಎಂಬುದೊಂದೇ ವಾದ ಮನಸ್ಸಿನಲ್ಲಿ ಬರತೊಡಗಿತು.

ಮೂರು ತಿಂಗಳು ನ್ಯೂಯಾರ್ಕಿನಲ್ಲಿದ್ದು ಅಮೇರಿಕದ ಜೀವನವನ್ನು ಹೊಂದಿಸಿಕೊಂಡದ್ದು ಯಾವುದಕ್ಕೂ ಪ್ರಯೋಜನಕ್ಕೆ ಬರಲಿಲ್ಲ. ಶ್ರೀ ಕೊಣ್ಣೂರರ ಕಣ್ವಾಶ್ರಮದ ಆರೈಕೆ ಬರೀ ವ್ಯರ್ಥವಾಯಿತು. ಮನಸ್ಸಿನಲ್ಲಿ ಹೊಕ್ಕಿದ್ದ ಮಂಗವು ಪುನಃ ಚೆಲ್ಲಾಟವಾಡಲು ಪ್ರಾರಂಭಿಸಿತು. ಮಿಸ್ಸೋರಿಯಲ್ಲಿ ಕನ್ನಡ ಬರುವ ಶ್ರೀ **ಜೆ. ಡಿ. ಸಂಪತ್ಕುಮಾರನ್** ಎಂಬುವರಿದ್ದರು. ಪತ್ರಿಕೋದ್ಯಮವನ್ನೇ ಅಭ್ಯಾಸಕ್ಕಾಗಿ ತೆಗೆದುಕೊಂಡ ಭಾರತೀಯ ಗೆಳೆಯರಿದ್ದರು. ಇಷ್ಟಾದರೂ ನನ್ನ ಮನಸ್ಸು ಮಾತ್ರ ತನ್ನ ದಾರಿಯನ್ನೇ ಹಿಡಿಯಿತು. ಸರಿ, ಭಾರತಕ್ಕೆ ಹಿಂತಿರುಗಬೇಕು. ಯಾರಿಗೂ ತಿಳಿಸದೆ ಒಂದು ಸಂಜೆ ಕೊಲಂಬಿಯಾ ಬಿಟ್ಟೆ. ಎಲ್ಲಿಗೆ ?

ಕೊಲಂಬಿಯಾದಿಂದ ಹೊರಟೆ ನ್ಯೂಯಾರ್ಕಿಗೆ. ಈ ಸಲ ಯಾರ ಬಳಿಯಲ್ಲೂ ಇಳಿಯಕೂಡದೆಂದು ನಿರ್ಧರಿಸಿದೆ. ಅವರೆಲ್ಲಾದರೂ ಪುನಃ ನನ್ನ ಮನಸ್ಸನ್ನು ಪರಿವರ್ತಿಸಿ ಅಮೇರಿಕದಲ್ಲಿರಿಸಿಕೊಂಡಾರೆಂದು ನ್ಯೂಯಾರ್ಕಿನ ವೈ. ಎಂ. ಸಿ. ಎ. ಭವನದಲ್ಲಿ ತಂಗಿದೆ. ಈ ಸಲ ರಾಮಕೃಷ್ಣಾಶ್ರಮದ ಸ್ವಾಮಿಗಳನ್ನೂ ನೋಡಲಿಲ್ಲ. ಕೊಣ್ಣೂರರನ್ನೂ ಕಾಣಲಿಲ್ಲ. ಕಂಡರೆಲ್ಲಿ ಪುನಃ ಛೀಮಾರಿ ಹಾಕುತ್ತಾರೋ, ಎಂದು.

ವೈ. ಎಂ. ಸಿ. ಎ.ದಲ್ಲಿ ನನಗೆ ಗೆಳೆಯನೊಬ್ಬ ಸಿಕ್ಕಿದ. **ಶ್ರೀ ವಿಶ್ವನಾಥ ತ್ರಿಪಾಟಿ** ಎಂದು. ಆತನಿಗೆ **ಕ್ಯಾನ್‌ಸಸ್ ಸಿಟಿ** ಕಾಲೇಜಿನಲ್ಲಿ ಇಂಜಿನಿಯರಿಂಗ್ ಓದಲು ಪ್ರವೇಶ ಸಿಕ್ಕಿತ್ತು. ವಿಮಾನದಲ್ಲಿ ನ್ಯೂಯಾರ್ಕಿಗೆ ಬಂದವ, ಮೂರು ದಿನಗಳಲ್ಲಿ ಅಮೇರಿಕದ ಜೀವನದಲ್ಲಿ ಬೇಸರ ಬಂದು ಭಾರತಕ್ಕೆ ಹೊರಡಲು ಆಗಲೇ ವಿಮಾನದಲ್ಲಿ ಟಿಕೆಟ್ಟು ಪಡೆದಿದ್ದ. ನನಗೆ ಆತನ ಪರಿಚಯವಾಯಿತು. ಇಬ್ಬರೂ **ಸಹಪಾಟಿ**ಗಳಾದೆವು. ನಾನೂ ವಿಮಾನದಲ್ಲೇಕೆ ಏರಿ ಹೋಗಬಾರದೆಂದು ಯೋಚಿಸಿದೆನು. ಆದರೆ ಆಗತಾನೆ ಅಲ್ಲಿ ವಿಮಾನ ಅನಾಹುತವೊಂದಾಗಿತ್ತು. ಜೀವದ ಮೇಲಿನ ಆಸೆಯಿದ್ದ ನಾನು, ಎಷ್ಟೇ ಮಾನಸಿಕ ತೊಂದರೆಯಾದರೂ ಹಡಗಿನಲ್ಲಿಯೇ ಹೋಗಬೇಕೆಂದು ನಿರ್ಧರಿಸಿದೆನು. ವಿಶ್ವನಾಥ ತ್ರಿಪಾಟಿಯ ವಿಮಾನವು ಜೂನ್ ೧೯ನೇ ತಾರೀಖು ಭಾರತಕ್ಕೆ ಹೊರಟೇ ಬಿಟ್ಟಿತು. ಆಗ ನನ್ನಲ್ಲಿ ಭಾರತಕ್ಕೆ ಹೋಗುವ ಉದ್ವೇಗವೂ ಇನ್ನೂ ಜಾಸ್ತಿಯಾಯಿತು.

ನ್ಯೂಯಾರ್ಕಿನಲ್ಲಿ ಪರಿಚಯ ಮಾಡಿಕೊಂಡಿದ್ದ ಶ್ರೀ ಮೋಡಕ್ ಮತ್ತು ಸೇಕಾನ್‌ರವರನ್ನು ಹೋಗಿ ನೋಡಿದೆನು. ಅವರೆಷ್ಟು ಬುದ್ಧಿ ಹೇಳಿದರೂ ನಾನು ಕೇಳಲಿಲ್ಲ. ಕನ್ನಡದ ಶ್ರೀ **ಕೊಕಟನೂರರು**, ಕನ್ನಡದಲ್ಲೇ ಹೇಳಿದರು. ಆದರೂ ನನ್ನ ದಿವ್ಯ ಮನಸ್ಸು ಬದಲಾಯಿಸಲೇ ಇಲ್ಲ.

ಅಮೇರಿಕನ್ ಎಕ್ಸ್‌ಪ್ರೆಸ್ ಕಂಪೆನಿಯ ಮುಖಾಂತರ ಇಸ್ಥಾಮಿಯನ್ ಸ್ಟೀಮ್‌ಷಿಪ್ ಕಂಪೆನಿಯ **ವಿಲಿಯಂ ಟಿಲಿಂಗ್‌ಡನ್** ಎಂಬ ಹಡಗನ್ನೇರಿ ಜೂನ್ ೨೫ನೇ ತಾರೀಖು ನ್ಯೂಯಾರ್ಕ್ ಬಿಡುವುದೆಂದು ಗೊತ್ತಾಯಿತು.

ನಾನು ಬಂದ ಸಮಾಚಾರ ಶ್ರೀ ಕೊಣ್ಣೂರರಿಗೆ ಹೇಗೋ ಗೊತ್ತಾಯಿತು. ಅವರು ನನ್ನನ್ನು ಹುಡುಕಿಕೊಂಡು ಬಂದರು. ನನ್ನ ಮುಖ ಆಗ ನೋಡುವಂತಿತ್ತು. ನಾಚಿಕೆಯಿಂದ ತಲೆ ತಗ್ಗಿಸಿದೆನು. ಗಳಗಳನೆ ಅಳತೊಡಗಿದೆನು. ಎಲ್ಲವೂ ಮಾರಿಹೋಗಿತ್ತು. ಮರುದಿನ ನಾನು ಹಡಗನ್ನೇರಬೇಕಿತ್ತು. ಹಣವಿಲ್ಲದೆ ಕೀರ್ತಿಗಾಗಿ ಕಷ್ಟಪಡುತ್ತಿದ್ದ ಕೊಣ್ಣೂರರ ಧೃಡತೆ ನನ್ನಲ್ಲಿರಲಿಲ್ಲ.

## ರಸ ನಿಮಿಷ

ಜೂನ್ ೨೪ನೇ ತಾರೀಖು ಸಂಜೆ ೪ ಘಂಟೆಗೆ ಹಡಗನ್ನೇರಿದೆನು. ನನಗಾಗಿ ಬಂದಿದ್ದ ಎರಡು ಕಾಗದಗಳನ್ನು ಕೊಡಲು ಶ್ರೀ ಕೋಣ್ಣೂರರು ಹಡಗು ನಿಲ್ದಾಣಕ್ಕೆ ಬಂದಿದ್ದರು. ಹೆಮ್ಮೆಯಿಂದ ನನ್ನನ್ನು ಬೀಳ್ಕೊಡುವುದಕ್ಕಲ್ಲ. ಶ್ರೀ ರಂಗನಾಥ ರಾಮಚಂದ್ರ ದಿವಾಕರರು ಒಂದು ಕಾಗದ ಬರೆದಿದ್ದರು. ಇನ್ನೊಂದು ನನ್ನ ಗೆಳೆಯನಾದ ಶ್ರೀ ಶಾರದಾ ಪ್ರಸಾದ್ ಬರೆದಿದ್ದುದು. ಇಬ್ಬರೂ ನನ್ನನ್ನು ಹೊಗಳಿ, ನನ್ನ ಧೈರ್ಯವನ್ನು ಮೆಚ್ಚಿ, ನನ್ನ ಕೆಲಸದಲ್ಲಿ ಶುಭಾಶಯವನ್ನು ಕೋರಿದ್ದರು. ಎಂತಹ ಧೈರ್ಯ ನನ್ನದು! ಕಾಗದಗಳನ್ನು ಓದಿದೊಡನೆಯೇ ಹೃದಯಕ್ಕೆ ಭರ್ಜಿಯನ್ನು ಇರಿದಂತಾಯಿತು.

ಎರಡು ಕಾಗದಗಳನ್ನೂ ಪುನಃ ಪುನಃ ಓದಿದೆ. ಮನಸ್ಸಿಗೆ ಶಾಂತಿಯೇ ಬರಲೊಲ್ಲದು. ಹಡಗಿನಲ್ಲಿ ನನ್ನ ಕೋಣೆಯಲ್ಲಿ ಹಾಸಿಗೆಯ ಮೇಲೆ ಬಿದ್ದು ಹೊರಳಾಡತೊಡಗಿದೆ. ಸಾಯಂಕಾಲ ಆರು ಘಂಟೆಗೆ ಹಡಗಿನಲ್ಲಿ ಊಟಕ್ಕೆ ಬೆಲ್ಲು ಹೊಡೆಯಿತು. ಊಟದ ಶಾಸ್ತ್ರ ಮಾಡೋಣವೆಂದು ಅಡಿಗೆ ಮನೆಗೆ ಹೋದೆ. ಅಲ್ಲಿ ನಾನು ೧೦ ಭಾರತೀಯ ವಿದ್ಯಾರ್ಥಿಗಳನ್ನು ಕಂಡೆ. ಅವರೆಲ್ಲ ತಮ್ಮ ವಿದ್ಯಾಭ್ಯಾಸವನ್ನು ಮುಗಿಸಿ ಡಿಗ್ರಿ ಪಡೆದು ಸ್ವದೇಶಕ್ಕೆ ಸಂತೋಷದಿಂದ ಮರಳಲುದ್ಯುಕ್ತರಾದವರು. ಅವರಲ್ಲೊಬ್ಬರು, ನನ್ನನ್ನು ಯಾವ ವಿಷಯದಲ್ಲಿ ಡಿಗ್ರಿ ತೆಗೆದುಕೊಂಡಿರಿ, ಎಂದು ಕೇಳಿದಾಗ, ಮನಸ್ಸು ಅಲ್ಲಕಲ್ಲೋಲವಾಯಿತು. ಸಮಾಧಾನಕ್ಕೋಸ್ಕರ, ನಾನು ಪತ್ರಿಕೋದ್ಯಮಿ ಎಂದೂ, ಕೇವಲ ಪ್ರವಾಸದ ಅನುಭವಕ್ಕೋಸ್ಕರವಾಗಿ ಬಂದಿರುವೆನೆಂದೂ, ನಾನೇನೂ ಡಿಗ್ರಿ ತೆಗೆದುಕೊಳ್ಳುವ ಅವಶ್ಯಕತೆ ಇಲ್ಲವೆಂದೂ ಹೇಳಿ, ಅವರ ಪ್ರಶ್ನೆಗೆ ಉತ್ತರ ಕೊಟ್ಟೆನು. ಆದರೇನು? ನಿಜವಾದ ಉತ್ತರ ನನಗೇ ಗೊತ್ತಿತ್ತು. ಊಟದ ಶಾಸ್ತ್ರ ಮುಗಿಸಿಕೊಂಡು ಪುನಃ ನನ್ನ ಕೋಣೆಯೊಳಕ್ಕೆ ಹೋಗಿ ಮಲಗಿದೆನು. ನಿದ್ರೆ ಬರಲೊಲ್ಲದು. ಚಿಂತೆಯು ನನ್ನ ಮನಸ್ಸನ್ನು ಒಡೆದುಬಿಟ್ಟಿತು. ಘಟ್ಟಿಯಾಗಿ ಅಳುವುದಕ್ಕೆ ಪ್ರಾರಂಭಿಸಿದೆನು. ಭಾರತೀಯ ಸ್ನೇಹಿತರೆಲ್ಲರೂ ಬಂದು ನನ್ನನ್ನು ಸಂತೈಸಿದರು. ಅವರು ನನ್ನ

ಅಳುವಿನ ಕಾರಣ ತಿಳಿಯದಾದರು. ಪುನಃ ರಾತ್ರಿ ಎರಡು ಘಂಟೆಗೆ ಎಚ್ಚರಿಕೆಯಾಯಿತು. ಪುನಃ ಅದೇ ರೋದನ. ಮೂರು ಘಂಟೆ ಹೊತ್ತಿಗೆ ಮನಸ್ಸು ಸ್ತಿಮಿತಕ್ಕೆ ಬಂದಿತು. ವಿಷಘಳಿಗೆ ಕಳೆದು ರಸನಿಮಿಷ ಬರುವುದರ ಸಂಕೇತವೋ ಏನೋ. ಮನಸ್ಸು ಘಟ್ಟಿ ಮಾಡಿದೆನು. ಭಾರತಕ್ಕೆ ಹೇಡಿಯಂತೆ ಹಿಂದಿರುಗಕೂಡದೆಂದು ತೀರ್ಮಾನಿಸಿ, ಪುನಃ ಅಮೇರಿಕದಲ್ಲಿರಲು ಪ್ರಯತ್ನಿಸತೊಡಗಿದೆನು.

ಹಡಗಿನಿಂದ ಪಾರಾಗುವ ಬಗೆ ಹೇಗೆ? ನನ್ನ ಈ ಅವಸ್ಥೆಯಿಂದಾಗಿ ಬಲವಾದ ಹೊಟ್ಟೆನೋವು ಪ್ರಾರಂಭವಾಯಿತು. ತಡೆದುಕೊಳ್ಳಲು ಸಾಧ್ಯವಾಗಲಿಲ್ಲ. ಕಿರಿಚತೊಡಗಿದೆನು. ಹಡಗಿನ ಕ್ಯಾಪ್ಟನ್ನನು ಬಂದು ನನ್ನನ್ನು ವಿಚಾರಿಸಿದನು. ನನ್ನ ಅದೃಷ್ಟಕ್ಕೆ ಸರಿಯಾಗಿ ಈ ಹಡಗಿನಲ್ಲಿ ವೈದ್ಯರಿರಲಿಲ್ಲ. ವೈದ್ಯರಿಲ್ಲದೆ ನನ್ನಂತಹ ರೋಗಿಯನ್ನು ಕೊಂಡೊಯ್ಯುವ ಬಗೆ ಹೇಗೆ? ನನ್ನನ್ನು ಪರೀಕ್ಷೆಗಾಗಿ ಬೆಳಿಗ್ಗೆ ಇಸ್ಥಾಮಿಯನ್ ಹಡಗಿನ ಡಾಕ್ಟರರ ಕಛೇರಿಗೆ ಕಳುಹಿಸಿಕೊಟ್ಟರು. ಅಲ್ಲಿಯ ವೈದ್ಯರು ನನ್ನನ್ನು ಕೂಲಂಕಷವಾಗಿ ಪರೀಕ್ಷಿಸಿ, ನರದೌರ್ಬಲ್ಯದ ವಿನಾ ಮತ್ತೇನೂ ಇಲ್ಲವೆಂದರು. ಅವರು ನನ್ನನ್ನು ಆಂತರಿಕವಾಗಿ ಪ್ರಶ್ನಿಸಿದರು. ಅವರಲ್ಲಿ ನಾನು ನಡೆದ ವಿಚಾರವನ್ನೆಲ್ಲಾ ತಿಳಿಸಿ, ಹಡಗಿನಲ್ಲಿ ಪ್ರಯಾಣ ಮಾಡಲು ನನ್ನ ದೇಹಸ್ಥಿತಿ ಸರಿಇಲ್ಲವೆಂದು ಬರೆದುಕೊಡಿರಿ, ಎಂದು ಪ್ರಾರ್ಥಿಸಿದೆನು. ನಾನು ಅಮೇರಿಕದಲ್ಲಿ ಉಳಿಯುವ ಉದ್ದೇಶದಲ್ಲಿ ನಂಬಿಕೆ ಇಟ್ಟು ಅವರು ಹಾಗೇ ಬರೆದುಕೊಟ್ಟರು. ವೈದ್ಯರ ಸಲಹೆಯಂತೆ ನನ್ನನ್ನು ಹಡಗಿನಲ್ಲಿ ಕರೆದುಕೊಂಡು ಹೋಗಲು ಸಾಧ್ಯವಿಲ್ಲವೆಂದು ಕ್ಯಾಪ್ಟನ್ನನು ಹೇಳಿದನು. ನನಗೂ ಅದೇ ಬೇಕಿತ್ತು. ಹಡಗಿನಿಂದ ನನ್ನ ಸಾಮಾನುಗಳನ್ನೆಲ್ಲಾ ಕೆಳಗಿಳಿಸಿದರು. ಬೆಳಿಗ್ಗೆ ೧೦ ಘಂಟೆಗೆ ಹೊರಡಬೇಕಾಗಿದ್ದ ಹಡಗು ಸಾಯಂಕಾಲ ನಾಲ್ಕಕ್ಕೆ ನ್ಯೂಯಾರ್ಕ್ ದಂಡೆಯನ್ನು ಬಿಟ್ಟಿತು. ನಾನು ಪುನಃ ಸಾಮಾನುಗಳ ಸಮೇತವಾಗಿ ಶ್ರೀ ಕೊಣ್ಣೂರರಲ್ಲಿಗೆ ಬಂದೆನು. ಬಂದಾಗ, ಅವರು ನನ್ನನ್ನು ಒಮ್ಮೆಲೆ ಅಪ್ಪಿಕೊಂಡರು. ಅವರ ಆನಂದಕ್ಕೆ ಪಾರವೇ ಇರಲಿಲ್ಲ.

ಇನ್ನು ಸುಮ್ಮನೆ ಕುಳಿತುಕೊಳ್ಳುವುದು ತರವಲ್ಲವೆಂದು ಭಾವಿಸಿ, ತಕ್ಷಣ ಮಿಸ್ಸೋರಿ ವಿಶ್ವವಿದ್ಯಾನಿಲಯದ ಪ್ರೊ|| ಡೀನ್ ಮಾಟ್‌ರ ವರಿಗೆ ನಾನು ಪುನಃ ಬರಲಿಚ್ಛಿಸುವೆನೆಂದೂ, ಅವಕಾಶ ಕೊಡಬೇಕೆಂದೂ ತಂತಿ ಕಳುಹಿಸಿದೆನು. ಡೀನ್ ಮಾಟರು ಕೂಡಲೇ ಮರು ತಂತಿಯೊಂದನ್ನು ಕಳುಹಿಸಿ, ನನ್ನನ್ನು ಅತ್ಯಾದರದಿಂದ ಬರಮಾಡಿಕೊಂಡರು. ಎರಡು ದಿನಗಳಲ್ಲಿಯೇ ಪುನಃ ನ್ಯೂಯಾರ್ಕ್ ಸೆಂಟ್ರಲ್ ಸ್ಟೇಷನ್‌ನ್ನು ಬಿಟ್ಟು, ನನ್ನ ಎಲ್ಲಾ ಸಾಮಾನುಗಳೊಂದಿಗೆ, ಶ್ರೀ ಕೊಣ್ಣೂರರ ಹರಕೆಯನ್ನು ಹೊತ್ತು ಕೊಲಂಬಿಯಾ ನಗರಕ್ಕೆ ಪ್ರಯಾಣ ಬೆಳೆಯಿಸಿದೆನು.

ಕೊಲಂಬಿಯಾಕ್ಕೆ ಬಂದು ೧೨೦೦, ರಾಲಿನ್ಸ್ ಬೀದಿಯ ಮನೆ ಯೊಂದರಲ್ಲಿ ಕೊಠಡಿಯೊಂದನ್ನು ಬಾಡಿಗೆಗೆ ತೆಗೆದುಕೊಂಡು ವಿಶ್ವ ವಿದ್ಯಾ ನಿಲಯದಲ್ಲಿ ಪತ್ರಿಕೋದ್ಯಮ ಅಭ್ಯಾಸ ಪ್ರಾರಂಭ ಮಾಡಿದೆನು. ನನ್ನ ಪ್ರೊ|| ಡೀನ್ ಮಾಟ್‌ರು ನನ್ನನ್ನು ಬಹು ಜಾಗರೂಕತೆಯಿಂದ ನೋಡಿ ಕೊಂಡು, ನನ್ನ ಬೇಸರವನ್ನು ಹೋಗಲಾಡಿಸುತ್ತಿದ್ದರು.

ಸ್ವಲ್ಪ ದಿನಗಳಲ್ಲಿಯೇ ಶ್ರೀ ಕೊಣ್ಣೂರರಿಗೆ ನಮ್ಮ ವಿಶ್ವ ವಿದ್ಯಾನಿಲಯ ದಲ್ಲಿಯೇ ವ್ಯವಸಾಯ ಕಾಲೇಜಿನಲ್ಲಿ ಓದಲು ಅವಕಾಶ ಸಿಕ್ಕಿತು. ಅವರೂ ಬಂದು ನನ್ನನ್ನು ಕೂಡಿಕೊಂಡರು. ಅಲ್ಲಿಂದ ಜೀವನ ಸರಾಗವಾಗಿ ನಡೆಯು ಲಾರಂಭವಾಯಿತು.

ನಾವು ಭಾರತದವರೆಂದು ತಿಳಿದು ಅಲ್ಲಿಯ ಮತ್ತು ಅಕ್ಕಪಕ್ಕದ ಊರಿನ ಜನರು ನಮ್ಮನ್ನು ತಮ್ಮ ತಮ್ಮ ಊರುಗಳಿಗೆ ಭಾಷಣಗಳಿಗಾಗಿ ಕರೆದೊಯ್ಯುತ್ತಿದ್ದರು. ಅವರು ನಮ್ಮನ್ನು ಬಹುವಾಗಿ ಗಾಂಧೀಜಿಯವರ ಬಗ್ಗೆ ಪ್ರಶ್ನೆಗಳ ಸುರಿಮಳೆಯನ್ನೇ ಕರೆಯುತ್ತಿದ್ದರು. ನಾನು ಗಾಂಧೀಜಿ ಯವರ ಬಳಿ ಕೆಲವು ದಿನಗಳಿದ್ದುದರಿಂದ ನನ್ನನ್ನು ಎಲ್ಲೆಡೆಯಲ್ಲೂ ಗಾಂಧೀ ಜಿಯ ಬಗ್ಗೆ ಭಾಷಣ ಮಾಡಲು ಕರೆಯುತ್ತಿದ್ದರು. ಅಮೇರಿಕನ್ನರಿಗೆ ಗಾಂಧೀಜಿಯ ಬಗ್ಗೆ ಅಪಾರವಾದ ಗೌರವವಿತ್ತು.

———

# ಗಾಂಧೀಜಿ ಬಗ್ಗೆ ಅಮೇರಿಕನ್ನರ ಆಸಕ್ತಿ

ಅಮೇರಿಕೆಯ ಜನ ಗಾಂಧೀಜಿಯ ತತ್ವಗಳ ಬಗ್ಗೆ ವಿಚಾರ ಮಾಡಿದಷ್ಟು ಉಳಿದ ಪರಕೀಯ ರಾಷ್ಟ್ರಗಳಾವುವೂ ಮಾಡಿರಲಾರವೆಂದು ಧಾರಾಳವಾಗಿ ಹೇಳಬಹುದು.

ಆ ದಿನ ನನಗಿನ್ನೂ ನೆನಪಿದೆ. ೧೯೪೭ನೇ ಇಸ್ವಿ ಆಗಸ್ಟ್ ೧೫ನೇ ತಾರೀಖು. ಅಂದು ಅಮೇರಿಕೆಯ ಜನ ತೋರಿಸಿದ ಉತ್ಸಾಹ, ಆನಂದ ನನ್ನ ಮನಸ್ಸಿನ ಮೇಲೆ ಅಚ್ಚಳಿಯದೆ ನಿಂತಿದೆ. ಭಾರತಕ್ಕೆ ಬಂದ ಸ್ವಾತಂತ್ರ್ಯ ತಮ್ಮ ನಾಡಿಗೇ ಬಂದ ಹಾಗೆ ಭಾವಿಸಿ ಕುಣಿದಾಡಿದರವರು. ಆ ಜನ ನಮ್ಮೊಂದಿಗೆ ಜೊತೆಯಾಗಿ ಬೆರೆತು ಸ್ವಾತಂತ್ರ್ಯದ ಸುಧಾಪಾನ ಮಾಡಿದರು. ಮಿಸ್ಸೋರಿ ಸಂಸ್ಥಾನದ ಕೊಲಂಬಿಯಾದಲ್ಲಿ ನಾವಿದ್ದುದು ಆರೇ ಜನ ಭಾರತೀಯ ವಿದ್ಯಾರ್ಥಿಗಳು. ಅಂದು ನಾವು ಸ್ವಾತಂತ್ರ್ಯೋತ್ಸವವನ್ನು ನಮ್ಮ ವಿಶ್ವವಿದ್ಯಾನಿಲಯದಲ್ಲಿ ಆಚರಿಸಿದೆವು. ತುಂಬಾ ವಿಜೃಂಭಣೆಯಿಂದ ನಡೆಯಿತು. ಅದಕ್ಕೆ ಕಾರಣ ಅಮೇರಿಕನ್ನರು ನಮಗಿತ್ತ ಸಹಕಾರವೇ. ನ್ಯೂಯಾರ್ಕಿನಿಂದ ಶ್ರೀಮತಿ ಪರ್ಲ್‌ಬಕ್ ಕೂಡ ಸಂದೇಶ ಕಳುಹಿಸಿದ್ದರು. ಕೊಲಂಬಿಯಾದ ೨೫೦೦೦ ಜನರಿಗೂ ನಮ್ಮ ಈ ಉತ್ಸವ ಏನೆಂದು ತಿಳಿದಿತ್ತು. ಆ ದಿನ ಅವರು ಎಷ್ಟು ಆಸಕ್ತಿ ತೋರಿಸಿದರೆಂಬುದಕ್ಕೆ ಕೇವಲ ಒಂದೆರಡು ಉದಾಹರಣೆಗಳನ್ನು ಕೊಡುವೆನು.

**"ನಾವು ಇಷ್ಟೂ ಕಾಣಿಕೆ ಕೊಡಬೇಡವೆ?"**

ಅಂದು ಬೆಳಿಗ್ಗೆ ಪ್ರಭಾತಫೇರಿಯಾದ ಮೇಲೆ ಭಾರತೀಯ ವಿದ್ಯಾರ್ಥಿಗಳಾದ ನಾವೆಲ್ಲರೂ ಒಟ್ಟಿಗೆ ಒಂದು ಉಪಹಾರ ಗೃಹಕ್ಕೆ ಊಟಕ್ಕೆ ಹೋದೆವು. ಅಂದು ನಾವೆಲ್ಲಾ ಭಾರತೀಯ ಉಡುಪನ್ನೇ ಧರಿಸಿದ್ದೆವು. ಉಪಹಾರ ಗೃಹದ ಮಾಲೀಕ, ನಾವು ಬಂದೊಡನೆ ನಮ್ಮನ್ನು ಸಂತೋಷದಿಂದ ಸ್ವಾಗತಿಸಿ ಊಟಕ್ಕೆ ಹಾಕಿದನು. ತಾನೇ ಬಡಿಸಿದ. ಭಾರತದ ಬಗ್ಗೆ ಮಾತುಕಥೆಗಳಾದುವು. ನಂತರ ಊಟ ಮಾಡಿದ ಮೇಲೆ ನಾವು

ಹಣ ಕೊಡಲು ಹೋದೆವು. ಆತ ಮುಗುಳುನಗೆಯಿಂದ ಹಣ ಬೇಡ, ಎಂದನು. ಏಕೆ ? ಎಂದು ಕೇಳಿದಾಗ ಆತ ಹೇಳಿದ "ಗಾಂಧೀ ದೇಶದ ನಿಮಗೆ ಆ ಪುಣ್ಯಾತ್ಮನ ಸಾಹಸದಿಂದ ಸ್ವಾತಂತ್ರ್ಯ ಬಂದಿದೆ. ಅಹಿಂಸೆ ಯಿಂದ ಸ್ವಾತಂತ್ರ್ಯ ಗಳಿಸಿದ್ದೀರಿ. ನಿಮಗೆ ನಾವು ಇಷ್ಟು ಕಾಣಿಕೆ ಯನ್ನೂ ಕೊಡಬೇಡವೇ ?" ನಾವು ಮರು ಮಾತಾಡಲಿಲ್ಲ. ಆತನ ದೇಶಾಭಿಮಾನವನ್ನು ಮೆಚ್ಚಿ ಮುಂದೆ ಸಾಗಿದೆವು.

ಅದೇ ದಿನ ಸಂಜೆ ಇನ್ನೊಂದು ನಿದರ್ಶನವೂ ಆಯಿತು. ನಮ್ಮ ಸಂತೋಷ ಮತ್ತು ಗೌರವವನ್ನು ವ್ಯಕ್ತಮಾಡಲು ಆ ದಿನ ಸಂಜೆ ಭಾರತದ ಪ್ರಧಾನಿ ಪಂಡಿತ ನೆಹ್ರೂ, ಕಾಂಗ್ರೆಸ್ ಅಧ್ಯಕ್ಷರು, ಮತ್ತು ಗಾಂಧೀಜಿ ಯವರಿಗೆ ತಂತಿ ಕೊಡಲು ವೆಸ್ಟರ್ನ್ ಯೂನಿಯನ್‌ಗೆ ಹೋದೆವು. ಅಮೇರಿಕೆ ಯಲ್ಲಿ ತಂತಿ ಇಲಾಖೆ ಖಾಸಗೀ ಸಂಸ್ಥೆ, ಸರ್ಕಾರದ ಕೈವಾಡವಿಲ್ಲ. ಇವನ್ನು ನಡೆಸುವವರು ವೆಸ್ಟರ್ನ್ ಯೂನಿಯನ್ ಸಂಸ್ಥೆಯವರು. ನಾವು ಕೇಬಲ್ ಕೊಟ್ಟಾದಮೇಲೆ ಹಣ ಕೊಡಲು ಹೋದರೆ, ಆ ಸಂಸ್ಥೆಯ ಡೈರಕ್ಟರರು ನಮ್ಮಿಂದ ಹಣ ತೆಗೆದುಕೊಳ್ಳಲಿಲ್ಲ. ನಮಗೆ ಆಶ್ಚರ್ಯದ ಜೊತೆಗೆ ಸಂತೋಷವೂ ಆಯಿತು.

ಅಮೇರಿಕೆಯ ಜನಕ್ಕೆ, ಗಾಂಧೀಜಿ, ಭಾರತದ ಸ್ವಾತಂತ್ರ್ಯ, ಇವೆ ರಡೂ ಹೆಣೆದುಕೊಂಡು ಬಂದಂತೆ ಆಗಿದ್ದುವು. ಗಾಂಧೀಜಿ ತೀರಿಕೊಂಡ ಸುದ್ದಿ ಬಂದಾಗ ಅಮೇರಿಕೆಯ ಪ್ರತಿಯೊಂದು ಪತ್ರಿಕೆಗಳೂ, ರೇಡಿಯೋ ಗಳೂ, ಚರ್ಚುಗಳಲ್ಲಿ ವಾರದ ಸಂದೇಶಗಳೂ, ಸಿನಿಮಾ ಮಂದಿರಗಳ ಸುದ್ದಿ ಚಿತ್ರಗಳೂ, ಎಲ್ಲಾ ಗಾಂಧೀಜಿಯ ಬಗ್ಗೆಯೇ ಇದ್ದುವು. ೧೫ ದಿನಗಳವರೆಗೆ ಅವ್ಯಾಹತವಾಗಿ ಎಲ್ಲಿ ಮಾತನಾಡಿದರೂ, ಯಾರು ಮಾತನಾಡಿದರೂ, ಗಾಂಧೀಜಿಯ ಸುದ್ದಿಯೇ ಬರುತ್ತಿತ್ತು.

"ಗಾಂಧಿಯು ಒಳ್ಳೆಯ ಮನುಷ್ಯ. ಅವನನ್ನೇಕೆ ಕೊಂದರು ?" ಎಂದು ಪ್ರಶ್ನಿಸುತ್ತಿದ್ದರು ಆ ಜನ.

## ಪ್ರಪಂಚದ ಮೂಲೆಮೂಲೆಗಳಲ್ಲಿ

ಎರಡನೆಯ ಯುದ್ಧಾನಂತರ ಅಮೇರಿಕೆಯ ಜನ ಹಿಂಸೆಯ ಬಗ್ಗೆ ತುಂಬಾ ವಿಚಾರ ಮಾಡುತ್ತಿದ್ದಂತೆ ಕಂಡುಬಂದಿತು. 'ಲೀಗ್ ಆಫ್ ನೇಷನ್ಸ್' ಇಂದ ಪ್ರಪಂಚದಲ್ಲಿ ಶಾಂತಿ ತರಲು ಸಾಧ್ಯವಾಗಲಿಲ್ಲ. ಹಿಂಸೆಯ ತಳಹದಿಯ ಮೇಲೆ ಕಟ್ಟಿದ "ಯುನೈಟೆಡ್ ನೇಷನ್ಸ್" ಪ್ರಪಂಚಕ್ಕೆ ಶಾಂತಿಯನ್ನು ತರುವ ಸೂಚನೆಗಳು ಕಂಡುಬರಲಿಲ್ಲ. ಮಕ್ಕಳನ್ನೋ, ಸಂಬಂಧಿಕರನ್ನೋ, ಗಂಡಂದಿರನ್ನೋ, ಕಳೆದುಕೊಂಡ ಅಮೇರಿಕೆಯ ತಾಯಂದಿರು ಮತ್ತು ಹೆಂಡಂದಿರು ಯುದ್ಧದ ಮಾತೆತ್ತಿದರೆ ಭಯಭೀತರಾಗುತ್ತಿದ್ದರು. ಅಂತಹ ಒಂದು ಸಂದಿಗ್ಧ ಸಮಯದಲ್ಲಿ ಗಾಂಧೀಜಿಯ ತತ್ವದ ಬೆಳಕು ಪ್ರಪಂಚದ ಮೂಲೆಮೂಲೆಗಳಲ್ಲಿ ಪ್ರಕಾಶಿಸತೊಡಗಿತ್ತು. ಸತ್ಯ ಮತ್ತು ಅಹಿಂಸೆಯನ್ನು ತನ್ನ ಅಸ್ತ್ರಗಳನ್ನಾಗಿ ಮಾಡಿಕೊಂಡು ಶಕ್ತಿಯುತವಾದ ಬ್ರಿಟಿಷ್ ಸಾಮ್ರಾಜ್ಯಶಾಹಿಯನ್ನು ಸದೆಬಡಿದು ಜಯಶೀಲರಾದ ಗಾಂಧೀಜಿ ಮತ್ತು ಆತನ ತತ್ವಗಳ ಬಗ್ಗೆ ಅಮೇರಿಕೆಯ ಜನ ಹೆಚ್ಚು ಹೆಚ್ಚು ವಿಚಾರ ಮಾಡತೊಡಗಿದ್ದರು. ಆ ಸಮಯದಲ್ಲಿ ಗಾಂಧೀಜಿ ತೀರಿಕೊಂಡದ್ದು ಅವರಿಗೂ ಒಂದು ದೊಡ್ಡ ಪೆಟ್ಟೇ ಆಯಿತು. ಆ ದಿನ ಎಷ್ಟೋ ಜನ ಗಳಗಳನೆ ಅತ್ತರು. ಬಾಪುವಿಗಾಗಿ ಮರುಗಿದರು. ಏಸುಕ್ರಿಸ್ತನನ್ನು ಜ್ಞಾಪಿಸಿಕೊಂಡರು. ಎಬ್ರಾಹ್ಯಾಂ ಲಿಂಕನನ್ನು ನೆನಪಿಗೆ ತಂದುಕೊಂಡರು. ಓ! ಎಂದು ನಿಟ್ಟುಸಿರು ಬಿಟ್ಟರು.

## ಬಾಪುವನ್ನು ಕಳೆದುಕೊಂಡ ದಿನ

ಹನ್ನೆರಡು ಸಾವಿರ ಮೈಲಿ ದೂರದಲ್ಲಿ ಪರದೇಶದಲ್ಲಿದ್ದ ಭಾರತೀಯರಾದ ನಾವು ನಿಜವಾದ ಪರದೇಶಿಗಳೇ ಆದೆವು. ನಾಡಿನ ತಂದೆಯನ್ನು ಕಳೆದುಕೊಂಡು ತಬ್ಬಲಿಗಳಾದೆವು. ನಮ್ಮ ದುಃಖದ ಕೋಡಿಯನ್ನು 'ಗಾಂಧೀಜಿ'ಯನ್ನು ಕಂಡುಕೊಂಡ ನಮ್ಮನ್ನು ಜನ ಸಂತೈಸಿದರು. ನಮ್ಮ ದುಃಖಕ್ಕೆ ಇಂಬುಗೊಟ್ಟರು. ಬಾಪುವನ್ನು ಕಳೆದುಕೊಂಡ ನಮ್ಮೊಂದಿಗೆ

ಇವರು ತಮ್ಮ ರೂಸವೆಲ್ಟರನ್ನು ಕಳೆದುಕೊಂಡ ದಿನವನ್ನು ನೆನಪಿಗೆ ತಂದು ಕೊಂಡು ಮರುಗಿದರು.

೧೯೪೮ಲನೇ ಇಸ್ವಿ ಫೆಬ್ರವರಿ ೩ನೇ ತಾರೀಖು ಗಾಂಧೀಜಿ ತೀರಿಕೊಂಡು ಕೇವಲ ೫ ದಿನಗಳಾಗಿತ್ತು. ಅಮೇರಿಕೆಯಲ್ಲೋ ಆಗ ವಿಪರೀತ ಚಳಿ, ಹವಾ ಮಾನ ತುಂಬಾ ಥಂಡಿ. ಮಂಜಂತೂ ರಾತ್ರಿ ಹಗಲೂ ಎಡೆಬಿಡನೆ ಬೀಳು ತ್ತಿತ್ತು. ಅಂದು ಹತ್ತು ಇಂಚು ದಪ್ಪ ಮಂಜು ಬೀದಿಯಲ್ಲಿ ಬಿದ್ದಿತ್ತು.

ಅಂತಹ ಥಂಡಿಯಲ್ಲೇ ಬಾಪೂವಿನ ಬಗ್ಗೆ ದುಃಖ ಸೂಚನದ ಸಭೆ ಸೇರುವುದಿತ್ತು. ಭಾರತೀಯ ವಿದ್ಯಾರ್ಥಿ ಸಂಘ, ಅಂತರ ರಾಷ್ಟ್ರೀಯ ಸಂಘದ ಜೊತೆಗೆ ಕೊಲಂಬಿಯಾದ ಸಾರ್ವಜನಿಕರು ಸಭೆಯನ್ನು ಕರೆ ದಿದ್ದರು. ವಿಶ್ವವಿದ್ಯಾನಿಲಯದ ಉಪಸ್ಥಾನಪತಿಗಳಾದ **ಡಾ॥ ಜಕ್ರ್ಯಾಡಿ** ಯವರು ಅಧ್ಯಕ್ಷತೆ ವಹಿಸಿ, ಗಾಂಧೀಜಿಯ ಭಾವಚಿತ್ರ ಅನಾವರಣ ಮಾಡಿದರು. **ಪ್ರೊ॥ ಜೆಸ್ಸಿರೆಂಚರು** ಗಾಂಧೀಜಿಯ ಬಗ್ಗೆ ಮಾತನಾಡಿದರು. ಭಾರತೀಯರ ಪರವಾಗಿ ಗಾಂಧೀಜಿಯ ಮೇಲೆ ಚರಮ ಸಂದೇಶ ಓದುವ ಪಾಲು ನನಗೆ ಬಂದಿತು. ಆ ದಿನದ ಕೊರೆಯುವ ಚಳಿಯನ್ನು ಲೆಕ್ಕಿಸದೆ ಗಾಂಧೀಜಿಗೆ ತಮ್ಮ ಗೌರವವನ್ನು ತೋರಿಸಲು ನೂರಾರು ಜನ ಬಂದಿದ್ದರು. ಗಾಂಧೀಜಿ ಆ ಅಮೇರಿಕನ್ನರ ವಿಚಾರಬುದ್ಧಿಯನ್ನು ಕೆರಳಿಸಿರಬೇಕಲ್ಲವೆ! ಪೊಟ್ಯಾಸಿಯಂ ಪರಮಾಂಗನೇಟ್ ನೀರಿನಲ್ಲಿ ಹಾಕಿದಾಗ ಹೇಗೆ ನಿಧಾನ ವಾಗಿ ಅದು ಕರಗುವುದೋ ಹಾಗೆ ಗಾಂಧೀಜಿಯ ತತ್ವಗಳ ಪ್ರಭಾವ ಅಮೇರಿಕನ್ನರಲ್ಲಿ ಆಗತೊಡಗಿತ್ತು.

## ಬಾಂಧವ್ಯದ ಕುರುಹಾಗಿ

ಫೆಬ್ರವರಿ ೧೯ನೇ ತಾರೀಖಿನ ದಿನ ನವದೆಹಲಿಯಿಂದ ನನಗೊಂದು ಲಕ್ಕೋಟೆ ಬಂತು. ನಾನದನ್ನು ನಿರೀಕ್ಷಿಸಿರಲಿಲ್ಲ. ಭಾರತ ಸರ್ಕಾರದ ಆಕಾಶವಾಣಿ ಮತ್ತು ಸುದ್ದಿ ಖಾತೆಯ ಸಚಿವರಾದ ಶ್ರೀ ರಂಗನಾಥ ರಾಮ ಚಂದ್ರ ದಿವಾಕರರು ಅದನ್ನು ಕಳುಹಿಸಿದ್ದರು. (ಆಗಿನ್ನೂ ಅವರು ಮಂತ್ರಿಗ ಳಾಗಿರಲಿಲ್ಲ.) ಆ ಲಕ್ಕೋಟೆ ಸ್ವಲ್ಪ ದಪ್ಪವಾಗಿತ್ತು. ಅದನ್ನು ಒಡೆದೆ. ಕಾಗದ

ವಿತ್ತು. ಕಾಗದವನ್ನು ಇನ್ನೊಂದು ಸಣ್ಣ ಲಕ್ಕೋಟೆಗೆ ಸುತ್ತಿದ್ದರು. ಆ ಲಕ್ಕೋಟೆಯಲ್ಲಿ ಭಾರವಾದ ವಸ್ತುವಿತ್ತು. ಒಣಗಿದ ಹೂವಿನ ಪಕಳೆಗಳು ತೆಳ್ಳನೆಯ ಆ ಲಕ್ಕೋಟೆಯ ಒಳಗಿಂದ ಕಾಣತೊಡಗಿದವು. ಕಾಗದ ಓದುವ ಅವಸರಕ್ಕಿಂತ ಆ ಲಕ್ಕೋಟೆಯಲ್ಲಿ ಏನಿರುವುದೆಂದು ನೋಡುವ ಕುತೂಹಲ ಜಾಸ್ತಿಯಾಗಿತ್ತು. ಕಾಗದವನ್ನು ಓದಿದೆ. **"ನನ್ನ ನಿನ್ನ ಬಾಂಧವ್ಯದ ಕುರುಹೆಂದು ಪವಿತ್ರವಾದ ಗಾಂಧೀಜಿಯ ಚಿತೆಯ ಮೇಲೇರಿಸಿದ ಹೂಗಳನ್ನೂ, ಅವರ ನಿರ್ಮಲವಾದ ಚಿತೆಯ ಭಸ್ಮವನ್ನೂ ಕಳಿಸಿದ್ದೇನೆ, ಸ್ವೀಕರಿಸು—ಇತಿ ನಿನ್ನವ, ದಿವಾಕರ"** ಎಂದಿತ್ತು. ನನ್ನ ಕೈ ಥರಥರನೆ ನಡುಗಿದುವು. ಪವಿತ್ರವಾದ ವಸ್ತು ನನ್ನ ಕೈಯಲ್ಲಿ! ಪಕ್ಕದ ಮೇಜಿನ ಮೇಲಿಟ್ಟೆ. 'ಸಮಾಧಿ'ಯ ರೀತಿಯಲ್ಲಿ ಅಲಂಕಾರ ಮಾಡಿದೆ. ನನ್ನ ಭಾರತೀಯ ಗೆಳೆಯರಿಗೆ ತಿಳಿಸಿದೆ. ಊರಲ್ಲೆಲ್ಲಾ ಮಿಂಚಿನ ವೇಗದಲ್ಲಿ ಸುದ್ದಿ ಹರಡಿತು. ನೂರಾರು ಜನ ನನ್ನ ರೂಮಿಗೆ ಬರತೊಡಗಿದರು. ೩೦೧ ಮೆಲ್ಬೋರನ್ ಬೀದಿ ಕೆಲವು ದಿನ ಯಾತ್ರಾ ಸ್ಥಳ ಆದಂತೆಯೇ ಆಯಿತು. ಎಂತಹ ಗಂಭೀರ ಜನ ಅವರು! ಒಬ್ಬೊಬ್ಬರಾಗಿ ಬಂದು ತಮ್ಮ ಗೌರವವನ್ನು ಸೂಚಿಸಿ ಹೋಗುತ್ತಿದ್ದರು. ಕೆಲವರು ಹೂವು ಹಣ್ಣುಗಳನ್ನು ಸಮರ್ಪಿಸಿದರು. ಕೆಲವರು ಅಲ್ಲಿ ಬಂದು ಕುಳಿತು ಬೈಬಲ್ಲಿನ ಕೆಲವು ಶ್ಲೋಕಗಳನ್ನು ಹೇಳಿ ತಮ್ಮ ಮನಸ್ಸನ್ನು ಸಂತೈಸಿಕೊಂಡರು. ಮತ್ತೆ ಕೆಲವರು ಏನೂ ಮಾತನಾಡದವರಾಗಿ ಅಲ್ಲಿಯೇ ನಿಂತುಬಿಟ್ಟಿದ್ದರು. ಆ ದೃಶ್ಯ ನೋಡಿದಾಗ ನಾನು ಚಕಿತನಾಗಿಹೋದೆ. ಗಾಂಧೀಜಿ ಪುಣ್ಯ ಪುರುಷರು. ನಮ್ಮ ನಾಡು ಭಾಗ್ಯ ನಾಡು, ಎಂದುಕೊಂಡೆ. ಅಮೇರಿಕೆಯ ಪತ್ರಿಕಾ ಪ್ರತಿನಿಧಿಗಳು ಕೇಳಬೇಕೆ! ಕೆಲವರು ಸುದ್ದಿ ಕೇಳಿ ಬರೆದುಕೊಂಡರು. ಇನ್ನು ಕೆಲವರು ಗಾಂಧೀಜಿಯ ಚಿತೆಯ ಭಸ್ಮವುಳ್ಳ ಲಕ್ಕೋಟೆಯ ಭಾವಚಿತ್ರವನ್ನು ತೆಗೆದುಕೊಂಡರು. ಮರುದಿನ ಪತ್ರಿಕೆಗಳಲ್ಲಿ "First India to receive Mahatma's Ashes in America" ಎಂದು ಪ್ರಕಟಿಸಿದರು. ಆ ದಿನ ಸಂಜೆ ಪುನಃ ನನ್ನ ಕೊಠಡಿ ಯಾತ್ರಾಸ್ಥಳವೇ ಆಯಿತು.

## ಗಾಂಧೀಜಿ ಬಗ್ಗೆ ಅಮೇರಿಕನ್ನರ ಆಸಕ್ತಿ

" ಗಾಂಧೀಜಿ ಒಂದು ಸಲವಾದರೂ ಅಮೇರಿಕಕ್ಕೆ ಬರಬೇಕಾಗಿತ್ತು" ಎಂದಳು ಒಬ್ಬ ಹಣ್ಣು ಹಣ್ಣು ಮುದುಕಿ.

"ಓ ! ನಮಗೆ ಆ ಪುಣ್ಯವಿಲ್ಲ !'' ಎಂದರು ಇನ್ನೊಬ್ಬ ಗೃಹಿಣಿ.

''ಗಾಂಧೀಜಿ ಬಾರದಿದ್ದರೂ, ಅವರ ತತ್ವಗಳು ಬಂದಿವೆಯಲ್ಲಾ" ಎಂದರು ಚರ್ಚಿನ ಬಿಷಪ್ಪರೊಬ್ಬರು.

"ಅಹಿಂಸೆಯು ಪ್ರಪಂಚದ ಶಾಂತಿಗೆ ಸಹಾಯವಾಗುವುದಾದರೆ, ಭಾರತಕ್ಕೆ ಹೋಗಿ ಕಲಿತು ಬರೋಣ'' ಎಂದ ಒಬ್ಬ ವಿದ್ಯಾರ್ಥಿ.

ಈ ರೀತಿ ಗಾಂಧೀಜಿ, ಅಮೇರಿಕನ್ನರಿಗೆ ಶಾಂತಿದೂತರಾಗಿದ್ದರು.

## ನಿಮ್ಮ ಶ್ರಮಕ್ಕೆ

ಏಪ್ರಿಲ್ ೨೬ನೇ ತಾರೀಖು ಬೆಳಿಗ್ಗೆ ನಮ್ಮ ಮನೆಗೊಂದು ಕಾರು ಬಂದಿತು. ನಡು ವಯಸ್ಸಿನ ಅಮೇರಿಕೆಯ ಗಂಡಹೆಂಡಿರಿಬ್ಬರು ಕುಳಿತಿದ್ದರು. ಆತ ಕಾರಿನಿಂದಿಳಿದು "Hallo, Mr. Murthy, how do you do? I am very glad to meet you'' ಎಂದರು. ಇವರ ಹೆಸರು Mr. Frank Hollman ಎಂದು. ಕೊಲಂಬಿಯಾಕ್ಕೆ ೬೦ ಮೈಲಿ ದೂರದಲ್ಲಿರುವ ವಾರಂಟನ್ ಎಂಬ ನಗರದಲ್ಲಿ ''ವಾರಂಟನ್ ಬ್ಯಾನರ್" ಎಂಬ ದಿನ ಪತ್ರಿಕೆಯ ಸಂಪಾದಕರು. ಅಲ್ಲಿಯ ವಾಣಿಜ್ಯ ಸಂಘದ ಕಾರ್ಯದರ್ಶಿ. ಅಲ್ಲಿ ತಿಂಗಳಿಗೊಂದು ಸಭೆ ಇಟ್ಟುಕೊಂಡಿರುತ್ತಾರೆ. ಅಂದಿನ ಸಭೆಗೆ ನನ್ನನ್ನು ಅಧ್ಯಕ್ಷ ಅತಿಥಿಯನ್ನಾಗಿ ಮಾಡಲು ಔತಣ ಕೊಡಲು ಬಂದಿದ್ದರು. ಕಾರಿನಲ್ಲಿಯೇ ಕರೆದುಕೊಂಡು ಹೋದರು.

೬ ಘಂಟೆಗೆ ಸರಿಯಾಗಿ ಸಭೆ ಸೇರಿತು. ಮೊದಲು ಊಟವಾಯಿತು. ನಾನು ಮಾಂಸವನ್ನು ತಿನ್ನುವುದಿಲ್ಲವೆಂದಾಗ ಅವರಿಗೆಲ್ಲ ಆಶ್ಚರ್ಯವಾಯಿತು. ''ನೀವೇನು ಊಟ ಮಾಡುವಿರಿ ?'' ಎಂದು ಉದ್ಗಾರ ತೆಗೆದರವರು. ಊಟವಾದನಂತರ ನಾನು 'ಗಾಂಧೀಜಿ'ಯ ಬಗ್ಗೆ ಎರಡು ಘಂಟೆಗಳ ಕಾಲ ಮಾತನಾಡಿದೆ. ಸದ್ದಿಲ್ಲದೆ ಒಬ್ಬರೂ ಪಿಟಕ್ಕೆನ್ನದೆ ಕೇಳುತ್ತ ಕುಳಿತಿದ್ದರು. ಸಭೆಯಿಂದ ಮಧ್ಯದಲ್ಲಿ ಒಬ್ಬರಾದರೂ ಹೊರಬೀಳಲಿಲ್ಲ. ನನ್ನ ಭಾಷಣವಾದ ಮೇಲೆ

ಆ ಸಭಿಕರು, ಭಾರತ, ಗಾಂಧೀಜಿ, ಅಹಿಂಸೆ, ರೋಪ್‌ಟ್ರಿಕ್, ಮದುವೆ, ಜಾತಿ ಪದ್ಧತಿ ಮುಂತಾದವುಗಳ ಮೇಲೆ ಪ್ರಶ್ನೆಗಳ ಸುರಿಮಳೆಯನ್ನೇ ಸುರಿದರು. ನಮ್ಮ ಸಭೆ ಮುಗಿದಾಗ ರಾತ್ರಿ ಹನ್ನೊಂದಾಗಿತ್ತು. ಬರುವಾಗ ಬಸ್ಸಿನಲ್ಲಿ ಬಂದೆ ಕೊಲಂಬಿಯಾಕ್ಕೆ. ನನ್ನನ್ನು ಬೀಳ್ಕೊಡಲು ಆ ಜನವೆಲ್ಲ ಬಸ್ ಸ್ಟಾಂಡಿಗೆ ಬಂದಿದ್ದರು. ಅಷ್ಟರಲ್ಲಿಯೇ ಹಲವರು ಹಣ್ಣು ಹಂಪಲಗಳನ್ನು ತಂದು ನನಗೆ ಕೊಟ್ಟರು. ಬಸ್ಸು ನಿಲ್ದಾಣ ಬಿಡುವುದಕ್ಕೆ ಇನ್ನೇನು ಮೂರು ನಿಮಿಷವಿತ್ತು. ಕಾರ್ಯದರ್ಶಿ ಹೋಲ್‌ಮನ್ ಒಂದು ನೂರು ಡಾಲರು ಗಳನ್ನು (೩೫೦ ರೂ.) ಇಟ್ಟು "ಇದೇ ನಮ್ಮ ಅಲ್ಪ ಕಾಣಿಕೆ ನಿಮ್ಮ ಶ್ರಮಕ್ಕೆ. ಇದಕ್ಕಿಂತ ಹೆಚ್ಚು ಕೊಡಲು ಅಶಕ್ಯರು. ಸ್ವೀಕರಿಸಬೇಕು" ಎಂದರು. ಹೋ ! ಅದೊಂದು ನೂತನ ಅನುಭವ ನನಗೆ. ಕಾರಿನಲ್ಲಿ ಕರೆದುಕೊಂಡು ಬಂದು ಊಟಕ್ಕೆ ಹಾಕಿ, ತಿಂಡಿ ಕೊಟ್ಟು, ಭಾಷಣ ಮಾಡಿಸಿ, ಮೇಲೆ ೧೦೦ ಡಾಲರು ಕೊಟ್ಟು ಕಳುಹಿಸುವುದು ಆಶ್ಚರ್ಯವಲ್ಲವೆ !

## ಸ್ಲೇಟರ್ ನಗರದಲ್ಲಿ

ಮೇ ೨ನೆಯ ತಾರೀಖು, ಕೊಲಂಬಿಯದಿಂದ ನೂರು ಮೈಲಿ ದೂರ ದಲ್ಲಿದ್ದ ಸ್ಲೇಟರ್ ಎಂಬ ನಗರಕ್ಕೆ ಹೋಗಿದ್ದೆ. ಅಲ್ಲಿದ್ದ ಹನ್ನೆರಡು ಚರ್ಚು ಗಳೂ ತಮ್ಮ ಭಾನುವಾರದ ಪ್ರಾರ್ಥನಾ ಸಭೆಯನ್ನು ಒಂದೇ ಕಡೆ ಸೇರಿಸಿದ್ದರು. ಅಂದು "ಗಾಂಧೀಜಿಯ ಸಂದೇಶ" ಹೇಳಬೇಕೆಂದು ನನ್ನನ್ನು ಕರೆಸಿದ್ದರು. ಅವರ ತೀವ್ರಾಸಕ್ತಿಯನ್ನು ಕಂಡು ನಾನು ಆ ಊರಿನ ಚರ್ಚಿಗೆ ಒಂದು 'ಗಾಂಧೀಜಿ'ಯ ಭಾವಚಿತ್ರವನ್ನು ಕೊಟ್ಟೆ. ಅದರ ಅನಾವರಣ ಮಹೋತ್ಸವವು ಅಂದೇ ಆಯಿತು. ಈ ಸಭೆಗೆ ರೋಮನ್ ಕ್ಯಾಥೋಲಿಕರು ಮತ್ತು ಪ್ರಾಟೆಸ್ಟಂಟ್ ಪಂಥದವರೂ ಬಂದಿದ್ದರು. ಗಾಂಧೀಜಿ ಬಗ್ಗೆ ನಾನು ಹೇಳಿದ ಮಾತುಗಳನ್ನು ಸಾವಧಾನ ವಾಗಿ ಕೇಳಿದರು. ಸಂದೇಹ ಬಂದೆಡೆಗಳಲ್ಲಿ ಪ್ರಶ್ನೆಗಳನ್ನು ಕೇಳಿ ಆಸಕ್ತಿ ಯಿಂದ, ಕುತೂಹಲದಿಂದ, ತಿಳಿದುಕೊಳ್ಳುತ್ತಿದರು. ಅಂದಿನ ಸಭೆಯಲ್ಲಿ ಕಳೆಕೊಟ್ಟದ್ದು ಚರಕಾ ಪ್ರದರ್ಶನ. ನೂಲುವ ರೀತಿಯನ್ನು ಅವರು

ನೋಡಿದಾಗ ಅವರು ತೋರಿಸಿದ ಸಂತುಷ್ಟತೆ ಅಷ್ಟಿಷ್ಟಲ್ಲ. ಗಾಂಧೀಜಿ ಯನ್ನು ಅರ್ಥ ಮಾಡಿಕೊಳ್ಳುವಲ್ಲಿ ಅದೂ ಸಹಾಯ ಮಾಡಿರಬೇಕು.

ಮೇ ೨೫ನೇ ತಾರೀಖು ಮೇರ್ಕ ಎಂಬ ಹಳ್ಳಿಗೆ ಹೋಗಿದ್ದೆ. ಇವರೆಲ್ಲರೂ ರೈತರು. ಹೊಲಗಳೆಲ್ಲಾ ಅವರವರ ಮನೆಯ ಮುಂದೆಯೇ ಇವೆ. **ಶ್ರೀ ರಾಬರ್ಟ್ ಬ್ರೌನ್** ಎಂಬುವರೊಬ್ಬರು ಅಲ್ಲಿಯ ರೈತರು. ಅವರ ಮಗ ನಮ್ಮ ಮನೆಯ ರೂಮೊಂದರಲ್ಲಿದ್ದ. ಆತನಿಗೆ ನನ್ನನ್ನು ಒಂದು ಮೂರು ದಿನ ಅತಿಥಿಯನ್ನಾಗಿ ಮಾಡಿಕೊಳ್ಳಬೇಕೆಂದು ಆಸೆಯುಂಟಾಯಿತು. ಆತ ಕರೆ ದಾಗ ನಾನು ಒಲ್ಲೆ ಎನ್ನಲಾರದೆ ಹೋದೆ. ಇಬ್ಬರೂ ಮೇಕನ್ ಸೇರಿದೆವು. ನಾವು ಬಂದ ಸುದ್ದಿ ಹೇಗೋ ತಿಳಿದು ಪತ್ರಿಕೆಗಳಲ್ಲಿ ಪ್ರಕಟವಾಯಿತು. ನಾನು ಅಲ್ಲಿಗೆ ಹೋದದ್ದು ಶನಿವಾರ. ಮರುದಿನ ಭಾನುವಾರದ ಪ್ರಾರ್ಥನಾ ಭಾಷಣ ನನ್ನದೇ ಆಗಬೇಕೆಂದು ಅಲ್ಲಿಯ ಜನರ ಪ್ರತಿನಿಧಿ ಹೇಳಿದರು. ಗಾಂಧೀಜಿಯ ಮೇಲೆ ಮಾತನಾಡಬೇಕೆಂದರು.

## ಗಾಂಧೀಜಿ—ಏಸುಕ್ರಿಸ್ತ

ಮರುದಿನ ಬೆಳಗ್ಗೆ ಚರ್ಚ್‌ನ ಆವರಣವೆಲ್ಲಾ ಜನರಿಂದ ತುಂಬಿ ಹೋಗಿತ್ತು. ಅಲ್ಲಿಯ ಬಿಷಪ್ ನನಗೆ ಭಾಷಣ ಮಾಡಲು ಹೇಳಿದ. ನನಗೆ ತಿಳಿದಮಟ್ಟಿಗೆ ಗಾಂಧೀಜಿಯ ತತ್ವಗಳನ್ನು ವಿವರಿಸಿ, ಕೊನೆಯಲ್ಲಿ ಏಸುಕ್ರಿಸ್ತ ನಿಗೆ ಗಾಂಧೀಜಿಯನ್ನು ಹೋಲಿಸಿದೆ. ನನ್ನ ಪಕ್ಕದಲ್ಲಿಯೇ ಕುಳಿತಿದ್ದ ಬಿಷಪ್ ಕೋಪಗೊಂಡು "ಗಾಂಧೀಜಿಯನ್ನು ಏಸುಕ್ರಿಸ್ತನಿಗೆ ಹೋಲಿಸಿದ್ದು ಸರಿ ಯಲ್ಲ" ಎಂದರು. ಕಾರಣ ಕೊಡುತ್ತಾ "ಗಾಂಧೀಜಿ ಮನುಷ್ಯಮಾತ್ರದವ ರೆಂದೂ, ಏಸುಕ್ರಿಸ್ತ ದೇವರ ಅವತಾರವೆಂದೂ, ಮನುಷ್ಯರನ್ನು ದೇವರಿಗೆ ಹೋಲಿಸುವುದುಂಟೆ" ಎಂದರು. ಸಂಯಮದಿಂದ ಉತ್ತರ ಕೊಟ್ಟೆ "ನನಗೆ ಗಾಂಧೀಜಿ ದೇವರೋ, ಏಸುಕ್ರಿಸ್ತರು ದೇವರೋ ತಿಳಿಯದು. ಕ್ರಿಸ್ತರ ಕೆಲವು ತತ್ವಗಳನ್ನು ಒಪ್ಪಿ, ಗಾಂಧೀಜಿ ಅದರಂತೆ ನಡೆದಿದ್ದಾರೆ, ಸಾಧಿಸಿದ್ದಾರೆ. ಆದ್ದ ರಿಂದ ಗಾಂಧೀಜಿಯವರನ್ನು ಕ್ರಿಸ್ತರಿಗೆ ಹೋಲಿಸಿದ್ದರಲ್ಲಿ ತಪ್ಪೇನೂ ಇಲ್ಲ"

ಎಂದೆ. ನೆರೆದಿದ್ದ ಜನಸಮೂಹ, ‘ಹೋ! ಅದು ನಿಜ’ ಎಂದಿತು. ಬಿಷಪ್ಪರು ಕೋಪಗೊಂಡು ಸಭೆಯಿಂದ ಹೊರಟುಹೋದರು. ನಾನು ಭಾಷಣ ಮುಂದುವರಿಸಿದೆ. ಆಗ ನನ್ನ ಪುಸ್ತಕ“ Mahatma Gandhi and other Martyrs of India” ಪ್ರಕಟವಾಗಿತ್ತು. ೫೦ ಪ್ರತಿ ಅಲ್ಲಿಗೆ ಒಯ್ದಿದ್ದೆ. ಬಿಷಪ್ಪರ ಕೋಪದ ಫಲವಾಗಿ ನನ್ನ ಪುಸ್ತಕಗಳೆಲ್ಲವೂ ಖರ್ಚಾ ದವು. ಅಲ್ಲೂ ಗಾಂಧೀಜಿಯ ಪ್ರಭಾವ ಮೂರ್ತಿವತ್ತಾಗಿ ಬಂದಿರಬಹುದಲ್ಲವೆ!

## ಗಾಂಧೀ ದೂತರ ಸೀಮೋಲ್ಲಂಘನೆ

ಮಹಾತ್ಮ ಗಾಂಧಿಯವರ ತತ್ವಗಳ ಪ್ರಭಾವ ಯಾವ ರೀತಿಯಲ್ಲಿ ಅಮೇರಿಕನ್ನರ ಮೇಲೆ ಆಗಿದೆ ಎಂಬುದಕ್ಕೆ ಕೆಲವು ಉದಾಹರಣೆಗಳ ಮೂಲಕ ವಿವರಿಸಿದ್ದೇನೆ. ‘ಶಾಂತಿ’ ಬೇಕೆಂದು ಹಾ ತೊರೆಯುತ್ತಿರುವ ಅಮೇರಿಕೆಗೆ ಗಾಂಧೀಜಿಯವರ ‘ಅಹಿಂಸೆ’ಯ ಸಂದೇಶ ಅಮೃತದಂತೆ ಕಂಡುಬರುತ್ತಿರುವ ಈ ಸಮಯದಲ್ಲಿ ಸತತವಾದ ಮತ್ತು ಶಾಸ್ತ್ರೀಯವಾದ ಗಾಂಧೀ ತತ್ವ ಪ್ರಚಾರವಾಗಬೇಕು. ಇದು ಗಾಂಧೀಜಿಯವರ ಶಿಷ್ಯರಿಂದ ಸಾಧ್ಯ. ಕ್ರಿಶ್ಚಿಯನ್ ಮಿಷನರಿಗಳು ಇಲ್ಲಿಗೆ ಬಂದ ಹಾಗೆ, ಬೌದ್ಧ ಭಿಕ್ಷು ಗಳು ಏಷ್ಯಾದಲ್ಲಿ ಪ್ರಚಾರ ಮಾಡಿದಂತೆ, ಗಾಂಧೀಜಿಯವರ ಶಾಂತಿ ದೂತರು, ಸತ್ಯಾಗ್ರಹಿಗಳು ಸೀಮೋಲ್ಲಂಘನ ಮಾಡಬೇಕು.

ಗಾಂಧೀಜಿ ಹುಟ್ಟಿ ಬೆಳೆದು ಕಾರ್ಯ ಸಾಧಿಸಿದ ನಾಡಿನಲ್ಲಿ ಈಗೆಷ್ಟು ಮಂದಿ ಅವರ ತತ್ವಗಳನ್ನು ಅನುಸರಿಸುತ್ತಿದ್ದಾರೆ ? ಗಾಂಧೀಜಿಯವರ ಹೆಸರಿನಲ್ಲಿ ಮಾಡಬಾರದ ಕೆಲಸಗಳನ್ನು ಮಾಡುತ್ತಿದ್ದಾರೆ. ಈಗ ಗಾಂಧಿಜೀ ಇದ್ದಿದ್ದರೆ? ಅಥವ ಅವರ ಕಾರ್ಯದರ್ಶಿಯಾಗಿದ್ದ ಮಹದೇವ ಭಾಯಿ ಇದ್ದಿದ್ದರೆ? ಓ! ಅದೊಂದು ಭಾವನಾ ಚಿತ್ರ!! ಕಲ್ಪನಾ ಜಗತ್ತು!!!

ಗಾಂಧೀಜಿ ಮತ್ತು ಮಹದೇವಭಾಯಿಯವರನ್ನು ಭೇಟಿ ಮಾಡಿ ದಾಗ, ಅವರು ನನಗೆ ತೋರಿಸಿದ ಮಮತೆ ಆ ದಿನದ ನೆನಪಿಗೆ, ಆ ಬಂಧುತ್ವದ ಕುರುಹುವಿಗೆ ಇದೋ ಎರಡು ಹನಿ ಕಣ್ಣೀರು !

---

# ಅಮೇರಿಕದಲ್ಲಿ ಜೀವನ ಸೌಕರ್ಯಗಳು

## ಕೆಫೆಟೇರಿಯಾ

ನಮ್ಮ ದೇಶದಲ್ಲಿರುವಂತೆ ಇಲ್ಲಿಯ ಉಪಹಾರ ಮಂದಿರಗಳಲ್ಲಿ ಮಾಣಿಗಳಿರುವುದಿಲ್ಲ. ನಾವೇ ಮಾಣಿಗಳಾಗಬೇಕು. ಮೊದಲು ನಮಗಾಗಿ ಇಟ್ಟಿರುವ ತಟ್ಟೆ, ಚಾಕು, ಚಮಚ, ಟವಲ್ ತೆಗೆದುಕೊಂಡು ಆಹಾರವನ್ನಿಟ್ಟಿರುವ ಸ್ಥಳಕ್ಕೆ ಹೋಗಿ ನಮಗೆ ಬೇಕಾದ ಆಹಾರವನ್ನು ಗಲ್ಲೆಯ ಹತ್ತಿರ ಬಂದು ದುಡ್ಡು ಕೊಟ್ಟು, ನಮಗಾಗಿ ಇಟ್ಟಿರುವ ಮೇಜಿನ ಮೇಲೆ ಹೋಗಿ ಇಟ್ಟುಕೊಂಡು ಊಟ ಮಾಡಬೇಕು. ಇಲ್ಲಿ ಇನಾಮು ಕೊಡುವ ಪದ್ಧತಿ ಇಲ್ಲ.

## ಡ್ರಗ್ ಸ್ಟೋರ್

ಈ ಅಂಗಡಿಯಲ್ಲಿ ಉಳಿದ ಅನೇಕ ಸಾಮಾನುಗಳು ಸಿಕ್ಕುವಂತೆ, ಕಾಫಿ, ಹಾಲು, ಹಣ್ಣಿನ ರಸ, ಸ್ಯಾಂಡ್‌ವಿಚಸ್ ಸಿಕ್ಕುತ್ತವೆ. ಹಗುರವಾದ ಆಹಾರ ಬೇಕಾದಲ್ಲಿ, ಇಲ್ಲಿಗೆ ಹೋಗಬಹುದು. ಕಾಫಿಗೆ ೫ ಸೆಂಟ್ಸಾದರೂ, ಇಲ್ಲಿ ಕೆಲವು ಕಡೆ ೧೦ ಸೆಂಟ್ಸ್ ಕೊಡಬೇಕು. ಇಲ್ಲಿಯೂ ಇನಾಮು ಪದ್ಧತಿಯಿದೆ.

## ಆಟೋಮ್ಯಾಟ್

ಇದು ಅಮೇರಿಕದ ಆಧುನಿಕ ಉಪಹಾರ ಗೃಹ. ಇಂತಹವುಗಳನ್ನು ದೊಡ್ಡ ದೊಡ್ಡ ಪಟ್ಟಣಗಳಲ್ಲಿ ನೋಡಬಹುದು. ಗಾಜಿನ ಸಣ್ಣ ಸಣ್ಣ ಕಿಟಕಿಗಳಲ್ಲಿ ಆಹಾರವನ್ನಿಟ್ಟಿರುತ್ತಾರೆ. ಅದರ ಹಿಂದೆ ಬೆಲೆಯನ್ನು ತಿಳಿಸುವ ಚೀಟಿ ಇರುತ್ತದೆ. ಕಿಟಕಿಯ ಮೇಲೆ ಒಂದು ಸಣ್ಣ ತೂತು ಇರುತ್ತದೆ ಆ ಆಹಾರಕ್ಕಾಗುವ ಹಣವನ್ನು ತೂತಿನಲ್ಲಿ ಹಾಕಿದ ಕೂಡಲೇ, ಆ ಗಾಜಿನ ಕಿಟಕಿ ಬಾಗಿಲು ತನ್ನಷ್ಟಕ್ಕೆ ತಾನೇ ತೆರೆಯುತ್ತದೆ. ಅವನ್ನು

ತೆಗೆದುಕೊಂಡು ಹೋಗಿ ಮೇಜಿನಮೇಲಿಟ್ಟುಕೊಂಡು ತಿನ್ನಬೇಕು. ಕಾಫಿಗೂ ಹಾಗೆಯೇ, ನಲ್ಲಿಯ ತೆರನಾದ ಒಂದು ಕೊಳವೆಯಿದೆ. ತಿರುವು ತಿರುಗಿಸಿದ ಕೂಡಲೇ ಮೊದಲು ಡಿಕಾಕ್ಷನ್, ಆಮೇಲೆ ಹಾಲು ಬೀಳುತ್ತದೆ. ಅದಕ್ಕೆ ಮೇಜಿನ ಮೇಲಿಟ್ಟಿರುವ ಸಕ್ಕರೆ ಹಾಕಿಕೊಂಡು ಕಾಫಿ ಕುಡಿಯಬೇಕು. ಇಲ್ಲಿ ಇನಾಮು ಕೊಡುವ ಪದ್ಧತಿಯಿಲ್ಲ.

## ಡೈನಿಂಗ್ ರೂಮ್ಸ್

ಈ ಊಟದ ಮನೆಗಳು, ಹೋಟೇಲುಗಳಲ್ಲಿ ಕೆಲವು ರೆಸ್ಟಾರೆಂಟು ಗಳಲ್ಲಿ, ಮತ್ತು ರೈಲ್ವೆ ಸ್ಟೇಷನ್‌ಗಳಲ್ಲಿ ಇರುವುದನ್ನು ಕಾಣಬಹುದು. ಇಲ್ಲಿ ೧೦ ಸೆಂಟ್ಸುಗಳನ್ನು ಇನಾಮು ಕೊಡಬೇಕು.

## ಟೆಲಿಫೋನ್

ತನ್ನಷ್ಟಕ್ಕೆ ತಾನೇ ನಡೆಯುವ ಟೆಲಿಫೋನ್‌ಗಳು ಇವೆ. ಇವನ್ನು ಹೇಗೆ ಉಪಯೋಗಿಸಬೇಕೆಂಬ ಬಗ್ಗೆ ಅದರ ಮೇಲೆಯೇ ಬರೆದಿರುತ್ತದೆ. ೫ ಸೆಂಟ್ಸ್ ಎಂದು ಬರೆದಿರುವ ತೂತಿನಲ್ಲಿ ನಾಣ್ಯ ಹಾಕಿದ ಕೂಡಲೇ ನಿಮಗೆ ಕಿರ್ ಎಂಬ ಶಬ್ದ ಕೇಳಿಸುತ್ತದೆ. ಆಗ ನೀವು ಯಾರಿಗೆ ಬೇಕೋ ಅವರ ನಂಬರಿಗೆ ಫೋನ್ ಮಾಡಬಹುದು. ಉದಾಹರಣೆಗೆ **ನಾಡಿಗ ಕೃಷ್ಣಮೂರ್ತಿ University 7-4325** – ಈ ನಂಬರಿಗೆ ಕರೆಯಬೇಕೆಂದು ಇಟ್ಟುಕೊಳ್ಳೋಣ. ಮೊದಲು **U** ಅಕ್ಷರವನ್ನು ತಿರುಗಿಸಬೇಕು. ನಂತರ **N** ಅಕ್ಷರ, ಆಮೇಲೆ ನಂಬರುಗಳು. ಕೆಲವು ನಗರಗಳಲ್ಲಿ ಬರಿ ನಂಬರುಗಳಿರುತ್ತವೆ. ಅಕ್ಷರಗಳಿರುವುದಿಲ್ಲ. ಕೆಲವು ನಗರಗಳಲ್ಲಿ ಹಣ ಕೊಡಬೇಕಾಗಿಲ್ಲ. ಎಲ್ಲ ಟೆಲಿಫೋನ್ ಬೂತ್‌ಗಳಲ್ಲಿ ಮಾರ್ಗದರ್ಶನದ ಪುಸ್ತಕವಿರುತ್ತದೆ! ಮಾರ್ಗ ದರ್ಶನ ಪುಸ್ತಕ ಎರಡು ರೀತಿಯವು ಇವೆ. ಮೊದಲನೆಯದು ಹೆಸರಿನ ಪ್ರಕಾರ; ಎರಡನೆಯದು ಕ್ಲಾಸಿಫೈಡ್ ಟೆಲಿಫೋನ್ ಡೈರೆಕ್ಟರಿಯ ಪ್ರಕಾರ.

ವೈದ್ಯರನ್ನು ಕರೆಯುವಾಗ ಫಿಝಿಷಿಯನ್ಸ್ ಎಂಬ ಕಡೆ ನೋಡಿದರೆ ತತ್‌ಕ್ಷಣ ನಂಬರು ವಿಳಾಸ ಎಲ್ಲಾ ಸಿಕ್ಕುತ್ತದೆ.

## ಟೆಲಿಗ್ರಾಫ್

ಅಮೇರಿಕ ದೇಶದಲ್ಲಿ ತಂತಿ ಶಾಖೆಯು ಸರ್ಕಾರಕ್ಕೆ ಸೇರಿಲ್ಲ. ವೆಸ್ಟರ್ನ್ ಯೂನಿಯನ್ ಎಂಬ ಸ್ವಂತ ಕಂಪೆನಿ ಇದರ ಮೇಲ್ವಿಚಾರಣೆ ಮಾಡುತ್ತದೆ. ಎಲ್ಲಾ ಊರುಗಳಲ್ಲಿಯೂ ಇದರ ಆಫೀಸ್ ಇದೆ. ಕೆಲವು ಸಣ್ಣ ಸ್ಥಳಗಳಲ್ಲಿ ಟೆಲಿಫೋನ್ ಮುಖಾಂತರ ವೆಸ್ಟರ್ನ್ ಯೂನಿಯನ್‌ಗೆ ಫೋನ್ ಮಾಡಿ ನಂತರ ತಾರು ಮಾಡುತ್ತಾರೆ. ಹಾಗೆ ಫೋನ್ ಉಪಯೋಗಿಸಲು ಸ್ವಲ್ಪ ಹಣ ಕೊಡಬೇಕು. ದೊಡ್ಡ ರೈಲ್ವೆ ಸ್ಟೇಷನ್ನುಗಳಲ್ಲಿ ಮತ್ತು ಹೊಟೇಲುಗಳಲ್ಲಿ ನೇರವಾಗಿ ವೆಸ್ಟರ್ನ್ ಯೂನಿಯನ್‌ಗೆ ತಾರು ಮಾಡುವ ಸೌಲಭ್ಯವಿದೆ.

ಈ ಟೆಲಿಗ್ರಾಂಗಳ ದರ ಶಬ್ದಗಳ ಮೇಲೆ ಅವಲಂಬಿಸಿರುತ್ತವೆ. ಸಾಮಾನ್ಯವಾಗಿ ಹತ್ತು ಶಬ್ದಗಳ ತಾರು ಕಳುಹಿಸುವವರಿಗೆ ಒಂದೇ ದರ. ಕಳುಹಿಸುವವರ ಹೆಸರು ವಿಳಾಸಕ್ಕೆ ಚಾರ್ಜು ಮಾಡುವದಿಲ್ಲ. ಮೂರು ವಿಧವಾದ ತಾರುಗಳನ್ನು ಕಳುಹಿಸಬಹುದು. ರಾತ್ರಿಯ ತಾರು, ದಿನದ ತಾರು, ತಡವಾದ ತಾರು ಎಂದು. ದಿನದ ತಾರಿಗೆ ಬೆಲೆ ಜಾಸ್ತಿ. ರಾತ್ರಿಯ ತಾರಿನಲ್ಲಿ ೨೫ ಶಬ್ದಗಳಿರಬಹುದು. ದರವೂ ಕಡಿಮೆ.

ಪರದೇಶಗಳಿಗೆ ಕಳುಹಿಸುವ ಕೇಬಲ್‌ಗ್ರಾಂ ಮತ್ತು ರೇಡಿಯೋಗ್ರಾಂಗಳು ದಿ ಕಮರ್ಷಿಯಲ್ ಕೇಬಲ್ ಕಂಪೆನಿ, ಮ್ಯಾಕಿ ರೇಡಿಯೋ ಮತ್ತು ರೇಡಿಯೋ ಕಾರ್ಪೋರೇಷನ್ ಆಫ್ ಅಮೇರಿಕ ಮುಖಾಂತರ ಕಳುಹಿಸಲ್ಪಡುತ್ತವೆ. ಒಂದು ವೇಳೆ ಈ ಆಫೀಸುಗಳ ಶಾಖೆಗಳು ಕೆಲವು ಸ್ಥಳಗಳಲ್ಲಿಲ್ಲದಿದ್ದರೆ, ವೆಸ್ಟರ್ನ್ ಯೂನಿಯನ್ ಮುಖಾಂತರ, ಈ ಆಫೀಸುಗಳಿಗೆ ಹೋಗುತ್ತವೆ. ಶಬ್ದ ಒಂದಕ್ಕೆ ೨೦ ಸೆಂಟ್ಸ್ ಪರದೇಶದ ದರ.

## ಪೋಸ್ಟ್ ಆಫೀಸ್

ಪ್ರತಿಯೊಂದು ಚಿಕ್ಕ ದೊಡ್ಡ ಊರುಗಳಲ್ಲಿಯೂ ಟಪಾಲ್ ಕಛೇರಿಗಳಿವೆ. ಒಂದು ಕಾರ್ಡಿಗೆ ೧ ಸೆಂಟ್, ಕವರಿಗೆ ೩ ಸೆಂಟ್ಸ್. ಅಮೇರಿಕದಲ್ಲಿ ಓಡಾಡುವ ವಿಮಾನ ಅಂಚೆಯ ಕವರಿಗೆ ೫ ಸೆಂಟ್ಸ್. ಇಲ್ಲಿಂದ ಪರದೇಶಕ್ಕೆ ಹೋಗುವ ವಿಮಾನ ಕಾಗದದ ಬೆಲೆ ೧೦ ಸೆಂಟ್ಸ್. ಇಂಡಿಯಾಕ್ಕೆ ಕವರಿನಲ್ಲಿ ಹಾಕಿದರೆ ಅರ್ಧ ಔನ್ಸಿಗೆ ೨೫ ಸೆಂಟ್ಸ್. ಇಂಗ್ಲೆಂಡ್ ಮತ್ತು ದಕ್ಷಿಣ ಅಮೇರಿಕಕ್ಕೆ ೧೫ ಸೆಂಟ್ಸ್.

ಹಣ ಕಳುಹಿಸುವವರು ಮನಿಯಾರ್ಡರ್ ಮೂಲಕವಾಗಿ ಯಾಗಲಿ ಅಥವಾ ಪೋಸ್ಟಲ್ ನೋಟುಗಳನ್ನು ಕೊಂಡಾಗಲಿ ಕಳುಹಿಸಬಹುದು. ನಾವಿರುವ ಸ್ಥಳವನ್ನು ಬದಲಾಯಿಸಿದ ಕೂಡಲೇ ನಮ್ಮ ಬದಲಾಯಿಸಿದ ವಿಳಾಸವನ್ನು ಪೋಸ್ಟಾಫೀಸಿನಲ್ಲಿ ಹೋಗಿ ಬದಲಾಯಿಸಬೇಕು. ಆಗ ನಮ್ಮ ಬದಲಾಯಿಸಿದ ವಿಳಾಸಕ್ಕೆ ಕಾಗದವನ್ನು ಪೋಸ್ಟಾಫೀಸಿನವರೇ ಕಳುಹಿಸಿ ಕೊಡುತ್ತಾರೆ.

ನಮ್ಮಲ್ಲಿರುವ ಹಣವನ್ನು ಹೇಗೆ ಜೋಪಾನವಾಗಿಟ್ಟುಕೊಳ್ಳಬೇಕೆಂಬುದು ಇನ್ನೊಂದು ಸಮಸ್ಯೆ. ಟ್ರಾವಲರ್ಸ್ ಚೆಕ್ಕುಗಳ ಮುಖಾಂತರ ನಾವು ನಮ್ಮ ಹಣವನ್ನು ತೆಗೆದುಕೊಂಡು ಹೋಗಬಹುದು. ಈ ಚೆಕ್ಕುಗಳನ್ನು ಬ್ಯಾಂಕುಗಳಲ್ಲಾಗಲಿ ಅಥವಾ ಅಮೇರಿಕನ್ ಎಕ್ಸ್‌ಪ್ರೆಸ್ ಕಂಪೆನಿಯಲ್ಲಾಗಲಿ ಪಡೆಯಬಹುದು. ೧೦೦ ಡಾಲರ್ ಚೆಕ್ಕಿಗೆ ೨೫ ಸೆಂಟ್ಸ್ ಕಮಿಷನ್ ಕೊಡಬೇಕು. ಚೆಕ್ಕು ಕೊಂಡಮೇಲೆ ಅಲ್ಲಿಯೇ ಪ್ರತಿಯೊಂದು ಚೆಕ್ಕಿನ ಮೇಲೂ ಸಹಿ ಮಾಡಬೇಕು. ನಮಗೆ ಹಣ ಬೇಕಾದಾಗ ಪುನಃ ನಾವು ರುಜು ಮಾಡಬೇಕು. ಈ ಚೆಕ್ಕುಗಳಿಗೆ ಹೊಟೇಲಾಗಲಿ, ಅಂಗಡಿಯಾಗಲಿ ಬ್ಯಾಂಕಾಗಲಿ ಹಣ ಕೊಡುತ್ತವೆ.

ಹಣ ಹೆಚ್ಚಿದ್ದರೆ ಅದನ್ನು ಬ್ಯಾಂಕಿನಲ್ಲಿಡಬಹುದು. ೨೦೦ ಡಾಲರುಗಳಿಗಿಂತ ಕಡಿಮೆ ಬ್ಯಾಂಕಿನಲ್ಲಿಡಲು ಆಗುವುದಿಲ್ಲ. ಕೆಲವು ಬ್ಯಾಂಕುಗಳಲ್ಲಿ

ಕಡಿಮೆ ಹಣವನ್ನು ಇಡಬಹುದು. ಇಂತಹ ಬ್ಯಾಂಕುಗಳಲ್ಲಿ ಹಗಲು ಹಣ ತೆಗೆಯ ಬಯಸುವವರಿಗೆ ಸ್ವಲ್ಪ ಹಣ ಚಾರ್ಜ ಮಾಡುತ್ತಾರೆ. ಸೇವಿಂಗ್ಸ್ ಬ್ಯಾಂಕಿನಲ್ಲಿ ಹಣವಿಟ್ಟರೆ ನೂರಕ್ಕೆ ೧|| ಬಡ್ಡಿಯನ್ನು ಕೊಡು ತ್ತಾರೆ.

ಅಮೇರಿಕಾದಲ್ಲಿ ಸಾಮಾನು ಕೊಂಡುಕೊಳ್ಳುವಾಗ ಒಂದೇ ಬೆಲೆ ಹೇಳುತ್ತಾರೆ. ಕೆಲವು ಸಮಯದಲ್ಲಿ ಕಡಿಮೆಬೆಲೆಗೂ ಇಳಿಸುತ್ತಾರೆ. ನನ್ನ ಸ್ನೇಹಿತರೊಬ್ಬರು ನ್ಯೂಯಾರ್ಕಿನಲ್ಲಿ ಒಂದು ಕ್ಯಾಮರಾ ತೆಗೆದುಕೊಂಡರು. ಅಂಗಡಿಯವನು ಮೊದಲು ಅದರ ಬೆಲೆ ಹೇಳಿದ್ದು ೨೫೦ ಡಾಲರ್. ಕೊನೆಗೆ ಅದನ್ನು ಮಾರಿದ್ದು ೧೭೫ ಡಾಲರಿಗೆ.

ವಾಸಕ್ಕೆ ಮನೆ ಮಾಡಿದ ಹೊರತು ಬಟ್ಟೆ ನಾವೇ ಒಗೆದುಕೊಳ್ಳಲು ಆಗುವದಿಲ್ಲ. ಆದ್ದರಿಂದ ಬಟ್ಟೆಗಳನ್ನು ಹತ್ತಿರದ ಅಗಸರ ಮನೆಗೆ ಕೊಡ ಬೇಕಾಗುವದು. ಟೆಲಿಫೋನ್ ಮಾಡಿದರೆ ಅವರೇ ಬಂದು ಬಟ್ಟೆಗಳನ್ನು ತೆಗೆದುಕೊಂಡು ಹೋಗಿ ಒಗೆದು ಶುಭ್ರಮಾಡಿ ಇಸ್ತ್ರಿಮಾಡಿ ಪುನಃ ತಂದು ಕೊಡುತ್ತಾರೆ. ಒಂದೊಂದು ಅರಿವೆಗೂ ಹಣ ನಿಗದಿ ಮಾಡಿದ್ದಾರೆ. ನಾವೇ ಅರಿವೆಗಳನ್ನೂ ತೆಗೆದುಕೊಂಡು ಹೋಗಿ ಅಂಗಡಿಗೆ ಕೊಟ್ಟು, ಒಗೆದಾದ ಮೇಲೆ ತಂದುಕೊಂಡರೆ ದರವನ್ನು ನೂರಕ್ಕೆ ೨೦ರಂತೆ ಕಡಿಮೆ ಮಾಡು ತ್ತಾರೆ.

ಇಲ್ಲಿಯ ಕ್ಷೌರದಂಗಡಿಗಳಲ್ಲಿರುವ ನಾಯಿಂದರು ಮುಖ ಕ್ಷೌರಕ್ಕೆ ಬೇರೆ, ತಲೆಕ್ಷೌರಕ್ಕೆ ಬೇರೆ ಚಾರ್ಜ ಮಾಡುತ್ತಾರೆ. ಒಂದು ಕ್ಷೌರಕ್ಕೆ ೫೦ ಸೆಂಟ್ಸನಿಂದ ಹಿಡಿದು ೧|| ಡಾಲರವರೆಗೆ ಹೋಗುತ್ತದೆ. ಇಲ್ಲಿಯ ಹೆಂಗ ಸರೂ ಕ್ಷೌರ ಮಾಡಿಸಿಕೊಳ್ಳುತ್ತಾರೆ. ಅವರ ಅಂಗಡಿಗಳಿಗೆ ಸೌಂದರ್ಯ ಶಾಲೆ ಎಂದು ಹೆಸರು. ಈ ನಾಯಿಂದರ ಅಂಗಡಿಗಳಲ್ಲಿ ಹೋದ ಕೂಡಲೇ ಮೊದಲು ದರದ ಪಟ್ಟಿಯನ್ನು ನೋಡಬೇಕು.

## ವೈದ್ಯ ಸಹಾಯ

ಅಮೇರಿಕಾದಲ್ಲಿ ಕಾಹಿಲೆ ಬೀಳುವುದು ಬಡವರಿಗೆ ತುಂಬಾ ಕಷ್ಟ. ವೈದ್ಯ ಸಹಾಯ ತುಂಬಾ ಹಣವನ್ನು ತಿನ್ನುತ್ತದೆ. ಆದ್ದರಿಂದ ವೈದ್ಯಕೀಯ ಕಾರಣಗಳಿಗಾಗಿ ಸ್ವಲ್ಪ ಹಣವನ್ನು ತೆಗೆದಿಟ್ಟಿರಬೇಕು. ವಿದ್ಯಾರ್ಥಿಗಳಿಗೆ ಬೇರೆ ಆಸ್ಪತ್ರೆಗಳು ಇರುತ್ತವೆ. ವಿಶ್ವವಿದ್ಯಾನಿಲಯದವರೇ ಅವರ ಯೋಗಕ್ಷೇಮ ನೋಡಿಕೊಳ್ಳುತ್ತಾರೆ. ಹೀಗೆಯೇ ಅನೇಕ ಕೈಗಾರಿಕಾ ಸಂಸ್ಥೆಯವರೂ ತಮ್ಮ ಆಸ್ಪತ್ರೆಯನ್ನಿಟ್ಟುಕೊಂಡಿರುತ್ತಾರೆ. ಇನ್ನು ಬಿಡಿ ಜನಕ್ಕೆ ವೈದ್ಯ ಸಹಾಯ ಬೇಕಾಗಿದ್ದರೆ ಆಯಾ ಊರಿನಲ್ಲಿರುವ ಯಾತ್ರಿಕರ ವೈದ್ಯ ಸಹಾಯ ಸಂಘದವರಿಗೆ ಫೋನ್ ಮಾಡಿದರೆ ಅವರು ಬರುತ್ತಾರೆ. ಒಂದು ಸಲ ಬಂದರೆ ೨ ಡಾಲರ್ ಚಾರ್ಜು ಕೊಡಬೇಕು. ಆಮೇಲೆ ಪ್ರತಿಯೊಂದು ಘಂಟೆಗೂ ೫೦ ಸೆಂಟ್ಸ್ ಕೊಡಬೇಕು. ತುಂಬಾ ವಿಶೇಷವಾದ ವೈದ್ಯಕೀಯ ಸಹಾಯ ಬೇಕಾಗಿದ್ದರೆ ವೈ. ಎಂ. ಸಿ. ಎ. ದ ಕಾರ್ಯದರ್ಶಿಗಳಲ್ಲಾಗಲಿ, ಅಥವಾ ಚರ್ಚುಗಳ ಪೂಜಾರಿಗಳಲ್ಲಾಗಲಿ ವಿಚಾರಿಸಬೇಕು.

## ವಿಹಾರ

ಅನೇಕ ದೊಡ್ಡ ನಗರಗಳಲ್ಲಿ ಮೊದಲಿಗೆ ಬಂದಾಗ ಬರೀ ಮಹಡಿ ಮನೆಗಳು ಕಂಡುಬಂದರೂ ವಿಹಾರಕ್ಕಾಗಿ ಅನೇಕ ಸ್ಥಳಗಳೂ ಮಾರ್ಗ ಗಳೂ ಇವೆ. ಸ್ವಲ್ಪ ದೂರ ನಗರ ಬಿಟ್ಟು ಹೋದರೆ ಪ್ರಕೃತಿಯ ಸೊಬಗನ್ನು ನೋಡಬಹುದು. ಅನೇಕ ಸುಂದರ ಉದ್ಯಾನ ವನಗಳೂ, ಹೂವಿನ ಗಿಡಗಳ ತೋಟಗಳೂ ಇವೆ. ಬೇಸಿಗೆಯ ಕಾಲದಲ್ಲಿ ದಿನಗಟ್ಟಲೆ ವಿಹಾರಕ್ಕಾಗಿ ಜನರು ವನಗಳಲ್ಲಿಯೇ ಕಾಲ ಕಳೆಯುತ್ತಾರೆ. ಪರದೇಶದಿಂದ ಬಂದಂಥಾ ನಾವುಗಳು ನಿಜವಾದ ಅಮೇರಿಕದ ಜೀವನವನ್ನು ಸವಿಯ ಬೇಕಾಗಿದ್ದರೆ, ಬೇಸಿಗೆಯ ಕಾಲದಲ್ಲಿ ಈ ಸಣ್ಣ ಹಳ್ಳಿಗಳಿಗೆ ಹೋಗಿ ಅಮೇರಿಕದ ರೈತರ ಸಂಗಡ ಜೀವಿಸಬೇಕು.

## ಆಟಗಳು

ಅಮೇರಿಕದ ರಾಷ್ಟ್ರೀಯ ಆಟ ಬೇಸ್‌ಬಾಲ್. ಇದಲ್ಲದೇ ಬಾಸ್ಕೆಟ್ ಬಾಲ್, ಫುಟ್‌ಬಾಲ್, ಗಾಲ್ಫ, ಈಜುವದು, ಮತ್ತು, ರೇಸಿಂಗ್ ಈ ಆಟಗಳಲ್ಲಿ ಜನರು ತೊಡಗಿರುತ್ತಾರೆ. ಬೌಲಿಂಗ್, ಬಿಲಿಯರ್ಡ್ಸ್, ಟೇಬಲ್ ಟೆನಿಸ್ ಮುಂತಾದ ಇನ್ನೂ ಅನೇಕ ಆಟಗಳಿವೆ. ಇಲ್ಲಿ ಕ್ರಿಕೆಟ್ ಆಡುವದು ಅಪರೂಪ.

## ಬಾನುಲಿ

ಬಾನುಲಿಯನ್ನು (ಆಕಾಶವಾಣಿ) ವಿಲಾಸಕ್ಕಾಗಿ ಉಪಯೋಗಿಸುತ್ತಾರೆ. ಅಮೇರಿಕದ ಸಾರ್ವಜನಿಕ ಜೀವನ, ಸಂಗೀತ, ನಾಟಕ, ಸುದ್ದಿ ತಿಳಿದುಕೊಳ್ಳುವುದಕ್ಕೆ ಹೆಚ್ಚಾಗಿ ಉಪಯೋಗಿಸುವರು. ಈ ರೇಡಿಯೋ ನಡೆಸುವ ಸಂಸ್ಥೆಯು ಸರಕಾರದ್ದಲ್ಲ. ಕಾರಣ, ಬರಿ ಜಾಹಿರಾತುಗಳೆ ರೇಡಿಯೋ ಕಾರ್ಯಕ್ರಮುಗಳಲ್ಲಿ ಹೆಚ್ಚಾಗಿ ಕಾಣಬರುತ್ತವೆ.

## ಚಲನ ಚಿತ್ರಗಳು

ಚಲನ ಚಿತ್ರಗಳಿಗೆ ಹೆಸರುವಾಸಿಯಾಗಿದೆ ಈ ದೇಶ. ಹಾಲಿವುಡ್ ಒಂದೇ ಸಾಕು. ಲಾಸ್ ಏಂಜೇಲ್ಸ ಪಟ್ಟಣದ ಒಂದು ಭಾಗ ಹಾಲಿವುಡ್. ಇಲ್ಲಿಯೇ ಅನೇಕ ಚಲನಚಿತ್ರ ಸಂಸ್ಥೆಗಳವರು ಚಿತ್ರಗಳನ್ನು ತಯಾರು ಮಾಡುವರು. ವಿದ್ಯಾಭ್ಯಾಸ, ವ್ಯವಸಾಯ ಮತ್ತು ವೈಜ್ಞಾನಿಕ ವಿಷಯವಾದ ಚಲನ ಚಿತ್ರಗಳು ಅತಿ ಉಪಯುಕ್ತವಾಗಿ ತಯಾರಿಸಲ್ಪಟ್ಟಿವೆ. ಪತ್ರಿಕೆಗಳಲ್ಲಿ ಈ ತೆರನಾದ ಚಿತ್ರಗಳ ಟೀಕೆಯನ್ನು ಪ್ರತಿದಿನವೂ ನೋಡಬಹುದು.

## ಸಮಾಜ ಜೀವನ

ಅಮೇರಿಕದ ಒಂದು ವಿಶೇಷವೇನೆಂದರೆ ಎಲ್ಲವನ್ನೂ ಲಕ್ಷಗಟ್ಟಲೆ ತಯಾರಿಸುವದು. ಇಲ್ಲಿ ಜನರು ಓದಲು ಬೇಕಾದಷ್ಟು ಪುಸ್ತಕಗಳಿವೆ. ಪುಸ್ತಕ ಭಂಡಾರಗಳಿವೆ. ಈ ಪುಸ್ತಕ ಭಂಡಾರಗಳೊಳಗೆ ಸಾರ್ವಜನಿಕ

ರೆಲ್ಲಗೂ ಉಚಿತ ಪ್ರವೇಶವಿದೆ. ಪ್ರತಿಯೊಂದು ಸಣ್ಣ ಹಳ್ಳಿಯಲ್ಲಿಯೂ ಒಂದೊಂದು ಪುಸ್ತಕ ಭಂಡಾರ, ವಾಚನಾಲಯಗಳಿವೆ. ಪುಸ್ತಕ ಭಂಡಾರಕ್ಕೆ ಹೋದ ಕೂಡಲೇ ಮೊದಲು ಅಲ್ಲಿರುವ ಗುಮಾಸ್ತಳನ್ನು ಕೇಳಿ ಕಾರ್ಡು ತೆಗೆದುಕೊಳ್ಳಬೇಕು. ಅನಂತರ ಯಾವ ಪುಸ್ತಕವನ್ನು ಬೇಕಾದರೂ ತೆಗೆದುಕೊಂಡು ಓದಬಹುದು.

## ಪತ್ರಿಕೆ ಓದುವದು

ದಿನ ಪತ್ರಿಕೆಯನ್ನು ಓದುವದೊಂದು ಒಳ್ಳೆಯ ಅಭ್ಯಾಸ. ಇದು ಎಲ್ಲರಲ್ಲಿಯೂ ಇರಬೇಕು. ಅಮೇರಿಕಾದಲ್ಲಿ ಸುಮಾರು ೨೨೦೦ ದಿನ ಪತ್ರಿಕೆಗಳೂ, ೧೭೭೦೦ ವಾರ ಪತ್ರಿಕೆಗಳೂ, ೩೫೦ ಮಾಸ ಪತ್ರಿಕೆಗಳೂ ಇವೆ. ಬಿಸಿ ಬಿಸಿ ಸುದ್ದಿ ಸಾಮಾನ್ಯವಾಗಿ ಮೊದಲನೆಯ ಪುಟದ ಬಲಭಾಗದಲ್ಲಿ ಅಚ್ಚಾಗಿರುತ್ತದೆ. ಬಹು ಮುಖ್ಯವಾದ ಸುದ್ದಿ ಎಡಭಾಗದಲ್ಲಿರುತ್ತದೆ. ಅಮೇರಿಕದ ಪತ್ರಿಕೆಗಳ ಪೈಕಿ, ನ್ಯೂಯಾರ್ಕ್ ಟೈಮ್ಸ್, ದಿ ನ್ಯೂಯಾರ್ಕ್ ಹೆರಾಲ್ಡ್ ಟ್ರಿಬ್ಯೂನ್, ದಿ ಕ್ರಿಶ್ಚಿಯನ್ ಸೈನ್ಸ್ ಮಾನಿಟರ್, ದಿ ವಾಷಿಂಗ್ಟನ್ ಪೋಸ್ಟ್, ದಿ ಅಟ್ಲಾಂಟ ಕಾನ್ಸ್ಟಿಟ್ಯೂಷನ್, ದಿ ಸೆಂಟ್ ಲೂಯಿಸ್, ಪೋಸ್ಟ್ ಡಿಸ್ಪ್ಯಾಚ್, ದಿ ಚಿಕಾಗೋ ಟ್ರಿಬ್ಯೂನ್, ದಿ ಸ್ಯಾನ್ ಫ್ರಾನ್ಸಿಸ್ಕೋ ಕ್ರಾನಿಕಲ್, ದಿ ಪೋರ್ಟ್‌ಲ್ಯಾಂಡ್ ಅರೆಗಾನಿಯನ್ ಮತ್ತು ಪಿ.ಎಂ. ಮುಖ್ಯವಾದುವು. ಭಾರತದ ಸುದ್ದಿಗಳನ್ನು ಹೆಚ್ಚಾಗಿ ಪ್ರಕಟಿಸುವ ಪತ್ರಿಕೆಗಳು, ನ್ಯೂಯಾರ್ಕ್ ಟೈಮ್ಸ್, ಹೆರಾಲ್ಡ್ ಟ್ರಿಬ್ಯೂನ್, ಸೆಂಟ್ ಲೂಯಿಸ್ ಪೋಸ್ಟ್ ಡಿಸ್ಪ್ಯಾಚ್.

## ಅಮೇರಿಕನ್ನರ ಸಂಸಾರ

ಅಮೇರಿಕ ತರುಣ ರಾಷ್ಟ್ರವಾದರೂ, ಪ್ರಪಂಚದ ಇಂದಿನ ಬಹು ಶಕ್ತಿಯುತ ರಾಷ್ಟ್ರವಾಗಿ, ಇತರ ದೇಶಗಳ ಮೇಲೆ ತನ್ನ ಪ್ರಭಾವವನ್ನು ಬೀರುತ್ತಿದೆ. ಇದಕ್ಕೆ ಕಾರಣಗಳು ಅನೇಕವಿದ್ದರೂ ಮುಖ್ಯವಾದ ಕಾರಣ ಅವರ ಸುವ್ಯವಸ್ಥಿತವಾದ ಸಮಾಜ ಜೀವನ.

ಸಮಾಜ ಮತ್ತು ಸಂಸಾರ ಜೀವನವನ್ನು ತಿಳಿಯುವದರ ಮೂಲಕ ಒಂದು ದೇಶದ ಜನರನ್ನು ಚೆನ್ನಾಗಿ ತಿಳಿದುಕೊಳ್ಳಲು ಸಾಧ್ಯ. ಇದು ಅಮೇರಿಕಕ್ಕೂ ಅನ್ವಯಿಸುತ್ತದೆ. ಅಮೇರಿಕದ ಸಮಾಜ ಜೀವನ ದೊಡ್ಡ ಪಟ್ಟಣಗಳಾದ ನ್ಯೂಯಾರ್ಕ್, ಚಿಕಾಗೋ ನಗರಗಳಲ್ಲಿ ಹೆಚ್ಚಾಗಿ ಸಿಕ್ಕಲಾರದು. 'ತಾಯಿಗಿಂತ ಬಂಧುವಿಲ್ಲ, ಉಪ್ಪಿಗಿಂತ ರುಚಿಯಿಲ್ಲ' 'ಸ್ವದೇಶಕ್ಕಿಂತ ಮತ್ತೊಂದು ದೇಶವಿಲ್ಲ' ಎಂಬ ಗಾದೆಗೆ, 'ಮನೆಗಿಂತ ಬೇರೊಂದು ಉತ್ತಮ ಸ್ಥಳವಿಲ್ಲಾ' ಎಂಬುದನ್ನು ಸೇರಿಸಿಕೊಂಡರೆ ಒಪ್ಪುತ್ತದೆ.

ಇಲ್ಲಿ ಬಹಳ ಸ್ವಲ್ಪ ಮನೆಗಳಲ್ಲಿ ಜವಾನರಿದ್ದಾರೆ. ಅವರೂ ನೀಗ್ರೋ ಜನ. ಉಳಿದ ಮನೆಗಳಲ್ಲಿ ಕೆಲಸಗಳೆಲ್ಲ ಯಂತ್ರಗಳಿಂದಲೇ ನಡೆಯುತ್ತವೆ. ಮನೆಯ ಕೆಲಸಗಳೆಲ್ಲ, ಮನೆಯ ಯಜಮಾನತಿಯಿಂದಲೊ ಇಲ್ಲವೆ ಇತರ ಮನೆಯ ಜನರಿಂದಲೊ ಮಾಡಲ್ಪಡುತ್ತವೆ. ಅತಿಥಿಗಳಾಗಿ ಮನೆಗೆ ಹೋದವರು ಕೆಲವು ಕೆಲಸಗಳನ್ನೂ ಮಾಡಬೇಕಾಗುತ್ತದೆ. ಅಮೇರಿಕವಲ್ಲಿರುವ ಪದ್ಧತಿಯಂತೆ ಅತಿಥಿಗಳಾಗಿ ಹೋದವರು ಯಜಮಾನಿತಿಯ ಸಂಗಡ ಪಾತ್ರೆ ತೊಳೆಯಲು ಸಹಕರಿಸಬೇಕು. ಇದು ಕಡ್ಡಾಯವಲ್ಲ, ಆದರೆ ನಾಗರಿಕತೆ

## ಸಮಾಜ ಸಂಘಗಳು

ಅಮೇರಿಕದ ಒಂದೊಂದು ಸಮಾಜದಲ್ಲಿಯೂ ಕೆಲವು ಸಂಘಗಳಿರುವದನ್ನು ನೋಡಬಹುದು. ಗಂಡಸರಿಗೆ ರೋಟರಿ ಸಂಘ, ಕಿವಾಯಿನ್ ಸಂಘ, ಹೆಂಗಸರಿಗಾಗಿ ಲೀಗ್ ಆಫ್ ವಿಮೆನ್ ವೋಟರ್ಸ್, ಅಮೇರಿಕದ ಸ್ತ್ರೀಸಂಘ, ಮೊದಲಾದ ಸಂಸ್ಥೆಗಳಿವೆ. ವ್ಯಾಪಾರೋದ್ಯಮನ್ನು ಅಭಿವೃದ್ಧಿ ಮಾಡಲು ಚೇಂಬರ್ ಆಫ್ ಕಾಮರ್ಸ್ ಸಂಘವಿದೆ. ಕೂಲಿಕಾರರ ಸಂಘಗಳಿವೆ. ಸಮಾಜದ ಏಳಿಗೆಗಾಗಿ 4-ಹೆಚ್ ಕ್ಲಬ್ಬುಗಳಿವೆ. ಜೀವನದ ಕೆಲವು ಕೆಲಸಗಳಿಗೆ ಹಣವೆತ್ತುವ ಕಮ್ಯೂನಿಟಿ ಚೆಸ್ಟ್ ಸಂಘವಿದೆ. ಮತ ಬೋಧೆಗಾಗಿ ಆಯಾ ಚರ್ಚುಗಳಿವೆ.

ಪರದೇಶದ ಯಾತ್ರಿಕರು ಈ ಸಂಘಗಳಿಗೆ ಭೇಟಿಕೊಟ್ಟು ಅಮೇರಿಕೆಯ ಜೀವನದ ತಿರುಳನ್ನು ತಿಳಿದುಕೊಳ್ಳಬೇಕು. ಈ ಸಂಘಗಳು ಭಾರತೀಯ ಅಥವಾ ಪರದೇಶದವರ ನಡೆ ನುಡಿ, ಸಂಸ್ಕೃತಿಗಳನ್ನು ತಿಳಿದುಕೊಳ್ಳಲು ಆತುರರಾಗಿರುತ್ತಾರೆ. ನಮ್ಮದನ್ನು ಅವರಿಗೆ ತಿಳಿಸಿ, ಅವರ ಸಂಸ್ಕೃತಿಯನ್ನು, ನಾಗರಿಕತೆಯನ್ನು ನಾವು ಅರಿತುಕೊಳ್ಳಲು ಅವಕಾಶಗಳಿವು.

## ಮತೀಯ ಸಂಸ್ಥೆಗಳು

ಅಮೇರಿಕದಲ್ಲಿ ಮುಖ್ಯವಾದ ಎರಡು ಮತಗಳ ಪ್ರಾಬಲ್ಯವಿದೆ. ಕ್ರೈಸ್ತ ಮತ ಮತ್ತು ಯೆಹೂದಿ ಮತ. ಕ್ರೈಸ್ತರಲ್ಲಿ ಪುನಃ ಪ್ರಾಟೆಸ್ಟಂಟರು ಮತ್ತು ರೋಮನ್ ಕ್ಯಾಥೋಲಿಕರೆಂದು ಎರಡು ವಿಧ.

ಪ್ರಾಟೆಸ್ಟೆಂಟ್ ಪಂಥಕ್ಕೆ ಸೇರಿದವರು ಸುಮಾರು ೮೦ ಮಿಲಿಯನ್ ಜನರಿದ್ದಾರೆ. ಪ್ರಾಟೆಸ್ಟೆಂಟರಲ್ಲಿಯೂ ಅನೇಕ ಪಂಥಗಳಿವೆ. ಮೆಥಾಡಿಸ್ಟ್, ಪ್ರೆಸ್ಬಿಟೇರಿಯನ್, ಬ್ಯಾಪ್ಟಿಸ್ಟ್, ಎಪಿಸ್ಕೋಪಿಯನ್ ಮತ್ತು ಲ್ಯೂಥರನ್ ಗುಂಪುಗಳು ಪ್ರಾಮುಖ್ಯವಾದವು. ಈ ಗುಂಪುಗಳ ಮುಖ್ಯ ಉದ್ದೇಶ ಒಂದೇ ಆದರೂ, ವಿಧಾನ, ಕಾರ್ಯಕ್ರಮ ಬೇರೆ ಬೇರೆ. ನ್ಯೂಯಾರ್ಕ್ ನಗರದಲ್ಲಿರುವ ಫೆಡರಲ್ ಕೌನ್ಸಿಲ್ ಆಫ್ ಚರ್ಚಸ್ ಆಫ್ ಕ್ರೈಸ್ಟ್ ಇನ್ ಅಮೇರಿಕ ಎಂಬ ಸಂಸ್ಥೆ, ಉಳಿದ ಸಂಸ್ಥೆಗಳಿಗೆಲ್ಲ ಕೇಂದ್ರ.

ರೋಮನ್ ಕ್ಯಾಥೋಲಿಕ್ ಪಂಗಡಕ್ಕೆ ೨೨ ಮಿಲಿಯನ್ ಜನರಿದ್ದಾರೆ. ಇದರಲ್ಲಿಯೂ ಅನೇಕ ಗುಂಪುಗಳಿದ್ದರೂ ಎಲ್ಲರೂ ಒಂದೇ ಆಡಳಿತ ಮತ್ತು ಮಾರ್ಗದರ್ಶನಕ್ಕೆ ಸೇರಿದವರಾಗಿದ್ದಾರೆ. ರಾಜಧಾನಿ ವಾಷಿಂಗ್ಟನ್ನಿನಲ್ಲಿರುವ ದಿ ನ್ಯಾಷನಲ್ ಕ್ಯಾಥೋಲಿಕ್ ವೆಲ್‌ಫೇರ್ ಕಾನ್‌ಫರೆನ್ಸ್ ಸಂಸ್ಥೆ, ಕ್ಯಾಥೋಲಿಕ್ ರಾಷ್ಟ್ರೀಯ ಕೇಂದ್ರ ಸಂಸ್ಥೆ.

ಯೆಹೂದಿ ಪಂಥಕ್ಕೆ ಸುಮಾರು ೫ ಮಿಲಿಯನ್ ಜನ ಸೇರಿದವರಿದ್ದಾರೆ. ಸಂಪ್ರದಾಯವನ್ನು ಚಾಚೂ ತಪ್ಪದೆ ನಡೆಸಿಕೊಂಡು ಬಂದಿ

ದ್ದಾರೆ ಈ ಯೆಹೂದಿಯರು. ಆದರೂ ಕೆಲವರು ಸುಧಾರಿಸಿದ್ದಾರೆ. ಶನಿವಾರ ಪೂಜೆಯ ಬದಲು ಆದಿತ್ಯವಾರ ಮಾಡುವುದು, ಸಾರ್ವಜನಿಕ ಸ್ಥಳಗಳಲ್ಲಿ ಪ್ರಾರ್ಥಿಸುವುದು, ಸುಧಾರಣೆಗಳಲ್ಲಿ ಕೆಲವು.

ಈ ಮತೀಯ ಸಂಸ್ಥೆಗಳು ಭಾನುವಾರ ಪ್ರಾರ್ಥನೆಯೊಂದನ್ನೇ ಧ್ಯೇಯವಾಗಿಟ್ಟುಕೊಂಡಿಲ್ಲ. ಇದರ ಜೊತೆಗೆ ಹೆಂಗಸರು, ಮಕ್ಕಳು ವಿದ್ಯಾರ್ಥಿಗಳು ನಕ್ಕು ನಲಿದಾಡಲು ಕೆಲವು ಸಂತೋಷ ಕೂಟ, ಚರ್ಚಾ ಕೂಟಗಳನ್ನೂ ಏರ್ಪಡಿಸುತ್ತಾರೆ. ಪರದೇಶದ ಮತಗಳ ವೇದಾಂತವನ್ನು ತಿಳಿದುಕೊಳ್ಳಲು ಕುತೂಹಲಿಗಳಾಗಿರುತ್ತಾರೆ ಭಾರತೀಯ ವಿದ್ಯಾರ್ಥಿಗಳನ್ನು ಕಂಡರೆ ಈ ಚರ್ಚುಗಳ ಪೂಜಾರಿಗಳು ಬಿಡುವದೇ ಇಲ್ಲ. ಈ ಪ್ರಭಾವ, ಕೀರ್ತಿ **ಸ್ವಾಮಿ ವಿವೇಕಾನಂದರಿಗೆ** ಸಲ್ಲತಕ್ಕದ್ದು

ಈ ಚರ್ಚುಗಳಲ್ಲದೆ ಇತರ ವಿಧವಾದ ಸಾಮಾಜಿಕ ಕೆಲಸ ಮಾಡಲು ಪ್ರಾಟೆಸ್ಟಂಟರ ಪರವಾಗಿ ವೈ. ಎಂ. ಸಿ. ಎ. ಮತ್ತು ವೈ. ಡಬ್ಲ್ಯು. ಸಿ. ಎ. ಗಳಿವೆ. ಅಮೇರಿಕದ ಈ ಮತಗಳನ್ನು ಅರಿಯದೆ ನಿಜವಾದ ಅಮೇರಿಕವನ್ನು ತಿಳಿದುಕೊಳ್ಳಲು ಸಾಧ್ಯವಾಗಲಾರದು.

## ಕೆಲವು ಸಾಮಾಜಿಕ ಪದ್ಧತಿಗಳು

ಒಂದು ಹೊಸ ದೇಶದ ಪದ್ಧತಿಯನ್ನು ಕಲಿತುಕೊಳ್ಳಲು ಕಾಲ ಬೇಕಾಗುವುದು. ಮೊದಲಿಗೆ ಬಂದಾಗ ಈ ಕೆಲವು ವಿಷಯಗಳಲ್ಲಿ ತುಂಬಾ ಎಚ್ಚರಿಕೆಯಿಂದಿರಬೇಕು.

### ಕಾಲ ನಿಯಮ

ನಾವು ಯಾರ ಸಂಗಡಲಾದರೂ ಮಾತನಾಡಬೇಕೆಂದು ಇಷ್ಟಪಟ್ಟರೆ, ಮೊದಲು ಅವರಿಗೆ ಬರೆದಾಗಲಿ ಅಥವಾ ಫೋನ್ ಮಾಡಿಯಾಗಲಿ ಕಾಲ ನಿಗದಿ ಮಾಡಿಕೊಂಡು, ಆ ಹೊತ್ತಿಗೆ ಸರಿಯಾಗಿ ಹೋಗಿ ಅವರನ್ನು ಭೇಟಿ ಮಾಡಬೇಕು. ಈ ಜನಕ್ಕೆಲ್ಲಾ ಸಾಮಾನ್ಯವಾಗಿ ಕಾರ್ಯದರ್ಶಿನಿಯೊಬ್ಬ

ಳಿದ್ದು ಕಾರ್ಯಕ್ರಮವನ್ನು ಗೊತ್ತು ಮಾಡುತ್ತಾಳೆ. ಕಾಲ ನಿಗಡಿಯಾದ ಹೊತ್ತಿಗೆ ತಿಳಿಸದೆ ಹೋಗದಿರುವುದು ಒಳ್ಳೆಯದಲ್ಲ. ಗಡಿಯಾರ ಅಮೇರಿಕದ ಜೀವನದಲ್ಲಿ ಬಹು ಪ್ರಭಾವ ಶಾಲಿಯಾದ ಪಾತ್ರ ವಹಿಸಿದೆ. ಹೊತ್ತಿಗೆ ಸರಿಯಾಗಿ ಹೋಗುವದು ಒಂದು ಒಳ್ಳೆಯ ಸಂಸ್ಕೃತಿಯ ಗುರುತಾಗಿದೆ.

## ತಮಾಷೆ

ಅಮೇರಿಕನ್ನರಿಗೆ ತಮಾಷೆ ಬೇಕು. ಇಂಗ್ಲೀಷ್ ಜನರಂತೆ ಮುಖ ಗಂಟು ಹಾಕಿಕೊಂಡಿರುವುದು ಈ ಜನಕ್ಕೆ ಆಗದು. ಕಂದಾಚಾರ ಪದ್ಧತಿ ಇವರಿಗೆ ಸಲ್ಲದು. ನಮ್ಮ ಬೆನ್ನಿನ ಮೇಲೊಂದು ಸಲ ಚಪ್ಪರಿಸಿದರೆ, ಅದು ಒಳ್ಳೆಯತನವನ್ನು ತೋರುವ ಚಿನ್ಹೆ. ತಮಾಷೆಗಾಗಿ ಸ್ವಲ್ಪ ಪೀಡಿಸಿದರೆ ಅವರನ್ನು ತುಂಬಾ ಪ್ರೀತಿಸುತ್ತಾರಾಗಿ ತಿಳಿಯಬೇಕು. ಈ ತಮಾಷೆಯ ಗುಣ ಜನರಲ್ಲಿ ಹೊಂದಿಕೊಂಡು ಹೋಗಲು ತುಂಬಾ ಸಹಾಯ ಮಾಡುತ್ತದೆ.

## ಸಾರ್ವಜನಿಕತೆ

ಪ್ರಜಾಪ್ರಭುತ್ವ ಅಮೇರಿಕನ್ನರ ಜೀವನದ ತಿರುಳು. ಪ್ರಜಾಪ್ರಭುತ್ವ ತಮ್ಮ ಹಕ್ಕು ಹೇಗೋ ಅದರ ರಕ್ಷಣೆಯನ್ನು ಹಾಗೇ ಮಾಡಬೇಕೆಂದು ತಿಳಿದಿದ್ದಾರೆ. ಟಿಕೆಟ್ಟು ಕೊಂಡುಕೊಳ್ಳುವದಕ್ಕಾಗಿ ಸಾಲಾಗಿ ನಿಲ್ಲುವದು, ತಮ್ಮ ಸರದಿಗಾಗಿ ಕಾಯುವದು, ಸಾರ್ವಜನಿಕ ಸ್ಥಳಗಳನ್ನು ಶುಭ್ರವಾಗಿಡಲು ತಮ್ಮ ಸೇವೆ ಸಲ್ಲಿಸುವದು, ನೆಲದ ಮೇಲೆ ಕಾಗದದ ಚೂರುಗಳನ್ನು ಎಸೆಯದಿರುವದು, ಪಾಯಖಾನೆ ಮನೆ ಚೊಕ್ಕಟವಾಗಿಡುವುದು, ರಸ್ತೆಯಲ್ಲಿ ಸಿಂಬಳ ಸೀದದಿರುವದು, ಉಗುಳದಿರುವದು, ಇವೇ ಮುಂತಾದ ಕೆಲವು ಹಕ್ಕುಗಳನ್ನು ರಕ್ಷಣೆ ಮಾಡುತ್ತಾರೆ. ಪರದೇಶದಿಂದ ಬಂದವರು ಇವರನ್ನು ಅನುಕರಿಸಬೇಕು.

## ಉದಾರತೆ

ಯಾರಾದರೂ ಊಟಕ್ಕಾಗಲಿ] ಅಥವಾ ಕಾಫಿ ತಿಂಡಿಗಾಗಲಿ, ಆಹ್ವಾನ ಕೊಟ್ಟರೆ, ತತ್‌ಕ್ಷಣ ನಮ್ಮ ನಿರ್ಧಾರವನ್ನು ತಿಳಿಸುವ ಉತ್ತರ ವನ್ನು ಕಳುಹಿಸಬೇಕು. ಬರುತ್ತೇವೆಂದು ಬರೆದು ಅಲ್ಲಿಗೆ ಹೋಗದೆ ಇರ ಬಾರದು. ಒಂದು ವೇಳೆ ಹೋಗಲು ಅನಾನುಕೂಲವಾದರೆ ಮೊದಲೇ ತಿಳಿಸಬೇಕು. ಅವರ ಉದಾರತೆಯನ್ನು ಸ್ವೀಕರಿಸಿದ ನಂತರ ಮರುದಿನ ಅವರಿಗೆ ಅವರ ಉದಾರತೆಯನ್ನು ಸ್ಮರಿಸಿ ಕಾಗದ ಬರೆಯಬೇಕು. ಮನೆಗೆ ಬಂದಾಗಲೆಲ್ಲಾ ಪ್ರತಿನಿತ್ಯ ಚಹಾ ಕೊಡುವುದು ಅಮೇರಿಕದ ಪದ್ಧತಿಯಲ್ಲ.

## ಸ್ತ್ರೀ ಸಮಾನತೆ

ಕಳೆದ ಮೂವತ್ತು ವರ್ಷಗಳಿಂದೀಚೆಗೆ ಅಮೇರಿಕದ ಸಮಾಜ ಜೀವನದಲ್ಲಿ ಸ್ತ್ರೀ ಸಮಾನತೆಯ ವಿಷಯದಲ್ಲಿ ಆದಷ್ಟು ಪ್ರಗತಿ ಇನ್ನಾವ ದೇಶದಲ್ಲೂ ಆಗಿಲ್ಲವೆಂದು ಧಾರಾಳವಾಗಿ ಹೇಳಬಹುದು. ೩೦ ವರ್ಷಗಳ ಹಿಂದೆ ಈ ವಿಷಯದಲ್ಲಿ ಮಾತ್ರ ಒಂದು ಸಂಪ್ರದಾಯ ಬೆಳೆದು ಬಂದಿತ್ತು. ಅನೇಕ ಕಾರಣಗಳಿಗಾಗಿ ಈ ಸಂಪ್ರದಾಯಗಳು ಮುರಿದು ಬಿದ್ದು ಸ್ತ್ರೀಯ ರಿಗೆ ಪುರುಷರ ಜೊತೆಗೆ ಸಮಾನವಾದ ಹಕ್ಕುಗಳೂ ಸ್ವಾತಂತ್ರ್ಯವೂ ಲಭಿಸಿವೆ. ಈ ಬದಲಾವಣೆಗಳು ಸಾಮಾಜಿಕ ಜೀವನಕ್ಕೆ ಒಳ್ಳೆಯದೋ ಕೆಟ್ಟದೋ, ಅಂತೂ ಬದಲಾವಣೆ ಬಂದುಹೋಗಿವೆ. ಬೇರೆ ದೇಶಗಳಿಂದ ಬರುವವರು ಈ ಬದಲಾವಣೆಗಳನ್ನು ತಿಳಿದುಕೊಂಡಿರಬೇಕು. ಪುರುಷರಿ ಗಿರುವಂತೆ ಈ ಸ್ತ್ರೀ ಸ್ವಾತಂತ್ರ್ಯ ಮೊದಲಿನಿಂದಲೂ ಬೆಳೆದು ಬಂದಿದೆ. ಹೊಸಬರು ಜಾಗ್ರತೆಯಾಗಿ ಹೊಂದಿಕೊಳ್ಳಲು ಕಷ್ಟ. ಈ ಸ್ವಾತಂತ್ರ್ಯ ವನ್ನು ತಪ್ಪು ತಿಳಿದುಕೊಳ್ಳಬಾರದು. ಉದಾಹರಣೆಗಾಗಿ ಒಬ್ಬ ಯುವಕ ಯುವತಿ, ಜೊತೆಯಾಗಿ ರೈಲಿನಲ್ಲಾಗಲಿ ಬಸ್ಸಿನಲ್ಲಾಗಲಿ ಕುಳಿತುಕೊಂಡು ಮಾತನಾಡಿದರೆ ಅದನ್ನು ತಪ್ಪು ತಿಳಿಯಲಾಗದು. ಹಾಗೆಯೇ ಆ ಸಂಧಿ

ಯನ್ನು ದೊಡ್ಡದು ಮಾಡಿ ಹತ್ತಿರ ಸಂಬಂಧ ಬೆಳೆಯಿಸುವ ದುರಾಲೋಚನೆ ಮಾಡಲಾಗದು. ಹಾಗೆ ಮಾತನಾಡಿ ಜೊತೆ ಕೂಡುವದು (ಹೊಸಬರಾದರೂ) ಅಮೇರಿಕನ್ನರ ಗುಣಗಳಲ್ಲೊಂದು.

ಪುರುಷರಿಗೂ ಸ್ತ್ರೀಯರಿಗೂ ಸಮಾನವಾದ ಹಕ್ಕು ಬಾಧ್ಯತೆಗಳಿರುವುವೆಂದು ಅಮೇರಿಕನ್ನರ ಮತ. ಅದನ್ನು ಗಳಿಸಲು ಅವರು ಪ್ರಯತ್ನ ಪಡುತ್ತಾರೆ. ಸ್ತ್ರೀಯರಿಗೆ ಇಲ್ಲಿ ಯಾವಾಗಲೂ ಅಗ್ರಪೂಜೆ. ಹಿಂದಿನಿಂದಲೂ ನಡೆದು ಬಂದ ಪದ್ಧತಿ. ಬಾಗಿಲು ತೆರೆದಾಗ, ಮೊದಲು ಸ್ತ್ರೀಗೆ ಪ್ರವೇಶ, ಆಮೇಲೆ ಗಂಡಸಿಗೆ. ಬಸ್ಸು, ರೈಲು, ಹತ್ತುವಾಗಲೂ ಹಾಗೆಯೇ.

ಸ್ತ್ರೀಯನ್ನು ಗಂಡಸಿಗೆ ಮೊದಲು ಭೇಟಿ ಮಾಡಿಸಿದಾಗ ಇಬ್ಬರೂ ಕೈ ಕೈ ಕುಲುಕುವದು ಆ ಸ್ತ್ರೀಯ ಅಭೀಷ್ಟದ ಮೇಲೆ ಹೋಗುತ್ತದೆ. ಆಕೆಯೇ ಕೈ ಚಾಚಿದರೆ, ಗಂಡಸು ಕೈ ಕುಲಕಬಹುದು. ಆದರೆ ಇತ್ತೀಚಿನ ಹೆಂಗಸರು ವ್ಯಾಪಾರ, ಕೈಗಾರಿಕೆ ಮತ್ತು ಸಾರ್ವಜನಿಕ ಜೀವನಗಳಲ್ಲಿ ಬಂದಿರುವದರಿಂದ ಹಿಂದಿನ ಸಾಂಪ್ರದಾಯಿಕ ಪದ್ಧತಿಗಳು ಕಡಿಮೆಯಾಗುತ್ತಾ ಬಂದಿವೆ.

## ಆತ್ಮ ಗೌರವ

"ರೋಮಿನಲ್ಲಿರುವಾಗ ರೋಮನ್ನರಂತೆ ವರ್ತಿಸಬೇಕು" ಎಂಬ ನಾಣ್ಣುಡಿಯು ಇರುವುದಾದರೂ ಇದು ಸತ್ಯ. ಆಯಾ ದೇಶದ ಸಂಸ್ಕೃತಿ ನಾಗರಿಕತೆ ಮತ್ತು ಸಾಮಾಜಿಕ ನಡೆನುಡಿಗಳನ್ನು ತಿಳಿದುಕೊಳ್ಳಬೇಕಾದುದೇನೋ ಅವಶ್ಯಕ. ಆದರೆ ನಮ್ಮ ಆತ್ಮ ಗೌರವಕ್ಕೆ ಧಕ್ಕೆ ಬರುವಂತಹ ಆಚಾರಗಳನ್ನು ಮಾಡಬಾರದು. ನಮ್ಮ ನಡೆ ಎಲ್ಲಿ ಅವಶ್ಯಕವೋ ಅಲ್ಲಿ ತೋರಿಸಲೇಬೇಕು. ಅದಕ್ಕೊಂದು ವೈವಿಧ್ಯತೆ ಇದೆ. ಬೆಲೆ ಇದೆ. ಸಮಾಜದ ಬೆಳವಣಿಗೆಗೆ ಈ ತೆರನಾದ ಪರಕೀಯ ನಡೆನುಡಿಗಳೂ ಅವಶ್ಯಕ. ಉದಾಹರಣೆಗೆ ಸಂತೋಷ ಕೂಟಗಳಲ್ಲಿ ಮದ್ಯಪಾನ ಮಾಡುವದೊಂದು ಮೊದಲಿನಿಂದ ಬಂದ ಪದ್ಧತಿ. ಇದು ಇತ್ತೀಚೆಗೆ ಜಾಸ್ತಿಯಾಗಿದೆ. ಆದರೆ

ಮದ್ಯಪಾನ ಮಾಡದಿರುವವರು ಅನೇಕರಿದ್ದಾರೆ. ಹಾಗೆ ಮಾಡುವದಿಲ್ಲ ವೆಂದು ನಯವಾಗಿ ನಿರಾಕರಿಸುವದು ತಪ್ಪೇನಲ್ಲ. ವೈಯಕ್ತಿಕ ನೀತಿ ನಿಯಮಗಳಿಗೆ ಯಾವಾಗಲೂ ಬೆಲೆ ಇದ್ದೇ ಇರುವುದು. ಅಮೇರಿಕಾ ಇಗ್ಲೆಂಡುಗಳಿಗೆ ಬಂದಾಗ ಫರಂಗಿಯವರಂತೆ ನಡೆದರೇನೆ ಜೀವನ, ಇಲ್ಲದಿದ್ದರೆ ಇಲ್ಲ ಎಂಬ ಭಾವನೆ ಶುದ್ಧ ತಪ್ಪು. ಹೆಚ್ಚಾಗಿ ನಮ್ಮ ಜೀವನ, ನಡೆನುಡಿ ಗಳನ್ನು ತೋರಿಸಿದರೆ ಈ ಜನ ಹೆಚ್ಚು ಆಸಕ್ತಿಯಿಂದ ನಮ್ಮನ್ನು ಬರಮಾಡಿ ಕೊಳ್ಳುತ್ತಾರೆ. ನೋಡಿ, ಕೇಳಿ, ಕೆಲವು ಅನುಭವಿಸಿ ಅನಂದಿಸುತ್ತಾರೆ.

ಸಾಮಾನ್ಯವಾಗಿ ಪರದೇಶಗಳಿಗೆ ಬರುವವರು ಇಡೀ ಭಾರತ ಸುತ್ತಿ ಭಾರತದ ಬಗ್ಗೆ ಸಾಮಾನ್ಯ ಜ್ಞಾನ ಸಂಪಾದಿಸಿಕೊಂಡು ಬರಬೇಕು. ಕಾಲೇಜಿನಲ್ಲಿ ಕಲಿಯಲಿಕ್ಕಲ್ಲದೆ ಬರೀ ಸಾಂಸ್ಕೃತಿಕ ಪ್ರತಿನಿಧಿಗಳಾಗಿ ಬಂದರೂ ಪರವಾಯಿಲ್ಲ. ಅದೇ ಹೆಚ್ಚು ಉಪಯೋಗ.

ಎಳೆ ಹರೆಯದ ಯುವಕರು ಬರುವದಕ್ಕಿಂತ ಬಲಿತ ಜ್ಞಾನದ ಚಾಳೀಸದ ಮಂದಿ ಬಂದರೆ ದೇಶದ ಉತ್ತಮ ಪ್ರದರ್ಶನವಾದೀತು. ಪ್ರಚಾರ ಮಾಡಿ, ಅಮೇರಿಕದ ಜೀವನ ತಿಳಿದುಕೊಂಡು ಹೋಗಬಹುದು. ಹೊಸ ದೇಶ ನೋಡುವದು ಒಳ್ಳೆಯದು. ಡಿಗ್ರಿ ಮೋಹಕ್ಕಾಗಿ ಇಲ್ಲಿಗೆ ಬರದೆ, ಹೊಸ ದೇಶ, ಹೊಸ ಪ್ರಪಂಚ, ಹೊಸ ಸಂಸ್ಕೃತಿ, ನಡೆ ನುಡಿ, ನಾಗರಿಕತೆ ತಿಳಿದು ಕೊಂಡು ಹೋಗಲು ಬಂದರೆ ನಮ್ಮ ದೇಶಕ್ಕೂ ಉಪಕಾರವಾದೀತು.

———

# ಅಮೇರಿಕದ ವಿಶ್ವವಿದ್ಯಾನಿಲಯಗಳು

ಅಮೇರಿಕದ ವಿಶ್ವವಿದ್ಯಾನಿಲಯಗಳಲ್ಲಿ ಹಿಂದೆಂದೂ ಸೇರದಷ್ಟು ವಿದ್ಯಾರ್ಥಿಗಳು ಈಗ ಸೇರಿದ್ದಾರೆ. ನ್ಯೂಯಾರ್ಕ್ ಟೈಮ್ಸ್ ಪತ್ರಿಕೆಯ ಪ್ರತಿನಿಧಿಗಳು, ೧೦೦ ವಿದ್ಯಾ ಸಂಸ್ಥೆಗಳನ್ನು ಸಂದರ್ಶಿಸಿ, ಹಿಂದಿನ ವರ್ಷಗಳಿಗಿಂತ ಶೇಕಡ ೧೧ ರಷ್ಟು ವಿದ್ಯಾರ್ಥಿಗಳ ಸಂಖ್ಯೆ ಈಗ ಜಾಸ್ತಿಯಾಗಿದೆ ಎಂದು ತೀರ್ಮಾನಕ್ಕೆ ಬಂದಿದ್ದಾರೆ.

ಯುದ್ಧಕ್ಕೆ ಮೊದಲು ವಿದ್ಯಾರ್ಥಿಗಳ ಸಂಖ್ಯೆ ೧,೫೦೦,೦೦೦ ಇತ್ತು. ಈಗ ಬಂದು ಸೇರಿದ ಹತ್ತು ಲಕ್ಷ ವಿದ್ಯಾರ್ಥಿಗಳ ದೆಸೆಯಿಂದ ವಿಶ್ವವಿದ್ಯಾನಿಲಯದ ಆಡಳಿತಗಾರರಿಗೆ ಅನೇಕ ಸಮಸ್ಯೆಗಳು ಬಂದೊದಗಿವೆ. ೪೦-೫೦ ವಿದ್ಯಾರ್ಥಿಗಳಿರುವ ತರಗತಿಯಲ್ಲಿ ೯೦-೧೦೦ ವಿದ್ಯಾರ್ಥಿಗಳಿದ್ದಾರೆ. ವಿದ್ಯಾರ್ಥಿಗಳಿಗೆ ವಾಸಕ್ಕೆ ಗೃಹಗಳೇ ಇಲ್ಲ. ಪ್ರಯೋಗ ಶಾಲೆಗಳನ್ನೂ ಕೂಡ ಹಗಲೂ ರಾತ್ರಿ ಉಪಯೋಗಿಸುವ ಸಂದರ್ಭ ಬಂದಿದೆ. ಇನ್ನು ಶಿಕ್ಷಕರ ಕೊರತೆಯಾಗಿ ತುಂಬ ತೊಂದರೆಯಾಗಿ ಹೋಗಿದೆ.

ಈ ವಿಪರೀತಾವಸ್ಥೆ ಇಷ್ಟಕ್ಕೆ ನಿಲ್ಲಲಾರದು. ಅಮೇರಿಕದ ಸುಪ್ರಸಿದ್ಧ ವಿದ್ಯಾ ಪ್ರವೀಣರ ಮಾತಿನಂತೆ ಈ ಪ್ರವಾಹ ಇನ್ನೂ ನಾಲ್ಕೈದು ವರ್ಷಗಳು ಹೀಗೆಯೇ ಸಾಗಬಹುದು. ವಿದ್ಯಾರ್ಥಿಗಳ ಸಂಖ್ಯೆ ೩,೦೦೦,೦೦೦ ಕ್ಕೇರಬಹುದು. ಈ ಪ್ರವಾಹಕ್ಕೆ ಮುಖ್ಯ ಕಾರಣ, ಯುದ್ಧ ಮುಗಿಸಿಕೊಂಡು ಹಿಂತಿರುಗಿ ಬಂದ ಅಮೇರಿಕನ್ ಸೈನಿಕರು ಕಾಲೇಜಿಗೆ ಸೇರುತ್ತಿರುವದೇ. ಈ ಸೈನಿಕ ವಿದ್ಯಾರ್ಥಿಗಳಿಗೆ ಸರಕಾರದಿಂದ ವರ್ಷಕ್ಕೆ ೫೦೦ ಡಾಲರು (೨೫೦೦ ರೂ.) ಫೀ ಅಲ್ಲದೆ ತಿಂಗಳು ಒಂದಕ್ಕೆ ೬೦ ರಿಂದ ೯೦ ಡಾಲರುಗಳ ವರೆಗೆ ವಿದ್ಯಾರ್ಥಿ ವೇತನವೂ ಸಿಕ್ಕುವದು. ಅವರು ತಮ್ಮ ವಿದ್ಯೆ ಮುಗಿಸುವವರೆಗೂ ಈ ವೇತನ ಕೊಡಲಾಗುವದು. ಸೈನಿಕ ವಿದ್ಯಾರ್ಥಿ ಮದುವೆಯಾಗಿ ಮಕ್ಕಳಿದ್ದರೆ ಆತನಿಗೆ ಇನ್ನೂ ಹೆಚ್ಚಿನ ವೇತನ ಕೊಡಲಾಗುವದು.

# ಅಮೇರಿಕದ ವಿಶ್ವವಿದ್ಯಾನಿಲಯಗಳು

ವಿದ್ಯಾರ್ಥಿಗಳ ಪ್ರವೇಶ ಸಂಖ್ಯೆ ಮೀರಿದ್ದರೂ ಕೆಲವು ಕಾಲೇಜುಗಳು ಹೆಚ್ಚು ವಿದ್ಯಾರ್ಥಿಗಳನ್ನು ಸೇರಿಸಿಕೊಳ್ಳುತ್ತವೆ. ಬಹು ಕಾಲದಿಂದ ಹೆಸರಾಂತ ವಿಶ್ವವಿದ್ಯಾನಿಲಯಗಳಿಗಂತೂ, ವಿದ್ಯಾರ್ಥಿಗಳು ಕುರಿಮಂದೆಯಂತೆ ಪ್ರವೇಶಕ್ಕಾಗಿ ಕುತೂಹಲದಿಂದ ಕಾದು ಕುಳಿತಿರುತ್ತಾರೆ. ಮಿತಿಯಾಗಿ ಕೊಡಲ್ಪಡುವ ಪ್ರವೇಶಗಳಿಗೆ ೧೦ರಷ್ಟು ಅರ್ಜಿಗಳು ಬಂದಿರುತ್ತವೆ. ಸಾಮಾನ್ಯವಾಗಿ ನೂರಕ್ಕೆ ೧೦ ರಂತೆ ವಿದ್ಯಾರ್ಥಿಗಳು ಹೆಚ್ಚಿದರೂ, ಕೊಲಂಬಿಯಾ, ನ್ಯೂಯಾರ್ಕ್, ಬರ್ಕ್ಲೆ ವಿಶ್ವವಿದ್ಯಾನಿಲಯಗಳಲ್ಲಿ ನೂರಕ್ಕೆ ೨೫ ರಷ್ಟು ಹೆಚ್ಚಿದೆ. ಇವರನ್ನು ಸೇರಿಸಿಕೊಳ್ಳುವುದಕ್ಕಾಗಿ ಹೊಸ ಹೊಸ ಕಟ್ಟಡಗಳನ್ನೂ ಕಟ್ಟಿದ್ದಾರೆ. ಈ ಅತಿ ವೃಷ್ಟಿಯ ಫಲವಾಗಿ ಬಹುಮಂದಿ ವಿದ್ಯಾರ್ಥಿಗಳು ಜಾಗವಿಲ್ಲದೆ ಹಿಂತಿರುಗಬೇಕಾಗಿದೆ. ಸೈನಿಕ ವಿದ್ಯಾರ್ಥಿಗಳಿಗೆ ಮೊದಲು ಪ್ರವೇಶ ಕೊಡಲಾಗುವದು. ನಂತರ ಉಳಿದವರಿಗೆ. ಅನೇಕ ವಿದ್ಯಾರ್ಥಿಗಳು ತಮಗೆ ಇಷ್ಟವಿಲ್ಲದ ಕಾಲೇಜುಗಳಿಗೆ,ಗತ್ಯಂತರವಿಲ್ಲದೆ ಹೋಗಬೇಕಾದ ಸಂದರ್ಭ ಬಂದಿದೆ. ವಧುವಿನ ಜರತಾರಿ ಪಿತಾಂಬರಕ್ಕಾಗಿ ಅಂಗಡಿ ಅಂಗಡಿ ತಿರುಗುವಂತೆ, ವಿದ್ಯಾರ್ಥಿಗಳು ತಮ್ಮ ಸರಸ್ವತೀ ಮಂದಿರವನ್ನು ಹುಡುಕಲು ಅನೇಕ ವಿಶ್ವವಿದ್ಯಾನಿಲಯಗಳ ಪ್ರದಕ್ಷಿಣೆ ಹಾಕಿದ ನಿದರ್ಶನ ಸಾವಿರಾರು. ನನ್ನ ಜೊತೆಯಲ್ಲಿ ವಾಸಮಾಡುತ್ತಿರುವ **ಜಾರ್ಜ್‌ಬಿಲ್** ನ್ಯೂಯಾರ್ಕಿನಿಂದ ಇಲ್ಲಿಗೆ ಓದಲು ಬಂದಿದ್ದಾನೆ. ಈತ ಸುಮಾರು ೧೦ ಕಾಲೇಜುಗಳನ್ನು ತಿರುಗಿ ಅಲ್ಲೆಲ್ಲಿಯೂ ಪ್ರವೇಶ ಸಿಕ್ಕದೆ, ಕೊನೆಗೆ ಇಲ್ಲಿಗೆ ಬಂದು ಅತಿ ಪ್ರಯಾಸದಿಂದ ಅಪ್ಪಣೆ ದೊರಕಿಸಿಕೊಂಡ.

ಯುದ್ಧಕ್ಕೆ ಮುಂಚೆ ಬಹಳ ಕಷ್ಟದಿಂದ ಜೀವನ ಸಾಗಿಸುತ್ತಿದ್ದ ಸಣ್ಣ ಸಣ್ಣ ಕಾಲೇಜುಗಳಲ್ಲಿ ತಿರಸ್ಕೃತರಾದ ವಿದ್ಯಾರ್ಥಿಗಳು ಈಗ ಆ ಸಣ್ಣ ಕಾಲೇಜುಗಳನ್ನು ತುಂಬಿರುತ್ತಾರೆ. ಹೀಗಾಗಿ ಸಣ್ಣ ಕಾಲೇಜುಗಳು ಬದುಕಿ ಅಭಿವೃದ್ಧಿ ಗೊಳ್ಳುತ್ತಿವೆ.

ಕಾಲೇಜುಗಳಲ್ಲಿ ಸ್ಥಳದ ಕೊರತೆಯೇ ದೊಡ್ಡದಾಗಿದೆ. ಎಲಾ

ವಿದ್ಯಾರ್ಥಿಗಳಿಗೂ ಸ್ಥಳ ದೊರಕಿಸಲು ಸಾಧ್ಯವಾಗಬೇಕಾದರೆ ತರಗತಿಗಳ ಜಾಗೆಯನ್ನು ಹೆಚ್ಚಿಸಬೇಕೆಂದು ಕಾಲೇಜ್ ಅಧಿಕಾರಿಗಳು ತೀರ್ಮಾನಿಸಿದ್ದಾರೆ. ಅಮೇರಿಕಾದ ವಿದ್ಯಾ ಕಚೇರಿಯ ಲೆಖ್ಖದ ಪ್ರಕಾರ ೯೦,೦೦೦,೦೦೦ ಚದುರಡಿ ಜಾಗ ಹೆಚ್ಚಾಗಬೇಕು. ೧೯೫೦ರ ವೇಳೆಗೆ ೩೦,೦೦೦,೦೦೦ ಚದುರಡಿ ಜಾಗದ ವ್ಯವಸ್ಥೆಯಾಗಬೇಕೆಂದು ಲೆಖ್ಖಾಚಾರ ಮಾಡಿದ್ದಾರೆ. ಈ ರೀತಿಯ ಒತ್ತಡವು ಇನ್ನು ೩೦ ವರ್ಷಗಳು ನಡೆಯುವುದೆಂದು ಅಭಿಪ್ರಾಯ ಪಟ್ಟಿದ್ದಾರೆ.

ಅಮೇರಿಕದ ವಿಶ್ವವಿದ್ಯಾನಿಲಯಗಳಲ್ಲಿ ಎರಡು ವಿಧ. ಸಂಸ್ಥಾನ ಸರಕಾರದ ಆಡಳಿತದಲ್ಲಿರುವ ವಿಶ್ವವಿದ್ಯಾನಿಲಯಗಳು ಮತ್ತು ಖಾಸಗಿ ವ್ಯವಸ್ಥೆಯಿಂದ ನಡೆದು ಬರುವ ವಿಶ್ವವಿದ್ಯಾನಿಲಯಗಳು.

ಸಂಸ್ಥಾನದ ಆಡಳಿತದಲ್ಲಿರುವ ವಿಶ್ವವಿದ್ಯಾನಿಲಯಗಳು ಮೂರರಷ್ಟು ಜಾಸ್ತಿಯಾಗಿ ವಿದ್ಯಾರ್ಥಿಗಳಿಂದ ತುಂಬಿದೆ. ಕಾರಣ ಸಂಸ್ಥಾನದ ಪ್ರತಿಯೊಬ್ಬ ವಿದ್ಯಾರ್ಥಿಗೂ ಜಾಗ ಕೊಡಬೇಕೆಂದು ನಿಯಮವನ್ನಿಟ್ಟು ಕೊಂಡಿರುತ್ತಾರೆ. ಉದಾಹರಣೆಯಾಗಿ ಮಿಸ್ಸೌರಿ ವಿಶ್ವವಿದ್ಯಾನಿಲಯದ ಸಾಮಾನ್ಯ ವಿದ್ಯಾರ್ಥಿಗಳ ಸಂಖ್ಯೆ ೪,೦೦೦. ಈ ವರ್ಷ ೧೨,೦೦೦ ವಿದ್ಯಾರ್ಥಿಗಳಿಗೆ, ಪ್ರವೇಶ ದೊರೆತಿದೆ. ಈ ಹೆಚ್ಚು ವಿದ್ಯಾರ್ಥಿಗಳಿಗೆ ಜಾಗ ಕೊಡಲು ಅನೇಕ ವಿದ್ಯಾ ಸಂಸ್ಥೆಗಳು "Overflow" ಅಥವಾ "Extension" ಕಾಲೇಜುಗಳನ್ನು ತೆರೆದಿದ್ದಾರೆ. ಮುಂದಿನ ವರ್ಷಗಳಲ್ಲಿ ಸೇರುವ ವಿದ್ಯಾರ್ಥಿಗಳಿಗೆ ಪ್ರವೇಶ ದೊರಕುವದು ಇನ್ನೂ ಕಷ್ಟವಾಗಬಹುದು. ಜಾಗದ ಕೊರತೆ ಮತ್ತು ಶಿಕ್ಷಕರ ಅಭಾವದಿಂದ ವಿದ್ಯಾರ್ಥಿಗಳಿಗೆ ಸರಿಯಾದ ಲಾಭ ಸಿಕ್ಕುವುದು ಕಷ್ಟವಾಗಿದೆ. ಈ ಕಾರಣಗಳಿಂದ ಒಳ್ಳೆಯ ಮಾದರಿಯ ವಿದ್ಯಾಭ್ಯಾಸ ಸಿಕ್ಕುವ ಸಂಭವ ಕಡಿಮೆಯೆಂದು ದೇಶದ ವಿದ್ಯಾ ಪ್ರವೀಣರು ಮನಗಂಡು ಹೀಗೆ ಸ್ಪಷ್ಟಪಡಿಸಿದ್ದಾರೆ.

ನ್ಯೂಯಾರ್ಕ್ ಯೂನಿವರ್ಸಿಟಿಯಲ್ಲಿ ಈಸಲ ೬೦,೦೦೦ ವಿದ್ಯಾರ್ಥಿ

ಗಳಿದ್ದಾರೆ. ಇದರಲ್ಲಿ ೨೫,೦೦೦ ಸೈನಿಕ ವಿದ್ಯಾರ್ಥಿಗಳಿದ್ದಾರೆ. ಸುಪ್ರಸಿದ್ಧವಾದ ಕೊಲಂಬಿಯಾ ವಿಶ್ವವಿದ್ಯಾನಿಲಯದಲ್ಲಿ ೨೪,೫೦೦ ವಿದ್ಯಾರ್ಥಿಗಳು ಸೇರಿದ್ದಾರೆ. ಹಿಂದೆಂದೂ ಇಲ್ಲಿ ಇಷ್ಟು ಸಂಖ್ಯೆಯಿರಲಿಲ್ಲ.

ನ್ಯೂಯಾರ್ಕಿನ ಸಿಟಿ ಕಾಲೇಜಿನ ಸಂಖ್ಯೆ ೬೨,೦೦೦. ಹಂಟರ್, ಬ್ರುಕ್‌ಲಿನ್, ಕ್ವೀನ್ಸ್ ಮತ್ತು ಸಿಟಿ ಕಾಲೇಜುಗಳಲ್ಲಿ ಈ ಸಂಖ್ಯೆ ಹಂಚಲ್ಪಟ್ಟಿದೆ. ಇವುಗಳಲ್ಲಿ ಸಿಟಿ ಕಾಲೇಜಿನಲ್ಲಿಯೇ ೩೩,೦೦೦ ವಿದ್ಯಾರ್ಥಿಗಳಿದ್ದು ೨೦,೩೦೦ ವಿದ್ಯಾರ್ಥಿಗಳು ಡಿಗ್ರಿ ಪರೀಕ್ಷೆಗೆ ಓದುತ್ತಿದ್ದಾರೆ. ಇವರಲ್ಲಿ ೧೨,೦೦೦ ಮಂದಿ ಸೈನಿಕ ವಿದ್ಯಾರ್ಥಿಗಳು.

ಫೋರ್ಡ್ಯಾಮ್ ವಿಶ್ವವಿದ್ಯಾನಿಲಯದಲ್ಲಿ ಕೇವಲ ೧೦,೦೦೦ ವಿದ್ಯಾರ್ಥಿಗಳಿಗೆ ಜಾಗವಿದ್ದು ಉಳಿದವರಿಗೆ ಜಾಗ ಕೊಡಲು ಸಾಧ್ಯವಿಲ್ಲದುದಕ್ಕೆ ಕಾಲೇಜಿನ ಮುಖ್ಯಾಧಿಕಾರಿಗಳು ವ್ಯಸನ ವ್ಯಕ್ತಪಡಿಸಿದ್ದಾರೆ.

ಇತ್ತ ಪಶ್ಚಿಮ ಭಾಗದಲ್ಲಿ ಕ್ಯಾಲಿಫೋರ್ನಿಯಾ ವಿಶ್ವವಿದ್ಯಾನಿಲಯವೇ ದೊಡ್ಡದು. ಇಲ್ಲಿ ೪೦,೦೦೦ ವಿದ್ಯಾರ್ಥಿಗಳಿದ್ದಾರೆ. ಈ ಕಾಲೇಜಿನಲ್ಲಿರುವ ವಿದ್ಯಾರ್ಥಿಗಳು ಬರೀ ಕ್ಯಾಲಿಫೋರ್ನಿಯ ಸಂಸ್ಥಾನದವರೇ. ಉಳಿದ ಸಂಸ್ಥಾನದ ವಿದ್ಯಾರ್ಥಿಗಳಿಗೆ ಇಲ್ಲಿ ನಿರ್ಬಂಧವಿದೆ.

ಎಲ್ಲಾ ಕಡೆಗಳಲ್ಲಿಯೂ ಕಾಲೇಜುಗಳಲ್ಲಿ ಸ್ಥಳದ ಅಭಾವವಿದೆ. ಅಲ್ಲದೆ ವಿದ್ಯಾರ್ಥಿಗಳಿಗೆ ವಾಸದ ಕೊಠಡಿ ಸಿಕ್ಕುವುದಂತೂ ತುಂಬಾ ಕಷ್ಟ. ನಮ್ಮ ವಿಶ್ವವಿದ್ಯಾನಿಲಯದಲ್ಲಿ ಪ್ರವೇಶ ಸಿಕ್ಕುವುದಕ್ಕಿಂತ ಮುಂಚೆ, ವಾಸ ಮಾಡಲು ಜಾಗವಿದೆಯೆಂದು ರುಜುವಾತು ಮಾಡಿ ತೋರಿಸಿಕೊಡಬೇಕು. ಹಾಗಿಲ್ಲದೆ ಪ್ರವೇಶವೇ ಸಿಕ್ಕುವುದಿಲ್ಲ.

ಸಿರಸಿನಾಟಿ ವಿಶ್ವವಿದ್ಯಾನಿಲಯದಲ್ಲಿ ೧೯,೦೦೦ ವಿದ್ಯಾರ್ಥಿಗಳಿದ್ದಾರೆ. ವಿಸ್‌ಕಾನ್‌ಸಿಸ್‌ದಲ್ಲಿ ೨೬,೫೦೦. ಟೆಕ್ಸಾಸ್ – ೨೧,೦೦೦, ಮಿನ್ನೇಸೋಟ– ೨೯೦೦೦. ಚಿಕಾಗೋ–೧೩,೫೦೦. ಮಿಚಿಗನ್–೨೦,೫೦೦. ವಾಷಿಂಗ್ಟನ್– ೧೨,೫೦೦ ವಿದ್ಯಾರ್ಥಿಗಳಿದ್ದಾರೆ.

ವಿದ್ಯಾರ್ಥಿಗಳು ಹೀಗೆ ಹೆಚ್ಚಿದ್ದರಿಂದ ಕ್ಯಾನ್‌ಸಸ್ ವಿ ವಿ. ನಿಲಯ ದಲ್ಲಿ ಕೆಲವು ನಿಯಮಗಳನ್ನು ಮಾಡಿ ಪ್ರವೇಶ ಕೊಡುತ್ತಿದೆ. (೧) ಸೈನಿಕ ವಿದ್ಯಾರ್ಥಿಗಳು ಮತ್ತು ಕ್ಯಾನ್‌ಸಸ್ ಹೈಸ್ಕೂಲಿನ ವಿದ್ಯಾರ್ಥಿಗಳು. (೨) ಕಾಲೇಜು ಬಿಟ್ಟು ಪುನಃ ಸೇರಲು ಇಚ್ಛಿಸಿದ ಅದೇ ಕಾಲೇಜಿನ ಹಿಂದಿನ ವಿದ್ಯಾರ್ಥಿಗಳು. (೩) ಕ್ಯಾನ್‌ಸಸ್ ವಿ.ವಿ. ನಿಲಯದ ಶಿಕ್ಷಕರ ಮತ್ತು ಕೆಲಸಗಾರರ ಮಕ್ಕಳು. (೪) ಕ್ಯಾನ್‌ಸಸ್ ನಗರದ ಸುತ್ತುಮುತ್ತಲಿನ ಪಟ್ಟಣಗಳ ವಿದ್ಯಾರ್ಥಿಗಳು. (೫) ಇತರರು. ಹೀಗೆ ಕ್ರಮವಾಗಿ ಪ್ರವೇಶದ ನಿಯಮಗಳನ್ನು ಇಟ್ಟುಕೊಂಡಿದ್ದಾರೆ.

ಮಿಸ್ಸಿಸ್ಸಿಪ್ಪಿ ವಿ.ವಿ.ನಿಲಯವು ಸಂಸ್ಥಾನದ ಆಡಳಿತದಲ್ಲಿದ್ದು ೪೦,೦೦೦ ವಿದ್ಯಾರ್ಥಿಗಳನ್ನೊಳಗೊಂಡಿದೆ. ಅಲ್ಲಿ ನೂರಕ್ಕೆ ೨೦ ರಷ್ಟು ವಿದ್ಯಾರ್ಥಿಗಳು ಹೆಚ್ಚಿದ್ದಾರೆ. ಪರಸಂಸ್ಥಾನದ ವಿದ್ಯಾರ್ಥಿಗಳಿಗೆ ವಾಸಕ್ಕೆ ಯೊಗ್ಯವಾದ ಜಾಗ ಸಿಕ್ಕಿದರೆ ಅವರಿಗೆ ಪ್ರವೇಶ ಕೊಡಲಾಗುವುದು. ಮುಕ್ಕಾಲು ಭಾಗ ವಿದ್ಯಾರ್ಥಿಗಳೆಲ್ಲರೂ ಸೈನಿಕ ವಿದ್ಯಾರ್ಥಿಗಳೇ. ನಗರದ ಸಂಸಾರಗಳೇ ಕೆಲವು ವಿದ್ಯಾರ್ಥಿಗಳ ವಾಸಕ್ಕೆ ಜಾಗ ಕೊಡುತ್ತವೆ.

ಮಿನ್ನೇಸೋಟ, ವೈಮಿಂಗ್ ಮತ್ತು ಸ್ಟ್ಯಾನ್‌ಫೋರ್ಡ್, ವಿ.ವಿ. ನಿಲಯಗಳಲ್ಲಿ ಪ್ರವೇಶ ದೊರಕುವುದು ಅಷ್ಟೇ ಕಷ್ಟವಾದರೂ ವಾಸದ ಜಾಗ ಸಿಕ್ಕುವುದು ಕಷ್ಟ.

ಸುಪ್ರಸಿದ್ಧವಾದ ಹಾರ್ವರ್ಡ್ ವಿಶ್ವವಿದ್ಯಾನಿಲಯದಲ್ಲಿ ೫೬,೦೦೦ ವಿದ್ಯಾರ್ಥಿಗಳಿದ್ದಾರೆ. ಇದು ಎಂದಿಗಿಂತ ಹೆಚ್ಚಿನ ಸಂಖ್ಯೆ. ಪುಸ್ತಕ ಭಂಡಾರ, ಊಟದ ಸೌಲಭ್ಯಗಳು, ಅತಿ ಕಷ್ಟವಾಗಿವೆ. ಆದರೂ ಹಾರ್ವರ್ಡ್ ವಿಶ್ವವಿದ್ಯಾನಿಲಯದ ವಿದ್ಯಾ ಮಟ್ಟ ಕೆಳಗಿಳಿಯಲ್ಪಡುವ ಸಂಭವವಿಲ್ಲವೆಂದು ಅಲ್ಲಿಯ ಅಧಿಕಾರಿಗಳು ತಿಳಿಸಿದ್ದಾರೆ.

ಇಂದು ಅಮೇರಿಕದಲ್ಲಿ ಪ್ರೌಢ ಕಾಲೇಜಿನ ಶಿಕ್ಷಣ ವಿಸ್ತರಣಾವಸ್ಥೆ ಯಲ್ಲಿದೆ. ಎಲ್ಲ ಕಾಲೇಜುಗಳೂ ಸಾಮಾನ್ಯವಾಗಿ ತಮ್ಮ ಹಿಂದಿನ ಮಟ್ಟ

ದಿಂದ ಕೆಳಗಿಳಿದು ಈಗಿನ ವಾತಾವರಣಕ್ಕೆ ಹೊಂದಿಕೊಳ್ಳಬೇಕಾಗಿದೆ. ಕೆಲವು ವರ್ಷಗಳ ವರೆಗೆ ಕಾಲೇಜಿಗೆ ಸೇರುವ ವಿದ್ಯಾರ್ಥಿಗಳು ತಮಗೆ ಇಷ್ಟ ಬಂದ ಕಾಲೇಜಿಗೆ ಸೇರಲು ಸಾಧ್ಯವಾಗದೇ ಇರಬಹುದು. ಕೆಲವರಿಗೆ ಪ್ರವೇಶ ಸಿಕ್ಕದಿರಬಹುದು. ಈ ಕೆಲವು ತೊಂದರೆಗಳು ಬೇಗನೆ ಮಾರ್ಪಾಡಾಗ ಬಹುದೆಂದು ಕೆಲವು ವಿದ್ಯಾಪ್ರವೀಣರು ಹೇಳುತ್ತಿದ್ದಾರೆ. ಪ್ರೌಢ ಶಿಕ್ಷಣ ಈ ದೇಶದಲ್ಲಿ ತನ್ನ ತುಟ್ಟ ತುದಿಯನ್ನು ಮುಟ್ಟಿದೆ. ಈ ಅಭಿವೃದ್ಧಿ ದೇಶದ ಏಳಿಗೆಗೂ ಒಂದು ಮುಖ್ಯವಾದ ಕಾರಣ.

---

# ವಿಶ್ವವಿದ್ಯಾನಿಲಯ ನಗರ

ಮಿಸ್ಸೋರಿ ವಿಶ್ವವಿದ್ಯಾನಿಲಯವಿರುವ ಕೊಲಂಬಿಯಾ ನಗರವು ಅಲ್ಲ, ಹಳ್ಳಿಯೂ ಅಲ್ಲ. ಇದೊಂದು **'ವಿಶ್ವವಿದ್ಯಾನಿಲಯ ನಗರ'** ಅಮೇರಿಕದಲ್ಲಿ ಪ್ರತಿಯೊಂದು ಹಳ್ಳಿಯನ್ನೂ ನ್ಯೂಯಾರ್ಕ್ ನಗರದಂತೆ ಮಾಡಬೇಕೆಂದು ಪ್ರಯತ್ನಿಸುತ್ತಾರೆ.

ಕೊಲಂಬಿಯಾದಲ್ಲಿ ಸುಮಾರು ೨೫,೦೦೦ ಜನರಿದ್ದಾರೆ. ಅವರಲ್ಲಿ ೧೫,೦೦೦ ಜನ ವಿದ್ಯಾರ್ಥಿಗಳೇ. ಕೊಲಂಬಿಯಾ ಇರುವುದು ಮಿಸ್ಸೋರಿ ಸಂಸ್ಥಾನದಲ್ಲಿ. ಅಮೇರಿಕದ ಮಧ್ಯರಾಷ್ಟ್ರದಲ್ಲಿ. ಸೆಂಟ್ ಲೂಯಿಸ್ ಮತ್ತು ಕ್ಯಾನ್ಸಸ್ ನಗರದ ದಾರಿಯಲ್ಲಿ, ಮಧ್ಯೆ **ಸೆಂಟ್ರೇಲಿಯ** ಎಂಬ ಹಳ್ಳಿಯಿದೆ. ಅದು ಅಮೇರಿಕದ ಮಧ್ಯದಲ್ಲಿದೆಯಾದುದರಿಂದ ಇದಕ್ಕೆ ಈ ಹೆಸರು ಬಂದಿ ರುವುದು. ಸೆಂಟ್ರೇಲಿಯದಿಂದ ಸೆಂಟ್ ಲೂಯಿಸ್‌ಗೂ, ಕ್ಯಾನ್ಸಸ್ ನಗ ರಕ್ಕೂ ಎರಡು ಕಡೆಗೂ ಸರಿಯಾಗಿ ೧೩೦ ಮೈಲಿ. ಚಿಕ್ಕಬಳ್ಳಾಪುರ, ಚಿಂತಾಮಣಿ, ಲೈಟ್ ರೈಲ್ವೆಯ ಹಾಗೆ ಗಂಟೆಗೆ ೨೦ ಮೈಲಿ ಓಡುವ ಪುಟ್ಟ ರೈಲೊಂದು, ಸೆಂಟ್ರೇಲಿಯದಿಂದ ಕೊಲಂಬಿಯಾಕ್ಕೆ ಓಡಾಡುತ್ತದೆ. ಇದ ರಲ್ಲಿ ಪ್ರವಾಸ ಮಾಡುವುದೆಂದರೆ ಬೇಸರದ ಕೆಲಸ.

## ಋಷಿಗಳ ಆಹಾರ

ನಾನು ಕಾಲೇಜನ್ನು ಪ್ರವೇಶಿಸಿ ಮೂರು ತಿಂಗಳಾಗುತ್ತ ಬಂತು. ಪತ್ರಿಕೋದ್ಯಮದಲ್ಲಿ ಎಂ. ಎ ಡಿಗ್ರಿಗಾಗಿ ಓದುತ್ತಿದ್ದೇನೆ.

ನಾನು ವಾಸಮಾಡುವುದು ಒಂದು ಮನೆಯಲ್ಲಿ. ಈ ದೇಶದಲ್ಲಿ ಒಟ್ಟಾಗಿ ವಿದ್ಯಾರ್ಥಿಗಳಿಗೆ ಹಾಸ್ಟೆಲ್ ಸೌಕರ್ಯವನ್ನೊದಗಿಸಿಕೊಡುವ ಪದ್ಧತಿಯ ಜೊತೆಗೆ ವಿಶ್ವವಿದ್ಯಾನಿಲಯದವರು ಹಲವಾರು ಮನೆಗಳನ್ನು ಬಾಡಿಗೆಗೆ ಗೊತ್ತುಮಾಡುತ್ತಾರೆ. ಆ ಮನೆಯ ಯಜಮಾನಿ ವಿದ್ಯಾರ್ಥಿಗಳಿಗಲ್ಲದೆ ಬೇರಾರಿಗೂ ಕೊಟಡಿಗಳನ್ನು ಬಾಡಿಗೆಗೆ ಕೊಡಕೂಡದು. ಒಂದೊಂದು ಮನೆಯಲ್ಲಿ ನಾಲ್ಕಾರು ಕೊಟಡಿಗಳಿರುತ್ತವೆ. ಒಂದೊಂದು ಕೊಟಡಿಯಲ್ಲೂ ಮೂರು ನಾಲ್ಕು ಜನ ವಿದ್ಯಾರ್ಥಿಗಳು ವಾಸಮಾಡಬೇಕು. ನಾನಿರುವ ಮನೆಯಲ್ಲಿ ಹತ್ತು ಕೊಟಡಿಗಳಿವೆ. ಸುಮಾರು ೨೫ ಜನ ವಿದ್ಯಾರ್ಥಿಗಳಿದ್ದೇವೆ. ಮನೆಯಲ್ಲಿ ಊಟ ಸಿಕ್ಕುವುದಿಲ್ಲ. ಕಾಫಿಯೂ ಇಲ್ಲ. ಓದಲು, ವಾಸಿಸಲು ಸ್ಥಳವೆಷ್ಟೋ ಅಷ್ಟೆ. ಊಟ, ತಿಂಡಿ, ಕಾಫಿಗೆ ಹೊಟೇಲೇ ಗತಿ.

ನಾನಿರುವ ಮನೆಗೆ ಮೂರು ಮಹಡಿಗಳಿವೆ. ನಮ್ಮ ಕೊಟಡಿಯಲ್ಲಿ ನಾವು ನಾಲ್ವರಿದ್ದೇವೆ. ಮೂವರು ಭಾರತೀಯರು. ಒಬ್ಬ ಅಮೇರಿಕನ್ ವಿದ್ಯಾರ್ಥಿ. ಒಬ್ಬೊಬ್ಬರೂ ತಿಂಗಳಿಗೆ ೨೦ ಡಾಲರು ಬಾಡಿಗೆ ಕೊಡಬೇಕಾಗುತ್ತದೆ. ಕಾಫಿಯನ್ನು ಮಾಡಿಕೊಳ್ಳಲೂ, ಊಟದ ಕೆಲಭಾಗಗಳನ್ನು ಬೇಯಿಸಿಕೊಳ್ಳಲೂ ನಮಗೆ ಮಾತ್ರ ಮನೆಯೊಡತಿ ಅವಕಾಶ ಕೊಟ್ಟಿದ್ದಾಳೆ. ಅಂತೆಯೇ ಕೊಟಡಿಯಲ್ಲಿಯೇ ಒಂದು ಎಲೆಕ್ಟ್ರಿಕ್ ಸ್ಟೌ ಇಟ್ಟುಕೊಂಡು ಭಾರತೀಯ ಆಹಾರ ತಿನ್ನಬೇಕೆಂಬ ಚಪಲ ಬಂದಾಗ ಏನಾದರೂ ಉಪ್ಪಿಟ್ಟೋ, ಸಿರವೋ, ಅನ್ನವೋ, ಇನ್ನೇನನ್ನೋ ಬೇಯಿಸಿಕೊಳ್ಳುತ್ತೇವೆ. ಇಲ್ಲದಿದ್ದರೆ ದಿನವೂ ಋಷಿಗಳ ಆಹಾರ: ಹಾಲು, ಹಣ್ಣು, ಬೇಯಿಸದಿರುವ ತರಕಾರಿ. ಸಾಮಾನ್ಯವಾಗಿ ಅಮೇರಿಕನ್ ವಿದ್ಯಾರ್ಥಿಗಳೆಲ್ಲ ಹೋಟಲುಗ

ಳಲ್ಲಿಯೇ ಊಟ ಮಾಡಿಬಿಡುತ್ತಾರೆ. ಬೆಳಗ್ಗೆ 'ಬ್ರೇಕ್‌ಫಾಸ್ಟ್' ಮೊಟ್ಟೆ ಹಾಲು, ಬ್ರೆಡ್ ತಿನ್ನುತ್ತಾರೆ. ಮಧ್ಯಾಹ್ನ ೧೨ರಿಂದ ೧ರವರೆಗೆ 'ಲಂಚ್ ಟೈಂ'. ಆಗ ಒಂದು ಮಾಂಸದ ಆಹಾರ, ಬಟಾಟೆ, ಹಣ್ಣಿನ ರಸ, ಕಾಫಿ, ಐಸ್‌ಕ್ರೀಂ, ತಿನ್ನುವ ರೂಢಿ. ಸಂಜೆ ೬ರಿಂದ ೭ರವರೆಗೆ 'ಡಿನ್ನರ್'. ಇದೆ ಭರ್ತಿ ಊಟ. ಎರಡು ಮಾಂಸದ ಆಹಾರ, ಕೋಳಿಮೊಟ್ಟೆ, ಹಾಲು ಹಸಿ ತರಕಾರಿ ಹಣ್ಣು, ತಿನ್ನುತ್ತಾರೆ. ಈ ಜನಕ್ಕೆ ರುಚಿಯೇ ಗೊತ್ತಿಲ್ಲವೋ ಏನೋ! ಸಪ್ಪೆಯೋ, ಸಿಹಿಯೋ ಸುಮ್ಮನೆ ಹೊಡೆದುಬಿಡುತ್ತಾರೆ. ನಮಗೆ ಮಾತ್ರ ಊಟ ಮಾಡಲು ಮನೆಯೂ ಇಲ್ಲ, ಹೊಟೇಲೂ ಇಲ್ಲ. ತ್ರಿಶಂಕು ಸ್ವರ್ಗ.

## ನಮ್ಮ ಮನೆ

ನಮ್ಮ ಮನೆಯ ಯಜಮಾನಿ ಒಳ್ಳೆಯವರು. **ಶ್ರೀಮತಿ ಕಿರ್ಕ್ ಲ್ಯಾಂಡ್** ಎಂದು ಅವರ ಹೆಸರು. ಆಕೆಗೆ ಮೂವರು ಗಂಡುಮಕ್ಕಳಿದ್ದಾರೆ. ಹಿರಿಯುವ **ಡಾನ್.** ಯುದ್ಧದ ಸಮಯದಲ್ಲಿ ರಷ್ಯಾದಲ್ಲಿದ್ದ. ಈಗ ಇಲ್ಲಿ ರಾಜಕಾರಣವನ್ನಭ್ಯಸಿಸುತ್ತಿದ್ದಾನೆ. ಹಳ್ಳಿಯ ಸುಂದರ ಯುವತಿಯೊಬ್ಬ ಳನ್ನು ಮದುವೆಯಾಗಿ ಸಂಸಾರ ಹೂಡಿದ್ದಾನೆ. ಎರಡನೆಯವ **ಬಿಲ್** ಎಂದು. ಫಿಲಿಪ್ಪೈನ್ಸ್ ದ್ವೀಪದಲ್ಲಿ ಈತ "ಪೈಲಟ್" (ವೈಮಾನಿಕ ಆಗಿದ್ದ). ಈಗ ಕೆಮಿಸ್ಟ್ರಿ ಓದುತ್ತಿದಾನೆ. ಆಗಲೇ ತನ್ನಾಕೆಯನ್ನು ಗೊತ್ತುಮಾಡಿ ಕೊಂಡಿದ್ದರೂ ಸದ್ಯದ ಆರ್ಥಿಕ ಸ್ಥಿತಿ ಸರಿಯಾಗಿಲ್ಲದ್ದರಿಂದ ಮದುವೆಯಾಗದೆ ಸುಮ್ಮನಿದಾನೆ. ಆಗಾಗ ತನ್ನ ಪ್ರಣಯಿನಿಯನ್ನು ನೋಡಿಕೊಂಡು ಬರಲು ಸೆಂಟ್‌ಲೂಯಿಸ್ ಪಟ್ಟಣಕ್ಕೆ ಹೋಗುತ್ತಾನೆ. ಮೂರನೆಯ ಹುಡುಗ **ಜಾನ್**, ಇನ್ನೂ ಚಿಕ್ಕವ. ಹೈಸ್ಕೂಲಿನಲ್ಲಿ ಓದುತ್ತಿದಾನೆ.

## ಶಾಖಾಹಾರಿ ಸಂಘ

ನಮಗೆ ಮಹಡಿಯ ಮೇಲೆಯೆ ಸ್ನಾನಗೃಹ, ಕಕ್ಕಸುಮಂದಿರ, ಮುಖ ತೊಳೆದುಕೊಳ್ಳುವ ಸ್ಥಳ, ಎಲ್ಲವೂ ಅನುಕೂಲವಾಗಿದೆ. ನೀರು ಕುಡಿಯಲು

ನಲ್ಲಿಯೂ ಮೇಲೆಯೇ ಇದೆ. ಯಾವುದಕ್ಕೂ ಕೆಳಕ್ಕಿಳಿದು ಹೋಗಬೇಕಾಗಿಲ್ಲ. ಆಹಾರವೊಂದು ಸಿಕ್ಕುವಹಾಗಿದ್ದರೆ ವರ್ಷಗಟ್ಟಲೆ ಕಾಲ ಕೊಟಡಿಬಿಟ್ಟು ಹೋಗುವ ಅವಕಾಶವೇ ಇಲ್ಲ.

ಇಲ್ಲಿನ ಊಟಕ್ಕೆ ನಾನು ಹೊಂದಿಕೊಂಡಿಲ್ಲ. ಕಾರಣ, ಮಾಂಸ, ಮೊಟ್ಟೆಗಳನ್ನು ತಿನ್ನಲಾರೆ. ಅದು ಅಸಾಧ್ಯ. ಇಲ್ಲಿಯೂ ಶಾಖಾಹಾರಿಯಾಗಿದ್ದರೆ ಬದುಕಬಹುದು. ನಾನಿಲ್ಲವೇ ಈಗ? ಅಮೇರಿಕದಲ್ಲೊಂದು ಶಾಖಾಹಾರಿ ಸಂಘವಿದೆ. ಅದರ ಪತಿಯಿಂದ ಮುಂದಿನ ಅಮೇರಿಕದ ಅಧ್ಯಕ್ಷ ಚುನಾವಣೆಗೆ **ಡಾ. ವ್ಯಾಕ್ಸ್‌ವೆಲ್** ಎಂಬಾತ ಹುರಿಯಾಳಾಗಿ ನಿಲ್ಲಲಿದ್ದಾನೆ. ಆತ ಗೆಲ್ಲುವ ಭರವಸೆ ಅವನಿಗೇ ಇಲ್ಲ. ಆದರೆ ಆತ ನಿಂತ ಉದ್ದೇಶ ಮಾಂಸ ತಿನ್ನುವುದನ್ನು ನಿಲ್ಲಿಸಲು ಪ್ರಚಾರ.

ಈಗ ನನ್ನ ಊಟ ಈ ರೀತಿ ಇದೆ–ಬೆಳಗ್ಗೆ ಎದ್ದೊಡನೆ ಒಂದು ಬಾಟ್ಲ-ಇನ್ನೇನೂ ಅಲ್ಲ-ಹಾಲು, ಮಧ್ಯಾಹ್ನ ಪುನಃ ಹಾಲು, ಒಂದು ಸೇಬು ಹಣ್ಣು, ಬ್ರೆಡ್ ಮತ್ತು ಗೋಧಿಯ ಪಾಯಸ. ಸಾಯಂಕಾಲ ೫ಕ್ಕೆ ಒಂದು ಕಪ್ ಕಾಫಿ. ಸಂಜೆ ೭ ಗಂಟೆಗೆ ಮನೆಯಲ್ಲೇ ಸ್ವಲ್ಪ ಅನ್ನ. ಇಲ್ಲಿ ಹೆಚ್ಚಾಗಿ ಅನ್ನ ತಿನ್ನಲು ಸಾಧ್ಯವೇ ಇಲ್ಲ. ಬಟಾಟೆ, ನೀರುಳ್ಳಿ ಕೋಸುಗಡ್ಡೆ, ಗೆಣಸು ಹಾಕಿ ಪಲ್ಯ ಮಾಡುತ್ತೇನೆ. ಇದಕ್ಕೆ ಖಾರ, ಉಪ್ಪು ನಿಂಬೆ ಹಣ್ಣಿನ ರಸ, ಬೆಣ್ಣೆ ಹಾಕುತ್ತೇನೆ. ಅನ್ನಕ್ಕೆ ಮೊಸರು ಸಿಕ್ಕುತ್ತದೆ. ಬ್ರೆಡ್ ಅಂತೂ ಇದ್ದೇ ಇದೆ. ಜೊತೆಗೆ ಹಾಲು ಹಣ್ಣು. ಹಿಂದೂಸ್ಥಾನದಲ್ಲಿನ ಹಾಗೆ ಇಲ್ಲಿ ಹೇಗೆ ಊಟವಾದೀತು? ಆದರೂ ಆಶ್ಚರ್ಯದ ಮಾತೆಂದರೆ ಈಗ ನನ್ನ ತೂಕ ೧೪೨ ಪೌಂಡು. ಭಾರತದಿಂದ ಹೊರಟಾಗ ೧೩೦ ಪೌಂಡು ಇದ್ದೆ ಅಷ್ಟೆ.

## ಭಾರತೀಯ ವಿದ್ಯಾರ್ಥಿಗಳು

ಇಲ್ಲಿನ ಕಾಲೇಜಿನಲ್ಲಿ ಸದ್ಯ ಆರು ಜನ ಭಾರತೀಯ ವಿದ್ಯಾರ್ಥಿಗಳಿದ್ದಾರೆ. **ಶ್ರೀ ಜಿ. ಪಿ. ಜೈನ್** ಎಂಬುವರು ಅಲಹಾಬಾದಿನವರು. ಎಂ. ಎ.

ಎಲ್. ಎಲ್. ಬಿ. ದೆಹಲಿಯಲ್ಲಿ 'ಹಿಂದೂಸ್ಥಾನ ಟೈಮ್ಸ್' ಪತ್ರಿಕೆಯಲ್ಲಿ ಉಪಸಂಪಾದಕರಾಗಿ ಕೆಲಸ ಮಾಡುತ್ತಿದ್ದರು. ಈಗ ಇಲ್ಲಿಯ ವಿಶ್ವವಿದ್ಯಾನಿಲಯದಲ್ಲಿ ಓದುತ್ತಿದ್ದಾರೆ. ಸರಳಸ್ವಭಾವದವರು.

**ಡಾ|| ಜೆ. ಡಿ. ಎಸ್. ಕುಮಾರ್**ರವರು ಮೈಸೂರಿನವರು. ಅರಮನೆಯಲ್ಲಿ ಪಶುವೈದ್ಯರಾಗಿದ್ದರಂತೆ. ಈಗ ಭಾರತ ಸರ್ಕಾರದ ಪಶುವೈದ್ಯಶಾಖೆಯಲ್ಲಿದ್ದಾರೆ. ಅಲ್ಲಿಂದ ಚುನಾಯಿತರಾಗಿ ವಿದ್ಯಾರ್ಥಿವೇತನ ಪಡೆದು ಉಚ್ಚ ಶಿಕ್ಷಣಕ್ಕಾಗಿ ಇಲ್ಲಿಗೆ ಬಂದಿದಾರೆ. ಇವರು ಕನ್ನಡಿಗರೆಂದು ಬೇರೆ ಹೇಳಬೇಕೇ?

ಈ ವಿಶ್ವವಿದ್ಯಾನಿಲಯಕ್ಕೆ ಮೊದಲು ಬಂದ ಭಾರತೀಯರು **ಶ್ರೀ ಜಗದೀಶ್ ಅರೋರಾ**. ಆಗಲೇ ಅವರು 'ಬಿ. ಜೆ' ಪದವಿಯನ್ನು ಪಡೆದಿದ್ದು, ಮುಂದೆ ಎಂ.ಎ.ಗೆ ಓದುವವರಾಗಿದ್ದಾರೆ. ಇವರು ಸಂಯುಕ್ತ ಪ್ರಾಂತದವರು.

**ಶ್ರೀ ಬಿಂದುಮಾಧವ ಕೊಣ್ಣೂರ** ಎಂಬುವರು ಧಾರವಾಡದ ಕನ್ನಡಿಗರು. ಮುಂಬಯಿಯಲ್ಲಿನ ಗಿರಣಿಯೊಂದರಲ್ಲಿ "ಕೆಮಿಸ್ಟ್" ಆಗಿದ್ದು ಸವಾಲ್ ಮೇಲೆ ಪರದೇಶದ ಡಿಗ್ರಿ ಪಡೆಯಲು ಬಂದಿದಾರೆ. ಈಗ ಇಲ್ಲಿನ ಅಂಗಡಿಯೊಂದರಲ್ಲಿ ಕೆಲಸ ಮಾಡಿ ಹಣಗಳಿಸುತ್ತಿದಾರ್ರೆ-ಓದುವುದಕ್ಕೆ.

**ಶ್ರೀ ರಾಮ ಸುಭಾನ್ ಸಿಂಗ್** ಎಂಬುವರು ಬಿಹಾರದವರು. ಪತ್ರಿಕೋದ್ಯಮದಲ್ಲಿ ಶಿಕ್ಷಣ ಪಡೆಯಲು ಬಂದಿದಾರೆ. ಆಗಸ್ಟ್ ಚಳುವಳಿಯಲ್ಲಿ ಎರಡು ವರ್ಷಗಳ ಕಾಲ ಕಾರಾಗಾರ ಶಿಕ್ಷೆಯನ್ನನುಭವಿಸಿದ್ದರು.

## ಸಾಮಾನ್ಯ ದಿನಚರಿ

ಬೆಳಗ್ಗೆ ೬-೩೦ ಗಂಟೆಗೆ ಎದ್ದುಬಿಡುತ್ತೇನೆ. ಎದ್ದ ಕೂಡಲೆ ಮುಖಕ್ಷೌರ. ಇದು ನಿತ್ಯಕರ್ಮ, ಬಲು ಬೇಸರು ನನಗೆ. ಮಾಡಿಕೊಳ್ಳದಿದ್ದರೆ ವಿಧಿಯಿಲ್ಲ. ಅನಂತರ ಕಾಫಿ ಏರ್ಪಾಟು. ಸುಮಾರು ಏಳೂವರೆಯಿಂದ

ಎಂಟೂಕಾಲು ಘಂಟೆಯವರೆಗೆ ದಿನದ ಪಾಠ ಓದಿಕೊಳ್ಳುತ್ತೇನೆ, ಎಂಟೂ ವರೆಯಿಂದ ಹನ್ನೆರಡೂವರೆಯವರೆಗೆ ಕಾಲೇಜು. ಮಧ್ಯೆ ಹನ್ನೆರಡೂವರೆ ಯಿಂದ ಒಂದೂವರೆಯವರೆಗೆ "ಲಂಚ್ ಟೈಂ". ಪುನಃ ಎರಡೂವರೆ ಯಿಂದ ಮೂರೂವರೆಯವರೆಗೆ ಪುಸ್ತಕ ಭಂಡಾರದಲ್ಲಿ ಓದು. ನಾಲ್ಕು ಘಂಟೆಗೆ ಮನೆ. ಟಪಾಲು ಬಂದಿರುತ್ತದೆ. ಭಾರತದ ಕಾಗದ ಬಂದಿದ್ದರೆ ತುಂಬಾ ಸಂತೋಷವಾಗಿ ಆ ದಿನವೆಲ್ಲ ರುಚಿಯಾಗಿರುತ್ತದೆ. ಸಾಯಂಕಾಲ ೫ಕ್ಕೆ ಸ್ನಾನ. ಈ ದೇಶಕ್ಕೆ ಬಂದಾಗಿನಿಂದ ಸಂಜೆಯ ಸ್ನಾನ ಅಭ್ಯಾಸವಾಗಿದೆ. ೧ ರಿಂದ ೬ರ ವರೆಗೆ ಊಟದ ಸಮಾರಂಭ. ಆರೂವರೆಯಿಂದ ಏಳೂ ವರೆಯವರೆಗೆ ಸಂಜೆಯ ಹವಾ ಸೇವನೆ. ಒಂದೊಂದು ದಿನ ಒಂದೊಂದು ರಸ್ತೆ ಯಲ್ಲಿ ಹೋಗಿ ಏನಾದರೊಂದು ಹೊಸದನ್ನು ಕಂಡುಕೊಳ್ಳುತ್ತೇನೆ. ಏಳೂವ ರೆಗೆ ಪುನಃ ಪುಸ್ತಕ ಭಂಡಾರ. ರಾತ್ರಿ ಹತ್ತು ಘಂಟೆಯವರೆಗೂ ಅಲ್ಲಿಯೇ ಓದುವುದು, ಬರೆಯುವುದು.

ರಾತ್ರಿ ಹತ್ತಕ್ಕೆ ಮನೆಗೆ ಬರುವಷ್ಟರಲ್ಲಿ ನ್ಯೂಯಾರ್ಕಿನಿಂದ "ನೂಯಾರ್ಕ್ ಟೈಮ್ಸ್" ಪತ್ರಿಕೆ ಬಂದಿರುತ್ತದೆ. ಅದನ್ನೋದುತ್ತ ಮಲಗಿ ಕೊಂಡುಬಿಡುತ್ತೇನೆ. ಇದು ನನ್ನ ಸಾಮಾನ್ಯ ದಿನಚರಿ. ಇದರ ಹೊರ್ತು ಅಲ್ಲಿ ಇಲ್ಲಿ ಸ್ವಲ್ಪ ಬದಲಾವಣೆಯಾಗುತ್ತದೆ. ಶನಿವಾರ, ಭಾನುವಾರಗಳ ದಿನ ಚರಿ ಬೇರೆ. ಆಗ ಸ್ವಲ್ಪ ವಿರಾಮವಾಗಿ ಕಾಲ ಕಳೆಯಬಹುದು.

## ಅಮೇರಿಕದ "ಹರಿಜನ"ರು

ಅಮೇರಿಕದಲ್ಲೂ "ಹರಿಜನ"ರಿದ್ದಾರೆ. ಅವರೇ ನೀಗ್ರೋಗಳು. ನಮ್ಮ ಹರಿಜನರಷ್ಟು ಇವರ ಸ್ಥಿತಿ ಕೆಡುಕಿನದಲ್ಲವಾದರೂ ವರ್ಣಭೇದದಿಂದಾಗಿ ಅವರಿಗೆ ತುಂಬ ತೊಂದರೆಯಾಗುತ್ತಿದೆ. ಅಮೇರಿಕದ ಪೂರ್ವಭಾಗದಲ್ಲಿ ಅಷ್ಟು ಭೇದವಿಲ್ಲ. ದಕ್ಷಿಣಕ್ಕೆ ನಾನಿರುವ ಸಂಸ್ಥಾನದಿಂದ ಹಿಡಿದು ಪಶ್ಚಿಮದ ವರೆಗೂ, ಕೆಳಗಡೆ ಮೆಕ್ಸಿಕೋದವರೆಗೂ ವರ್ಣಭೇದವಿದೆ. ಬಿಳಿಯರ ಹೋಟಲುಗಳಲ್ಲಿ ನೀಗ್ರೋಗಳಿಗೆ ಅವಕಾಶವಿಲ್ಲ. ರೈಲುಗಳಲ್ಲಿ ಅವರಿ

ಗಾಗಿ ಬೇರೆ ಡಬ್ಬಿಗಳುಂಟು. ಸರ್ಕಾರಿ ಕೆಲಸದಲ್ಲಿ ಉಚ್ಛಸ್ಥಾನಗಳಿಲ್ಲ. ಶಾಲೆ, ಕಾಲೇಜುಗಳು ಬೇರೆ ಬೇರೆ. ನಾನಿರುವ ಕೊಲಂಬಿಯಾದಲ್ಲಿ ಮಿಸ್ಸೋರಿ ಸಂಸ್ಥಾನದ ವಿಶ್ವವಿದ್ಯಾನಿಲಯವಿದೆ. ಇದು ಶ್ವೇತನಗರ. ಈ ವಿಶ್ವವಿದ್ಯಾನಿಲಯದಲ್ಲಿ "ಕರಿಯ"ರಿಗೆ ಪ್ರವೇಶವಿಲ್ಲ. ನಮ್ಮ ಭಾರತದಲ್ಲಾದರೋ ಸರ್ಕಾರಿ ಸಂಸ್ಥೆಗಳಲ್ಲಿ ವಿದ್ಯಾಭ್ಯಾಸಕ್ಕೆ ಹರಿಜನರಿಗೆ ಪ್ರವೇಶವಿಲ್ಲದಿಲ್ಲ. ಇಲ್ಲಿ ನೀಗ್ರೋ ಜನಾಂಗದ ಪ್ರಜೆಗಳಿಗೆ ಕೆಲವು ಸರ್ಕಾರೀ ವಿದ್ಯಾಲಯಗಳಲ್ಲಿ ಅವರಿಗೆ ಪ್ರವೇಶವಿಲ್ಲ.

ನಮ್ಮಲ್ಲಿ ಹರಿಜನರ ಕೇರಿಯಿರುವಂತೆಯೇ ಕೊಲಂಬಿಯಾದಲ್ಲೂ ನೀಗ್ರೋ ವಸಾಹತು, ಊರ ಹೊರಗಡೆ ಇದೆ. ಅವರಿರುವ ಸ್ಥಳದಲ್ಲಿ ಒಬ್ಬ ಬಿಳಿಯನೂ ಇಲ್ಲ. ಸಾಮಾನ್ಯವಾಗಿ ಅಮೇರಿಕದಲ್ಲಿ ಸಣ್ಣ ಕೆಲಸಗಳಿಗೆ ಮಾತ್ರ ನೀಗ್ರೋಗಳೇ. ಇವರು ವಾಸಿಸುವ ಮನೆಗಳೂ ಅಷ್ಟು ಚೆನ್ನಾಗಿರುವುದಿಲ್ಲ. ನಮ್ಮಲ್ಲಿ ಬಡವರ ಮನೆಗಳಿರುವ ಹಾಗೇ ಇರುತ್ತವೆ. ದುಡಿದರೆ ಜೀವನ, ಇಲ್ಲವಾದರೆ ಬರೀ ಹೊಟ್ಟೆ. ಆಸ್ತಿಪಾಸ್ತಿಯ ಗೊಂದಲವಿಲ್ಲ. ಕೆಲವರ ಮನೆಗಳಲ್ಲಿ ವಿದ್ಯುಚ್ಛಕ್ತಿಯೂ ಇಲ್ಲ. ಸೀಮೆ ಎಣ್ಣೆಯ ದೀಪವನ್ನೇ ಉರಿಸುತ್ತಾರೆ. ದಿನಕ್ಕೆ ಒಪ್ಪೊತ್ತು ಊಟಮಾಡಿಕೊಂಡಿರುವ ಕಡುದರಿದ್ರರೂ ಇದಾರೆ.

**ರಾಕ್**, ನಮ್ಮ ಕಾಲೇಜಿನಲ್ಲಿ ಕಸ ಗುಡಿಸುವ-ನೀಗ್ರೋ. ಆತ ನನ್ನ ಗೆಳೆತನ ಮಾಡಿಕೊಂಡಿದಾನೆ. ಮೊನ್ನೆ ಆತನ ಮನೆಗೆ ಹೋಗಿದ್ದೆ. ಒಂದು ಲೋಟ ಹಾಲು ಕೊಟ್ಟ. ತನ್ನ ಜನರ ವಿಷಯವನ್ನೆಲ್ಲ ತಿಳಿಸಿ ತನ್ನ ಮನೆ, ಪುಟ್ಟ ಹೆಂಡತಿ, ಚಿಕ್ಕ ಮಗುವನ್ನು ತೋರಿಸಿದ. ಆ ಮಗುವಿಗೆ **ಶಾಲಿ** ಎಂದು ಹೆಸರು. ಅವನ ತಮ್ಮ ಉಚ್ಚ ಶಿಕ್ಷಣಕ್ಕಾಗಿ ತನ್ನ ಸ್ವಂತ ಊರನ್ನು ಬಿಟ್ಟು ಕರಿಯರನ್ನು ಸೇರಿಸುವ ಕಾಲೇಜಿಗೆ ಹೋಗಬೇಕಾಗಿ ಬಂದಾಗಿನ ಕಥೆ ದಾರುಣವಾಗಿತ್ತು.

---

# ಅಮೇರಿಕದ ವಿಶ್ವವಿದ್ಯಾನಿಲಯ ಸಂಘಗಳು

## ಎಸ್. ಜಿ. ಎ.

ಭಾರತೀಯ ವಿದ್ಯಾರ್ಥಿ ಅಮೇರಿಕದ ವಿಶ್ವವಿದ್ಯಾನಿಲಯವನ್ನು ಸೇರಿದೊಡನೆಯೇ, ಆತನಿಗೆ ಮೊದಲು ಗೋಚರವಾಗುವುದು, ವಿಶ್ವವಿದ್ಯಾನಿಲಯದ ಆವರಣದಲ್ಲಿ ತಗಲುಹಾಕಿರುವ ಹತ್ತಾರು ನೋಟೀಸ್ ಬೋರ್ಡುಗಳು. ಅದರಲ್ಲಿ ಕಾಣಬರುವ ನೋಟೀಸುಗಳಲ್ಲಿ ಹತ್ತಾರು ಸಂಘಗಳ ಕಾರ್ಯಕ್ರಮದ ವಿವರಗಳು ಇರುತ್ತವೆ.

ಭಾರತದ ವಿಶ್ವವಿದ್ಯಾನಿಲಯಗಳಲ್ಲಿದ್ದಂತೆ, ಮಿಸ್ಸೋರಿ ವಿಶ್ವವಿದ್ಯಾನಿಲಯದಲ್ಲಿಯೂ ಒಂದು ಕೇಂದ್ರ ವಿದ್ಯಾರ್ಥಿ ಸಂಘವಿದೆ. ಆದರೆ ಸಾಮಾನ್ಯವಾಗಿ ವಿದ್ಯಾರ್ಥಿ ವಿದ್ಯಾರ್ಥಿನಿಯರು ಸಣ್ಣ ಸಣ್ಣ ಗುಂಪುಗಳಾಗಿ ತಮ್ಮದೇ ಆದ ಸಂಘಗಳನ್ನೇರ್ಪಡಿಸಿಕೊಂಡಿದ್ದಾರೆ. ಕೇಂದ್ರ ಸಂಘದ ಹೆಸರು ಸ್ಟೂಡೆಂಟ್ ಗೌರ್ನ್ಮೆಂಟ್ ಅಸೋಸಿಯೇಷನ್ ಎಂದು. ಈ ಸಂಘಕ್ಕೆ ವಿಶ್ವವಿದ್ಯಾನಿಲಯದ ವಿದ್ಯಾರ್ಥಿಗಳೆಲ್ಲರೂ ಸದಸ್ಯರಾಗಬೇಕೆಂಬ ನಿಯಮವಿಲ್ಲ. ನಾಟಕ ಪ್ರದರ್ಶನಗಳು, ಮತ್ತು ಭಾಷಣಗಳನ್ನು ವಿಶ್ವವಿದ್ಯಾನಿಲಯದವರೇ ಪ್ರತ್ಯೇಕ ಒಂದು ಶಾಖೆಯನ್ನೇರ್ಪಡಿಸಿ ನಡೆಸಿಕೊಂಡು ಬರುತ್ತಾರಾದ್ದರಿಂದ ಎಸ್. ಜಿ. ಎ. ಗೆ ಅದರ ಗೊಡವೆ ಇಲ್ಲ. ಈ ಸಂಘದ ಮುಖ್ಯ ಕೆಲಸ ವಿದ್ಯಾರ್ಥಿಗಳಿಗೆ ಓದಲು ಅನುಕೂಲವಾಗುವಂತೆ, ವಿದ್ಯಾರ್ಥಿಗಳಿಗೆ ವಿರಾಮ ಕಾಲದಲ್ಲಿ ಹಣ ಗಳಿಸಲು ತಕ್ಕ ಏರ್ಪಾಡು ಮಾಡಿಕೊಡುವದು. ಮತ್ತೆ ಇತರ ಎಲ್ಲ ಸಂಘಗಳ ಜೊತೆಗೂ ಸಹಕರಿಸಿ ಇವರು ಕೆಲಸ ಮಾಡುತ್ತಾರೆ. ಈ ಸಂಘ ರಾಜಕೀಯದಲ್ಲಿ ಪ್ರತ್ಯೇಕ ಭಾಗ ವಹಿಸುತ್ತದೆ. ಈಗಾಗಲೇ ಅನೇಕ ಪಕ್ಷ ವಹಿಸಿಕೊಂಡು ಪ್ರಚಾರ ಪ್ರಾರಂಭಿಸಿದ್ದಾರೆ. ಬೋರ್ಡುಗಳಲ್ಲಿ ತಮ್ಮ ರಾಜಕೀಯ ಮುಂದಾಳುವಿನ ಚಿತ್ರದೊಂದಿಗೆ ಮೆರವಣಿಗೆ ಹೋಗುತ್ತಾರೆ. ಪಕ್ಷಪಕ್ಷಗಳಲ್ಲಿ ಆಗಾಗ್ಯೆ ತಿಕ್ಕಾಟ ಉಂಟಾಗುವದೂ ಸಹಜ. ಆಗ ಬೀರ್ ಬಾಟ್ಲಿಗಳು ಲೀಲಾಜಾಲವಾಗಿ ರಸ್ತೆಗೆ

ಬರುತ್ತವೆ. ನಮ್ಮ ಸಂಘವು ಅಷ್ಟು ರಭಸಕ್ಕೆ ಇನ್ನೂ ಹೋದಂತೆ ನನ್ನ ಕಣ್ಣಿಗೆ ಬಿದ್ದಿಲ್ಲ.

## ವಿಶ್ವಸಂಸ್ಥೆ

ಇದಾದ ನಂತರ ಬರುವ ಸಂಘ, ವಿದ್ಯಾರ್ಥಿಗಳ ವಿಶ್ವಸಂಸ್ಥೆ. ಈ ಸಂಘ ಸ್ಥಾಪನೆಯಾಗಿ ಎರಡು ವರ್ಷಗಳಾಯಿತು. ಮೊನ್ನೆಯ ನವಂಬರಿನಲ್ಲಿ ಎರಡನೆಯ ವಾರ್ಷಿಕ ಸಭೆ ನಡೆಯಿತು. ಈಗಿನಿಂದಲೇ ವಿದ್ಯಾರ್ಥಿಗಳಿಗೆ ಪ್ರಜಾಪ್ರಭುತ್ವ, ಅಂತರರಾಷ್ಟ್ರೀಯತೆ, ತತ್ವಗಳನ್ನು ಮನಸ್ಸಿನಲ್ಲಿ ತಂದುಕೊಂಡು ಆಚರಣೆಗೆ ತರಲು ಅನುಕೂಲವಾಗುವಂತೆ ಪ್ರಯತ್ನ ಮಾಡಲಾಗುತ್ತದೆ. ಆದರೆ ಈ ತತ್ವಗಳ ಬುಡಕ್ಕೆ ಕೊಲಿಯ ಪೆಟ್ಟು ಹಾಕಿದಂತೆ, ನಮ್ಮ ಶ್ವೇತ ವಿಶ್ವವಿದ್ಯಾನಿಲಯ ಅಮೇರಿಕದ ಹರಿಜನರಿಗೆ ಓದಲು ಅವಕಾಶ ಕೊಡದಂತೆ, ವಿಶ್ವಸಂಸ್ಥೆಯಲ್ಲಿಯೂ ಮಿಸ್ಸೋರಿ ಸಂಸ್ಥಾನದ ಅಮೇರಿಕದ ನೀಗ್ರೋ ಕಾಲೇಜಿನ ಪ್ರತಿನಿಧಿಗಳಿಗೆ ಅವಕಾಶವಿರಲಿಲ್ಲ. ಈ ಸಲದ ಅಧಿವೇಶನದಲ್ಲಿ ಭಾರತೀಯ ನಿಯೋಗವೂ ಭಾಗವಹಿಸಿತ್ತು. ಪ್ರತಿನಿಧಿತವಾದ ಸುಮಾರು ೪೮ ದೇಶಗಳಲ್ಲಿ ಭಾರತದ ನಮ್ಮ ಧ್ವಜವೂ ತಲೆ ಎತ್ತಿ ನಿಂತಿತ್ತು. ಮೆರವಣಿಗೆಯಲ್ಲಿ ನಮ್ಮ ಕಾರಿಗೆ ಎರಡನೆಯ ಸ್ಥಾನ! ಮೆರವಣಿಗೆ ನೀಗ್ರೋ ಬಿಡಾರಕ್ಕೆ ಬಂದಾಗ, ನಮ್ಮ ಕಾರನ್ನು ನೋಡಿ ಅವರೆಲ್ಲರೂ ಚಪ್ಪಾಳೆ ತಟ್ಟಿದರು. ಮೆರವಣಿಗೆಯಲ್ಲಿ ನಮ್ಮ ಭಾರತೀಯ ತ್ರಿವರ್ಣ ಧ್ವಜ ಹೊತ್ತು, ಭಾರತೀಯ ಉಡುಪಿನಲ್ಲಿಯೇ ನಾವು ಹೋಗಿದ್ದೆವು. ಈ ವರ್ಷದ ಸಭೆಯ ಪ್ರಾರಂಭೋತ್ಸವವನ್ನು ಗ್ರೀಸಿನ ರಾಯಭಾರಿಗಳು ನೆರವೇರಿಸಿದರು. ಅವರ ಭಾಷಣದಲ್ಲಿ ಅಮೇರಿಕಾ ಸರ್ಕಾರವನ್ನು ಟೀಕಿಸಿದ್ದರಿಂದ, ಕೊನೆಗೆ ಯೂನಿವರ್ಸಿಟಿಯ ಅಧ್ಯಕ್ಷರು, ಸಂಘದ ಅಧಿಕಾರಿಗಳನ್ನು ತರಾಟೆಗೆ ತೆಗೆದುಕೊಂಡರು. ಭಾರತೀಯ ಪ್ರತಿನಿಧಿಗಳು, ನೀಗ್ರೋಗಳಿಗೆ ಸಭೆಗೆ ಬರಲು ಅವಕಾಶ ಕೊಡಬೇಕೆಂದು ತಂದ ನಿರ್ಣಯ ತಿರಸ್ಕೃತವಾಗಲಾಗಿ, ಸಭೆಯಿಂದ ಎದ್ದು ಹೋದರು. ಪಾಲೆಸ್ಟೈನ್ ಪ್ರಶ್ನೆ ಬಂದಾಗ ಭಾರತೀಯ

ಪ್ರತಿನಿಧಿಗಳ ಅಧ್ಯಕ್ಷರು ಪಾಲೈಸ್ಟೈನ್ ವಿಭಜನೆಯನ್ನು ತೀವ್ರವಾಗಿ ಖಂಡಿಸಿ ಪಂಜಾಬಿನ ಉದಾಹರಣೆಯನ್ನು ಕೊಟ್ಟು ಮಾತನಾಡಿದರು. ಈ ವಿಶ್ವಸಂಸ್ಥೆ, ಪ್ರಪಂಚ ಸಂಘದ ಪ್ರತೀಕ. ವರ್ಷಕ್ಕೆ ಒಂದು ಸಲ ಸಾಮಾನ್ಯ ಸಭೆ ಸೇರುವುದಲ್ಲದೆ, ಆಗಾಗ್ಗೆ ಪ್ರಪಂಚದ ಸಮಸ್ಯೆಗಳ ಮೇಲೆ ಅನೇಕ ವಿದ್ಯಾವಂತರನ್ನು ಕರೆತಂದು ಭಾಷಣ ಮಾಡಿಸುತ್ತಾರೆ. ಸದಸ್ಯ ಚಂದಾ ಟರ್ಮಿಗೆ ಡಾಲರು. ನೀಗ್ರೋ ಜನರನ್ನು ಬಿಟ್ಟು ಯಾರು ಬೇಕಾದರೂ ಸದಸ್ಯರಾಗಬಹುದು.

## ಐ. ಎನ್. ಸಿ. ಸಿ.

ಮೂರನೆಯದು ಇಂಟರ್ ನಾಷನಲ್ ಕಾಸ್ಮಾಪಾಲಿಟನ್ ಕ್ಲಬ್. ಪರದೇಶದಿಂದ ಬಂದ ವಿದ್ಯಾರ್ಥಿಗಳು ಇಲ್ಲಿಯ ಎಲ್ಲಾ ಶಾಲೆ ಕಾಲೇಜುಗಳಲ್ಲಿಯೂ ಸಹ ಶಿಕ್ಷಣ ಪಡೆಯುತ್ತಾರೆ. ತಮ್ಮ ಮನೆಯ ನೆನಪರಿಕೆಯ ಕೊರಗನ್ನು ಕಳೆದುಕೊಂಡು ಸಂತೋಷದಿಂದ ಕಾಲ ಕಳೆದು, ವಿದ್ಯಾರ್ಥಿದೆಶೆಯನ್ನು ಮುಗಿಸಿಕೊಂಡು ಮರಳಿ ಹೋಗಲು ಅನುಕೂಲವಾಗುವಂತೆ, ಈ ಸಂಘ ಸ್ಥಾಪನೆಯಾಗಿದೆ. ಇದು ಸ್ಥಾಪನೆಯಾಗಿ ಕೇವಲ ಎರಡು ವರ್ಷಗಳಾಯಿತು. ಇದರ ಸ್ಥಾಪನೆಗೆ ಕಾರಣ, ಪ್ರೊ|| ರೆಂಚ್ ಮತ್ತು ಅವರ ಪತ್ನಿ, ಪ್ರೊ|| ಆರಮ್ ಸ್ಟ್ರಾಂಗ್ ಮತ್ತು ಅವರ ಪತ್ನಿ. ಪರದೇಶದ ವಿದ್ಯಾರ್ಥಿಗಳಿಗೆ ಸಾಕಷ್ಟು ಹುರುಪು ಕೊಟ್ಟು ಆಗಾಗ್ಗೆ ಭೇಟಿ ಮಾಡಿ ಮಾತನಾಡಿಸುತ್ತಾರೆ. ಪ್ರತಿ ಬುಧವಾರ ಸಂಜೆ ಎಲ್ಲ ಸದಸ್ಯರು ಒಟ್ಟು ಸೇರುತ್ತಾರೆ. ಸಿನಿಮಾ, ನಾಟಕ, ಪ್ರದರ್ಶನಗಳಲ್ಲದೆ, ಸಭೆ ಚರ್ಚೆಗಳೂ ನಡೆಯುತ್ತವೆ. ಬೇಸಿಗೆಯ ಕಾಲದಲ್ಲಿ, ಚಳಿಯಿಲ್ಲದಾಗ, ವಿಹಾರ ಯಾತ್ರೆಗೆ ಹೋಗುವುದೂ ಉಂಟು. ಈ ಸಂಘದ ಅಧ್ಯಕ್ಷ, ದಕ್ಷಿಣ ಅಮೇರಿಕದ **ಶ್ರೀ ಫೆಡರಿಕೋ ಡೆಮ್ಮರ್** ಎಂದು. ಈತ ಬಹು ಶ್ರಮ ವಹಿಸಿ ಕೆಲಸ ಮಾಡುತ್ತಾನೆ. ಓದು ಮುಗಿಸಿ ಸ್ಪ್ಯಾನಿಷ್ ಭಾಷೆಯ ಉಪಾಧ್ಯಾಯನಾಗಿದ್ದ. ಈಗ ನ್ಯೂಯಾರ್ಕಿಗೆ ಹೋಗುವದರಲ್ಲಿದ್ದಾನೆ. ಈ ಸಂಘದಲ್ಲಿ ಸುಮಾರು ೧೦೦ ಪರದೇಶದ ವಿದ್ಯಾರ್ಥಿಗಳಿದ್ದಾರೆ.

ಅದರಲ್ಲಿ ಚೈನಾ ದೇಶದವರೇ ಹೆಚ್ಚು. ತಿಂಗಳಿಗೊಂದು ಸಲ, ಒಂದು ಗೊತ್ತಾದ ಕಡೆ, ಸಂಜೆ ೪|| ಘಂಟೆಗೆ **'ಕಾಫಿ ಕಾಲ'** ಎಂದು ನಡೆಯುತ್ತದೆ. ಒಬ್ಬರಿಗೊಬ್ಬರು ಬಂದು ಭೇಟಿ ಮಾಡಿ, ಯೋಗಕ್ಷೇಮ ವಿಚಾರಿಸಿಕೊಂಡು, ಕಾಫಿ ಕುಡಿದು, ಬಿಸ್ಕಿಟ್ ತಿಂದು ನಲಿದು ನಕ್ಕು ಹೋಗುವ ಪದ್ಧತಿ. ಕೊನೆಗೆ ನರ್ತನವೂ ನಡೆಯುತ್ತದೆ. ಈ ನರ್ತನವಾದ ನಂತರ ಕೋಕ್ (ಸೋಡಾ) ಕುಡಿದು ಮನೆಗೆ ತೆರಳುತ್ತಾರೆ. ಇಂತಹ ಸಭೆಗಳು ಕೊಲಂಬಿಯಾ ನಗರ ದಲ್ಲಿ ತುಂಬಾ ಹೆಸರುವಾಸಿಗೆ ಬಂದಿದೆ.

## ಸ್ವತಂತ್ರ ಸಂಘಗಳು

ಗಂಡಸರ ಮತ್ತು ಹೆಂಗಸರ ಸ್ವತಂತ್ರ ಸಂಘಗಳೆಂದು ಎರಡು ಪ್ರತ್ಯೇಕ ಸಂಘಗಳಿವೆ. ಈ ಸಂಘಗಳಿಗೆ ಯಾರು ಬೇಕಾದರೂ ಸದಸ್ಯ ರಾಗಬಹುದು. ಈ ಸಂಘಗಳ ಮುಖ್ಯ ಉದ್ದೇಶ ಮಜಾಮಾಡುವುದು. ತಿಂಗಳಿಗೆ ಎರಡು ಬಾರಿ ನರ್ತನಕೂಟ ಏರ್ಪಡಿಸುತ್ತಾರೆ. ಹೊರಗಡೆ ವನಭೋಜನಕ್ಕೆ ಹೋಗುತ್ತಾರೆ, ನಲಿಯುತ್ತಾರೆ, ನರ್ತನ ಮಾಡುತ್ತಾರೆ. ಕುಡಿಯುತ್ತಾರೆ. ಈ ಸಂಘದ ಸದಸ್ಯರೊಬ್ಬರಿಗೆ ಜೊತೆಗಾತಿ ಸಿಕ್ಕದಿದ್ದರೆ, ಅವರಿಗೆ ಜೊತೆಗಾತಿ ಪಡೆಯಲು ಅನುಕೂಲ ಮಾಡಿಕೊಡುತ್ತಾರೆ. ಅದಕ್ಕಾಗಿ ಸ್ನೇಹ ದೊರಕಿಸುವ ಶಾಖೆಯನ್ನೇ ಏರ್ಪಡಿಸಿದ್ದಾರೆ. ಆಫೀಸಿನಲ್ಲಿರುವ ಕಾರ್ಡನ್ನು ತುಂಬಬೇಕು. ಅದರಲ್ಲಿ ಹೆಸರು, ಎತ್ತರ, ಅಭಿರುಚಿ, ಉದ್ದೇಶ ಮುಂತಾದುವುಗಳನ್ನು ನಮೂದಿಸಬೇಕು. ಅದಕ್ಕೆ ತಕ್ಕಂತೆ, ಆತನ ಅಭಿರು ಚಿಗೆ ಅನುಕೂಲಳಾದ ಹುಡುಗಿಯನ್ನು ಆರಿಸಿಕೊಡುವುದು ಈ ಶಾಖೆಯ ಕೆಲಸ.

## ಪದವೀಧರರ ಸಂಘ

ಗ್ರ್ಯಾಜುಯೇಟ್ ಕ್ಲಬ್ ಎನ್ನುವುದು ಬರೀ ಪೋಸ್ಟ್ ಗ್ರ್ಯಾಜು ಯೇಟ್ ಅಭ್ಯಾಸ ಮಾಡುವವರ ಸೌಲಭ್ಯಕ್ಕಾಗಿ. ಚರ್ಚೆಗಳು, ಭಾಷಣ ಗಳು, ಸ್ವಲ್ಪ ಹೆಚ್ಚಿನ ಮಟ್ಟದಲ್ಲಿರುತ್ತವೆ. ಈ ಸಂಘವೂ ನರ್ತನ ಪಾರ್ಟಿ

ಏರ್ಪಡಿಸುತ್ತದೆ. ಗ್ರ್ಯಾಜುಯೇಟ್ ವಿದ್ಯಾರ್ಥಿಗಳ ಕುಂದು ಕೊರತೆಗಳನ್ನು ಹೋಗಲಾಡಿಸಲು ಅನುಕೂಲ ಮಾಡಿಕೊಡುತ್ತದೆ.

## ಪಿ. ಎಸ್. ಎ.

ಪ್ರೊಗ್ರೆಸಿವ್ ಸ್ಟೂಡೆಂಟ್ ಅಸೋಸಿಯೇಷನ್, ಎಂಬುದು ಹೆನ್ರಿ ವಾಲೇಸರ ಪ್ರೊಗ್ರೆಸಿವ್ ಸಿಟಿಝುನ್ಸ್ ಆಫ್ ಅಮೇರಿಕಾ ಸಂಘದ ಮರಿ. ಹೆನ್ರಿ ವಾಲೇಸರ ತತ್ವಗಳನ್ನು ಪ್ರತಿಪಾದಿಸುವುದೇ ಇದರ ಮುಖ್ಯ ಉದ್ದೇಶ. ನೀಗ್ರೋ ವಿದ್ಯಾರ್ಥಿಗಳಿಗೆ ವಿಶ್ವವಿದ್ಯಾನಿಲಯದಲ್ಲಿ ಓದಲು ಅವಕಾಶ ಕೊಡಬೇಕೆಂದು ಚಳುವಳಿ ಹೂಡಿದೆ. ಇದು ಸಮಾಜವಾದಿ ಸಂಸ್ಥೆ ಎಂದು ಅಧಿಕಾರಿಗಳ ದೂರು. ಪ್ರಗತಿಪರ ಅಮೇರಿಕನ್ ಸಂಘವೆಂದು ವಿದ್ಯಾರ್ಥಿಗಳ ಉತ್ತರ.

## ಸ್ಟಿಗ್ಮಟ್ರೈಜ್

ಸ್ಟಿಗ್ಮಟ್ರೈಜ್ ಎಂಬುದು ಪತ್ರಿಕಾ ವ್ಯವಸಾಯವನ್ನು ಕಲಿಯುಲು ಬಂದಿರುವ ವಿದ್ಯಾರ್ಥಿಗಳ ಸಂಸ್ಥೆ. ಪ್ರಪಂಚದ ಯಾವ ರಾಜಧಾನಿಯಲ್ಲೂ ಇಲ್ಲದಷ್ಟು ಸುದ್ದಿಗಾರರು ಕೊಲಂಬಿಯಾದಲ್ಲಿದ್ದಾರೆ. ೧೫೦೦ ಸುದ್ದಿಗಾರರು! ಅಬ್ಬಾ! ಪತ್ರಿಕಾ ವ್ಯವಸಾಯಕ್ಕೆ ಸಂಬಂಧಪಟ್ಟ ಸುದ್ದಿಗಳನ್ನು ಅಭ್ಯಸಿಸುವುದು, ಸುಪ್ರಸಿದ್ಧ ಪತ್ರಿಕೋದ್ಯಮಿಗಳನ್ನು ಕರೆಯಿಸಿ, ಅವರಿಂದ ಭಾಷಣ ಮಾಡಿಸುವುದು ಇದರ ಉದ್ದೇಶ. ಶಾಖೆಯ ಮುಖ್ಯಾಧಿಕಾರಿ ಫ್ರಾಂಕ್ ಲ್ಯೂಥರ್ ಮಾಟ್‌ರು ನೇರವಾದ ಆಸಕ್ತಿಯನ್ನು ವಹಿಸಿ ಆಗಾಗ್ಗೆ ಸಂಘದ ಕೆಲಸದ ಬಗ್ಗೆ ಸಲಹೆ ಕೊಡುತ್ತಾರೆ. ಈ ಸಂಘವು ಪ್ರತಿ ವರ್ಷದ ಮೇ ತಿಂಗಳಲ್ಲಿ ಪತ್ರಿಕೋದ್ಯಮದ ವಾರವನ್ನು ಏರ್ಪಡಿಸಿ, ದೇಶದ ನಾನಾ ಸುಪ್ರಸಿದ್ಧ ಪತ್ರಿಕೋದ್ಯಮಿಗಳನ್ನು ಕರೆಯಿಸಿ ಒಂದು ದೊಡ್ಡ ಹಬ್ಬವನ್ನೇ ಮಾಡುತ್ತದೆ. ಇದೇ ಇವರ—ನಮ್ಮ—ಪ್ರಮುಖ ಹಬ್ಬ. ಹಬ್ಬದ ಕೊನೆಯ ದಿನ ಪರದೇಶದ ವಿದ್ಯಾರ್ಥಿಗಳಿಗೆ ವಿಶೇಷ ಔತಣವೊಂದನ್ನೇರ್ಪಡಿಸಿ ಆಯಾ ದೇಶದ ವೃತ್ತ ಪತ್ರಿಕಾ ಪ್ರಪಂಚವನ್ನು ತಿಳಿದುಕೊಳ್ಳುತ್ತಾರೆ.

## ವೈ. ಎಂ. ಸಿ. ಎ.

ವಿದ್ಯಾರ್ಥಿಗಳಿಗೆ ಪ್ರತ್ಯೇಕವಾಗಿ ವೈ.ಎಂ.ಸಿ.ಎ. ಮತ್ತು ವೈ.ಡಬ್ಲ್ಯು. ಸಿ.ಎ. ಶಾಖೆಗಳಿವೆ. ಹೊಸದಾಗಿ ಬಂದ ವಿದ್ಯಾರ್ಥಿಗಳಿಗೆ ಇರಲು ಸ್ಥಳಾವಕಾಶ ಮಾಡಿಕೊಡುವುದು, ಮಾನವ ಕುಲದ ಕಲ್ಯಾಣದ ಕೆಲಸಗಳಲ್ಲಿ ಸಹಕರಿಸು ವುದು, ಸಾಮಾನ್ಯವಾಗಿ ವಿದ್ಯಾರ್ಥಿಗಳ ಕುಂದು ಕೊರತೆಗಳನ್ನು ನಿವಾರಿಸಲು ಪ್ರಯತ್ನಪಡುವುದು, ಇವೇ ಇದರ ಮುಖ್ಯಉದ್ದೇಶ. ಇಲ್ಲಿಯ ವೈ.ಎಂ.ಸಿ.ಎ. ದ ಕೆಲಸ ಅಷ್ಟು ಹುರುಪಿನಿಂದ ನಡೆಯುತ್ತಿಲ್ಲ.

## ಎಂ. ಎಸ್. ಒ.

ಇದಲ್ಲದೆ ಮೆಥಾಡಿಸ್ಟ್ ವಿದ್ಯಾರ್ಥಿಗಳ ಸಂಘ ಎಂದು ಕೇವಲ ಒಂದು ಚರ್ಚಿನ ಆಡಳಿತಕ್ಕೊಳಪಟ್ಟ, ಆ ಮತ ಪಂಥದವರ ಒಂದು ವಿದ್ಯಾರ್ಥಿ ಸಂಘ ವಿದೆ. ಇವರು ಪ್ರತಿ ಶುಕ್ರವಾರ ಸಾಯಂಕಾಲ ಸಭೆ ಸೇರಿ ಆಟಗಳಲ್ಲಿ ನಿರ ತರಾಗಿರುತ್ತಾರೆ. ಯಾರು ಬೇಕಾದರೂ ಗೌರವ ಸದಸ್ಯರಾಗಬಹುದು. ಈ ಸಲ ಈ ಸಂಘದ ಸದಸ್ಯರು ಹಣ, ಬಟ್ಟೆ, ಆಹಾರ ಶೇಖರಿಸಿ ಯುರೋ ಪಿನಲ್ಲಿ ನರಳುತ್ತಿರುವವರಿಗೆ ಕಳುಹಿಸಿಕೊಟ್ಟರು. ಇಂತಹ ಕೆಲಸ ಮಾಡುತ್ತಿ ರುವ ಸಂಸ್ಥೆ ಇದೊಂದು.

ನಮ್ಮ ವಿಶ್ವವಿದ್ಯಾನಿಲಯುದಲ್ಲಿ ಸುಮಾರು ೧೦೦ ಪರದೇಶದ ವಿದ್ಯಾರ್ಥಿ ಗಳಿದ್ದಾರೆ ಎಂದು ಹಿಂದೆಯೇ ತಿಳಿಸಿದೆನಷ್ಟೆ. ಇವರಲ್ಲಿ ಚೀನಿಯರು ೩೦, ದಕ್ಷಿಣ ಅಮೇರಿಕದವರು ೨೫, ಭಾರತೀಯರು ೧೦, ಸಿರಿಯನ್‌ರು ೧೫, ಉಳಿದವರು ನಾನಾ ದೇಶದವರು. ಇವರಲ್ಲಿ ಮೂರು ದೇಶದವರು ತಮ್ಮದೇ ಆದ ಸಂಘಗಳನ್ನೇರ್ಪಡಿಸಿಕೊಂಡಿದ್ದಾರೆ.

## ಐ. ಎ. ಸಿ.

ಇಂಟರ್ ಅಮೇರಿಕನ್ ಕ್ಲಬ್ ಎಂಬುದು ಸ್ಪ್ಯಾನಿಷ್ ಮಾತನಾಡುವ ದಕ್ಷಿಣ ಅಮೇರಿಕದ ವಿದ್ಯಾರ್ಥಿಗಳದು. ತಿಂಗಳಿಗೊಮ್ಮೆ ಒಂದೆಡೆ ಸೇರಿ, ನರ್ತನ, ಹಾಡು, ತಮ್ಮದೇ ಆಹಾರ, ಮುಂತಾದವುಗಳಲ್ಲಿ ಮಗ್ನರಾಗಿರು

ತ್ತಾರೆ. ಆಗಾಗ್ಗೆ ತಮ್ಮ ದೇಶಗಳ ಬಗ್ಗೆ ವಿಷಯ ತಿಳಿಸಲು ಸಭೆ ಸೇರಿ ಪರದೇಶದ ಮತ್ತು ಅಮೇರಿಕನ್ ವಿದ್ಯಾರ್ಥಿಗಳಿಗೆ ಔತಣ ಕೊಡುತ್ತಾರೆ. ಇದು ಜನ್ಮತಾಳಿ ಕೆಲವು ವರ್ಷ ಮಾತ್ರವಾದರೂ ಸಾಕಷ್ಟು ಕೆಲಸ ಮಾಡಿದೆ. ಸ್ಪ್ಯಾನಿಷ್ ಭಾಷೆ ಕಲಿಯಲಿಚ್ಛಿಸುವವರಿಗೆ ಉಚಿತವಾಗಿಹೇಳಿ ಕೊಡುವ ವ್ಯವಸ್ಥೆ ಮಾಡಿದ್ದಾರೆ.

## ಸಿ. ಎಸ್. ಎ.

ಚೀನಿ ವಿದ್ಯಾರ್ಥಿ ಸಂಘವು ಸ್ಥಾಪಿತವಾಗಿ ಮೂರು ವರ್ಷವಾಯಿತು. ಪೂರ್ವ ಏಷ್ಯಾದ ವಿದ್ಯಾರ್ಥಿಗಳ ಮೇಲೆ ಈ ಅಮೇರಿಕನ್ನರಿಗೆ ಏನೋ ಒಂದು ಅಭಿಮಾನ. ಕಾರಣ ಈ ಸಂಘಗಳಿಗೆ ಹೆಚ್ಚು ಜನ ಬರುತ್ತಾರೆ. ವಿಷಯ ತಿಳಿದುಕೊಳ್ಳಬೇಕೆಂಬುದು ಅವರ ಹಿರಿಯರ ಅಭಿಲಾಷೆ. ಮೊನ್ನೆ ರಾತ್ರಿ ಚೀನಾ ವಿದ್ಯಾರ್ಥಿಗಳೆಲ್ಲರೂ ಸೇರಿ **"ಚೀನಾ ರಾತ್ರಿ"** ಎಂಬ ಪ್ರದರ್ಶನವನ್ನೇರ್ಪಡಿಸಿದ್ದರು. ಚೀನಿಯರ ಕಲೆ, ನರ್ತನ, ಹಾಡುಗಳು, ನಾಟಕ ಮುಂತಾದುವನ್ನು ಪ್ರದರ್ಶಿಸಿದ್ದರು. ಚೀನಿಯರ ಮದುವೆಯ ಪದ್ಧತಿ ಸಭಿಕರನ್ನು ಆನಂದ ಸಾಗರದಲ್ಲಿ ಮುಳುಗಿಸಿತು. ಇಬ್ಬರು ಚೀನಿ ವಿದ್ಯಾರ್ಥಿಗಳು, ರಂಗಸ್ಥಳದ ಮೇಲೆಯೇ ಮದುವೆಯ ಸಮಾರಂಭ ನಡೆಯಿಸಿಬಿಟ್ಟರು. ಚೀನಾ ದೇಶದ ಚಲನ ಚಿತ್ರ ಪ್ರದರ್ಶನದೊಂದಿಗೆ ಆ ರಾತ್ರಿ ಮುಗಿಯಿತು.

## ಭಾರತೀಯ ವಿದ್ಯಾರ್ಥಿ ಸಂಘ

ಇದು ಭಾರತೀಯ ವಿದ್ಯಾರ್ಥಿಗಳ ಸಂಘ. ಇದರ ಜನ್ಮ, ನವೆಂಬರ ೩೦,೪೭ರಲ್ಲಿ. ಅದಕ್ಕೆ ಮುಂಚೆ ಕೇವಲ ೬ ವಿದ್ಯಾರ್ಥಿಗಳಿದ್ದ ಕಾರಣ ಸಂಘದ ಅವಶ್ಯಕತೆ ಇರಲಿಲ್ಲ. ನಮ್ಮ ಸಂಘದ ಪ್ರಾರಂಭೋತ್ಸವವನ್ನು ಪ್ರಪಂಚ ವಿದ್ಯಾರ್ಥಿ ಸಂಘದ, ಡಾ|| ಮಾಲ್ಕಂ ಆದಿಶೇಷಯ್ಯನವರು ನೆರವೇರಿಸಿದರು.

ನಮ್ಮ ಸಂಘದ ಉದ್ದೇಶ, ಭಾರತೀಯ ವಿದ್ಯಾರ್ಥಿಗಳಿಗೆ ಊಟ ವಸತಿ ಅನುಕೂಲ ಮಾಡಿಕೊಡುವುದು, ಭಾರತೀಯ ಸಂಸ್ಕೃತಿ ಅಮೇರಿಕನ್ನ

ರಲ್ಲಿ ಹರಡುವುದು. ನಮ್ಮ ಸಂಘದ ಸದಸ್ಯರು ಒಳ್ಳೆಯ ಭಾಷಣಕಾರರೆಂದು ಹೆಸರು ಪಡೆದಿದ್ದಾರೆ. ಸುತ್ತಮುತ್ತಲೂ ಇರುವ ನಾನಾ ಊರು, ಪಟ್ಟಣಗಳ ರೋಟರಿ ಕ್ಲಬ್ಸ್, ಚೇಂಬರ್ ಆಫ್ ಕಾಮರ್ಸ್, ಮತ್ತು ಚರ್ಚುಗಳಲ್ಲಿ ಅನೇಕ ಭಾಷಣಗಳನ್ನು ಮಾಡಿ ನಮ್ಮ ಸದಸ್ಯರು ಹೆಸರು ಪಡೆದಿದ್ದಾರೆ. ಸಂಘವನ್ನು ಹರಸಿ ಶ್ರೀಮತಿ ಪರ್ಲ್‌ಬಕ್, ಪ್ರೊ|| ಐನ್ ಸ್ಟೈನ್ ಮತ್ತು ಸರ್ದಾರ್ ಜೆ. ಜೆ. ಸಿಂಗ್, ತಂತಿ ಕಳುಹಿಸಿದ್ದರು. ಪಾಕೀಸ್ತಾನದ ಇಬ್ಬರು ಪ್ರತಿನಿಧಿಗಳೂ ನಮ್ಮ ಸಂಘದಲ್ಲೇ ಸೇರಿಕೊಂಡಿದ್ದಾರೆ. ಮೊನ್ನೆ ಗಾಂಧೀಜಿ ಉಪವಾಸ ಪ್ರಾರಂಭ ಮಾಡಿದಾಗ ಅವರ ಜೀವ ಉಳಿಯಲೆಂದು ನಮ್ಮ ಸಂಘದವರು ಚರ್ಚಿನಲ್ಲಿ ಹೋಗಿ ವಿಶೇಷ ಪ್ರಾರ್ಥನೆಯನ್ನು ನಡೆಯಿಸಿದರು. ನಮ್ಮ ಆರ್ತನಾದ ದೇವರಿಗೆ ಕೇಳಿಸಿರಬೇಕು. ಅಂತೆಯೇ ಗಾಂಧೀಜಿ ಆಗ ಉಪವಾಸ ನಿಲ್ಲಿಸಿದರು. ನಮ್ಮ ಸಂಘ ಸಂತೋಷದಲ್ಲಿ ಮುಳುಗಿತು.

---

## ಓಜಾರ್ಕ್ಸ್ ಉದ್ಯಾನವನದಲ್ಲಿ

ಅಮೇರಿಕದ ಸಂಯುಕ್ತ ಸಂಸ್ಥಾನಗಳಲ್ಲೆಲ್ಲ ಮಿಸ್ಸೋರಿ ಸಂಸ್ಥಾನವು ಪ್ರಕೃತಿ ಸೌಂದರ್ಯದ ಬೀಡೆಂದು ಹೆಸರುವಾಸಿಯಾಗಿದೆ. ಮಿಸ್ಸೋರಿ ಮತ್ತು ಮಿಸ್ಸಿಸ್ಸಿಪ್ಪಿ ನದಿಗಳಿಂದಾವೃತವಾಗಿ ಅನೇಕ ಸುಂದರ ಉದ್ಯಾನವನಗಳನ್ನು ಪಡೆದು, ಅಲ್ಲಲ್ಲಿ ರಮಣೀಯವಾದ ಸರೋವರಗಳಿಂದ ಶೋಭಿಸುತ್ತಿದೆ. ಇಂತಹ ಸರೋವರಗಳಲ್ಲಿ ಓಜಾರ್ಕ್ಸ್ ಸರೋವರವೂ ಒಂದು. ಮಿಸ್ಸೋರಿ ವಿಶ್ವವಿದ್ಯಾನಿಲಯದಲ್ಲಿ ಅಂತರ ರಾಷ್ಟ್ರೀಯ ವಿದ್ಯಾರ್ಥಿ ಸಂಘದ ಸದಸ್ಯರಾದ ನಾವೆಲ್ಲ ಈ ಸರೋವರವನ್ನು ನೋಡಲು ಹೋಗಿದ್ದೆವು.

**ಬಾಗ್‌ನೆಲ್** ಎಂಬ ಪಟ್ಟಣದ ಹತ್ತಿರ ಹರಿಯುವ **ಒಸಾಗೋ** ನದಿಗೆ ಒಂದು ದೊಡ್ಡ ಆಣೆಕಟ್ಟನ್ನು ಕಟ್ಟಿದ್ದಾರೆ. ಇದರ ಸುತ್ತಲೂ ಇರುವುದೇ ಓಜಾರ್ಕ್ಸ್ ಸರೋವರ. ಈ ಸರೋವರ ೧೨೯ ಮೈಲು ಉದ್ದವಿದೆ. ೯೫

ಚದುರ ಮೈಲು ವಿಸ್ತಾರವಾಗಿದೆ. ಇದರ ದಂಡೆ ೧೩೦೦ ಮೈಲು ಚಾಚಿ ಕೊಂಡಿದೆ. ಇದರ ಸುತ್ತಲೂ ಮಿಲ್ಲರ್, ಮಾರ್ಗನ್, ರಾಮೆಡೆನ್ ಮತ್ತು ಬೆಂಟಲ್ ಜಿಲ್ಲೆಗಳಿವೆ. ಈ ಅಣೆಕಟ್ಟು ಸುಪ್ರಸಿದ್ಧವಾದ ಸೆಂಟ್‌ಲೂಯಿಸ್ ಪಟ್ಟಣಕ್ಕೆ ೧೩೮ ಮೈಲಿಯೂ ಈ ಸಂಸ್ಥಾನದ ರಾಜಧಾನಿಯಾದ ಜಫರ್‌ಸನ್ ನಗರಕ್ಕೆ ೪೮ ಮೈಲಿಯೂ ಮತ್ತು ಕ್ಯಾನ್‌ಸಸ್ ನಗರಕ್ಕೆ ೧೬೦ ಮೈಲು ದೂರವೂ ಇದೆ. ನಾವಿರುವ ಕೊಲಂಬಿಯಾಕ್ಕೆ ೮೦ ಮೈಲು. ಈ ಅಣೆ ಕಟ್ಟನ್ನು ಕಟ್ಟಲು ೨ ವರ್ಷ ಬೇಕಾಯಿತು. ಸುಮಾರು ೪೪೦೦ ಜನ ಸತತವೂ ದುಡಿದರು. ಅದರ ಫಲವಾಗಿ ಮೂರು ವಿದ್ಯುದ್ವಾಹಕ ತಂತಿ ಮಾರ್ಗಗಳಲ್ಲಿ ಸೆಂಟ್ ಲೂಯಿಸ್ ನಗರಕ್ಕೆ ವಿದ್ಯುಚ್ಛಕ್ತಿಯನ್ನು ಒದ ಗಿಸಲಾಗುತ್ತಿದೆ.

ಅಮೇರಿಕದ ಜನ ಯಾವ ರೀತಿಯಲ್ಲಿ ತಮ್ಮ ಆದಿತ್ಯವಾರದ ಬಿಡು ವನ್ನು ಕಳೆಯುವರೆಂದು ನೋಡಬೇಕೆಂದು ಕುತೂಹಲದಿಂದ ನಾನೂ ಈ ಸರೋವರ ನೋಡಲು ಮತ್ತು ಆ ದಿನ ಅವರೊಂದಿಗೆ ಕಳೆಯಲು ನಿರ್ಧರಿ ಸಿದೆ. ನನ್ನ ಜೊತೆಗೆ ನನ್ನ ಭಾರತೀಯ ಮಿತ್ರರಾದ ಶ್ರೀ ಜೈನ್, ಸಿಂಗ್, ಕೊಣ್ಣೂರರು ಬರಲೊಪ್ಪಿದರು. ಅಂತರ ರಾಷ್ಟ್ರೀಯ ಸಂಘದವರೇ ಈ ಸಂಚಾರ ಏರ್ಪಡಿಸಿದ್ದರು. ಒಬ್ಬೊಬ್ಬರಿಗೆ ೫ ಡಾಲರು ಚಂದಾ. ಎರಡು ಊಟ, ಎರಡು ತಿಂಡಿ, ಹೋಗಿ ಬರುವ ದಾರಿಯ ಖರ್ಚು, ಇಷ್ಟಾದರೂ ೫ ಡಾಲರು. ನಮಗಾಗಿ ಒಂದು ಬಸ್ಸನ್ನೇ ಬಾಡಿಗೆಗೆ ತೆಗೆದು ಕೊಂಡಿದ್ದೆವು. ಇಂಡಿಯ, ದಕ್ಷಿಣ ಅಮೇರಿಕ, ಕ್ಯೂಬ, ಹವಾಯಿ, ಜರ್ಮನಿ, ಈಜಿಪ್ಟ್, ಚೀನ, ಉತ್ತರ ಅಮೇರಿಕ, ಸಿರಿಯಾ, ಈ ರಾಷ್ಟ್ರಗಳ ವಿದ್ಯಾರ್ಥಿ ಗಳಿದ್ದರು. ಅಮೇರಿಕನ್ನರೇ ಜಾಸ್ತಿ. ಒಟ್ಟು ನಾವು ೩೬ ಜನರಿದ್ದೆವು. ನಮಗೆ ೫ ಘಂಟೆಗೆ ಬಸ್ ನಿಲ್ದಾಣಕ್ಕೆ ಬರಲು ತಿಳಿಸಿದ್ದರು. ನಾವೆದ್ದಾಗ ಬೆಳಕು ಬಂದುಬಿಟ್ಟಿತ್ತು. ಆದರೂ ೫ ಘಂಟೆಯೇ! ಸೂರ್ಯ ಹಣಕಿ ನೋಡುತ್ತಿದ್ದ. ಈ ದೇಶದಲ್ಲಿ ಬೇಸಿಗೆಯಲ್ಲಿ ಹಗಲು ಬಹಳ; ಬೆಳಗ್ಗೆ ೫

ಘಂಟೆಗೆ ಬೆಳಕಾಗಿರುತ್ತದೆ. ಅಂತರರಾಷ್ಟ್ರೀಯ ಬಸ್ಸು ೬|| ಘಂಟೆಗೆ ಓಜಾರ್ಕ್ಸ್ ಮಾರ್ಗವಾಗಿ ಪ್ರಯಾಣ ಬೆಳಸಿತು.

ಸಾಮಾನ್ಯವಾಗಿ ಎಲ್ಲ ವಿದ್ಯಾರ್ಥಿಗಳ ಕೈಯಲ್ಲೂ ಒಂದು ಕ್ಯಾಮರ ವಿತ್ತು. ಅವರುಟ್ಟ ಬಟ್ಟೆ ಸಾಧಾರಣವಾಗಿ ನಮ್ಮ ಜನ ಕೆಲಸಕ್ಕೆ ಹೋಗು ವಾಗ ಹಾಕುವ ಷರಟು ನಿಕ್ಕರಿನಂತೆ ಇತ್ತು. ಹುಡುಗಿಯರೂ ಕೂಡ ಪೈಜಾಮ ಹಾಕಿಕೊಂಡು ಬಂದಿದ್ದರು. ಹುಡುಗಿಯರೆಲ್ಲ ಒಬ್ಬೊಬ್ಬ ಗೆಳೆಯ ನನ್ನು ಅಂದಿನ ದಿನಕ್ಕೆ ಮಾತ್ರ ಗಂಟುಹಾಕಿಕೊಂಡು ಬಂದಿದ್ದರು. ಬೇಸಿಗೆ ಯಲ್ಲಿ ಈಜುವುದು ಒಂದು ದೊಡ್ಡ ಆಟ ಈ ಜನಕ್ಕೆ. ಪ್ರತಿಯೊಬ್ಬರೂ ತಮ್ಮ ತಮ್ಮ ಈಜುವ ಲಂಗ ತಂದಿದ್ದರು.

ಅಂತರ ರಾಷ್ಟ್ರೀಯ ಸಂಘದ ಅಧ್ಯಕ್ಷ, **ಫ್ರೆಡ್ ಡ್ರೆಮ್ಮರ್** ಎಂದು. ಆತ ದಕ್ಷಿಣ ಅಮೇರಿಕದಾತ. ಇಲ್ಲಿಯ ಕಾಲೇಜಿನಲ್ಲಿ ಎಂ.ಎಸ್.ಸಿ. ಪರೀ ಕ್ಷೆಗೆ ಓದುತ್ತಿದ್ದಾನೆ. ಅಮೇರಿಕೆಯ ಹೆಣ್ಣೊಂದನ್ನು ಮದುವೆಯಾಗಿ ಇಲ್ಲಿಯೇ ನೆಲಸಲು ಯೋಚಿಸಿದ್ದಾನೆ. ಆತನ ಹೆಂಡತಿಯ ತೌರುಮನೆ ದಾರಿಯಲ್ಲಿ ಸಿಕ್ಕಿತು. ಮೊದಲು ಅಲ್ಲಿಗೆ ಹೋಗಿ ನಂತರ ಓಜಾರ್ಕ್ಸ್‌ಗೆ ಹೋಗ ಬೇಕೆಂದು ತೀರ್ಮಾನವಾಗಿತ್ತು. ನಮ್ಮ ಬಸ್ಸು **'ಮ್ಯಾಕ್ಸಿಕೇವ್'** ಬಳಿ ಬೆಳಗ್ಗೆ ೯ಕ್ಕೆ ಬಂದಿತು. ದಾರಿಯಲ್ಲಿ ಬರುವಾಗ ಬಸ್ಸಿನಲ್ಲಿ ಅಂಜೂರದ ಹಣ್ಣು ತಿಂದೆವು. ದಕ್ಷಿಣ ಅಮೇರಿಕೆಯ ಹುಡುಗಿಯರು ಗಾನ ಮಾಡಿದರು. ಅಲ್ಲಲ್ಲಿ ಅನೇಕರು ಭಾವ ಚಿತ್ರ ತೆಗೆದುಕೊಂಡರು.

'ಮ್ಯಾಕ್ಸಿ ಕೇವ್' ಅರಣ್ಯದ ಮಧ್ಯದಲ್ಲಿದೆ. ಅಮೇರಿಕದ ಹಿಂದಿನ ನಿವಾಸಿಗಳು ಈ ಸುರಂಗದಲ್ಲಿ ವಾಸವಾಗಿದ್ದರು. ನಾಲ್ಕು ಮೈಲು ಸುರಂಗ ದಲ್ಲಿ ನಡೆದರೂ ಏನೂ ಸಿಕ್ಕುವುದಿಲ್ಲ, ಕಗ್ಗತ್ತಲೆ. ಧೈರ್ಯವಂತರೆಂದು ಅಂದು ಕೊಂಡ ನಾವು ೨೦ ಜನ ಸುರಂಗ ಭೇದಿಸಲು ನಿರ್ಧರಿಸಿ ಅನೇಕ ಟಾರ್ಚ್ ದೀಪಗಳನ್ನು, ದಾಹ ಅಡಗಿಸಿಕೊಳ್ಳಲು ಕೋಕಕೋಲಗಳನ್ನು, ತೆಗೆದು ಕೊಂಡು ಹೊರಟೆವು. ಸುಮಾರು ೨ ಫರ್ಲಾಂಗ್ ಹೋಗಿರಬಹುದು.

ಮುಂದೆ ದಾರಿಯೇ ಕಾಣಲೊಲ್ಲದು. ಎಲ್ಲಿ ನೋಡಿದರೂ ಕಪ್ಪು ಕತ್ತಲೆ. ಕವಲು ದಾರಿ ಬಂದಾಗ ಯಾವ ದಾರಿಯಲ್ಲಿ ಹೋಗಬೇಕೆಂಬುದೇ ತಿಳಿಯು ಲಿಲ್ಲ. ಅಂತೂ ಕೊನೆಗೆ ಧೈರ್ಯಮಾಡಿ, ದೇವರ ಮೇಲೆ ಭಾರಹಾಕಿ ಮುಂದುವರಿದೆವು. ಸುರಂಗದಲ್ಲಿ ಒಂದು ಮೈಲಿನವರೆಗೂ ಹೋಗಿದ್ದಿರಬಹುದು. ಅಲ್ಲಿ ಒಂದು ದೊಡ್ಡ ಗುಂಡಿ ಬಂದಿತು. ಅಲ್ಲಿಂದ ಮುಂದೆ ಹೋಗಲು ಸಾಧ್ಯವಾಗಲಿಲ್ಲ. ಹಿಂತಿರುಗಿದೆವು. ಎಲ್ಲಿಗೆ? ಗೊತ್ತೇ ಆಗಲಿಲ್ಲ. ಮಧ್ಯಾಹ್ನ ೧೨ ಘಂಟೆಯವರೆಗೂ ಸಂರಂಗದಲ್ಲಿ ಕತ್ತಲೆಯಲ್ಲಿ ತಿರುಗಾಡಿದೆವು. ಯಾವ ಪ್ರಾಣಿಗಳ ಭಯವೂ ಇರಲಿಲ್ಲ. ಸುಮಾರು ಒಂದು ಘಂಟೆಯ ಹೊತ್ತಿಗೆ ಇನ್ನಾವುದೋ ದಾರಿಯಲ್ಲಿ ಸುರಂಗದಿಂದ ಹೊರಗೆ ಬಂದೆವು. ಸದ್ಯ ಜೀವ ಬದುಕಿತು ಅಂದೆವು.

ಡ್ರೆಮ್ಮರನ ಹೆಂಡತಿಯ ಚಿಕ್ಕಪ್ಪ ಈ ಅರಣ್ಯದಲ್ಲಿ ಏಕಾಂಗಿಯಾಗಿ ವಾಸವಾಗಿದ್ದಾನೆ. ಮ್ಯಾಕ್ಸಿ ಕೇವದ ಅನಧಿಕಾರಿ ಚಕ್ರವರ್ತಿ ಆತ. ಆತನ ವಯಸ್ಸು ೮೨. ಸುಮಾರು ೨೨ ವರ್ಷಗಳಿಂದ ಅಲ್ಲಿ ವಾಸವಾಗಿದ್ದಾನೆ. ಮೊದಲು ಸುರಂಗದ ಬಾಯಿಯಲ್ಲಿಯೇ ಗುಡಿಸಲೊಂದನ್ನು ಕಟ್ಟಿಕೊಂಡಿದ್ದು, ಯಾತ್ರಿಕರಿಗೆಲ್ಲಾ ದಾರಿ ತೋರಿಸುತ್ತಿದ್ದ. ಒಂದು ದಿನ ಆತನ ಗುಡಿಸಲಿಗೆ ಆಕಸ್ಮಿಕವಾಗಿ ಬೆಂಕಿ ಬಿದ್ದು ಸುಟ್ಟುಹೋಯಿತು. ಅಂದಿನಿಂದ ಸುರಂಗದ ಗುಡ್ಡದ ಮೇಲೆ ಗುಡಿಸಲು ಕಟ್ಟಿಕೊಂಡಿದ್ದಾನೆ. ಆತ ಅಮೇರಿಕದ ಋಷಿ ಎನ್ನಬಹುದು. ಅವನ ಹೆಸರು **ಎಲ್. ಸಿ. ಸ್ಮಿತ್** ಎಂದು. ಪುಟ್ಟ ಗುಡಿಸ ಲಿಗೆ ಚಿಕ್ಕ ರೇಡಿಯೋ ಇದೆ. ಒಂದೇ ಕೊಠಡಿಯ ಮನೆ. ಆಹಾರ ಸಾಮಗ್ರಿ ತರಲು ೨|| ಮೈಲು ದೂರ ಹೋಗಬೇಕು. ರೇಡಿಯೋದ ಮೂಲಕ ಪ್ರಪಂಚದ ಸುದ್ದಿ ಕೇಳುತ್ತಾನೆ. ಆದ್ದರಿಂದಲೇ ಆತ "ನನಗೆ ದಿನ ಪತ್ರಿಕೆ ಗಳ ಅವಶ್ಯಕತೆಯೇ ಇಲ್ಲ'' ಎನ್ನುತ್ತಾನೆ. ಚಾಚೂ ತಪ್ಪದೆ ವಾರ ಪತ್ರಿಕೆ ತರಿಸಿಕೊಳ್ಳುತ್ತಾನೆ. ಆತನಿಗೆ ಈಗ ಹೆಂಡತಿ ಇಲ್ಲ. ಇಬ್ಬರು ಗಂಡುಮಕ್ಕಳಿದ್ದಾರೆ. ಒಬ್ಬಾಕೆ ಹೆಣ್ಣುಮಗಳು. ಮಾರ್ಗರೆಟ್ ಎಂದು ಆಕೆಯ ಹೆಸರು. ಬೇಸಿಗೆಯಲ್ಲಿ ನಾಲ್ಕು ದಿನ ಇದ್ದು ಹೋಗಲು

ನಾವು ಹೋದಾಗ ಬಂದಿದ್ದಳು. ಅಲ್ಲಿಗೆ ಹೋಗುವವರ ರುಜು, ಪುಸ್ತಕದಲ್ಲಿ ಬೀಳಲೇ ಬೇಕು ಇದು ಸ್ಮಿತ್ತನ ಬಯಕೆ. ಅದಕ್ಕಾಗಿ ಒಂದು ದೊಡ್ಡ ಪುಸ್ತಕವನ್ನೇ ಇಟ್ಟಿದ್ದಾನೆ. ಸುಮಾರು ೨೬ ಹೊರದೇಶದವರು ಈ ಪುಸ್ತಕ ದಲ್ಲಿ ಸಹಿ ಮಾಡಿದ್ದಾರೆ.

'ಏಕಾಂಗಿಯ ಜೀವನ ಹೇಗೆ ನಡೆಸುತ್ತೀ' ಎಂದು ಕೇಳಿದೆ. 'ಓ! ನಾನು ಏಕಾಂಗಿಯಲ್ಲ. ನನ್ನ ಜೊತೆಗೆ ನಗಲು ಇಷ್ಟೋ ಗಿಡಮರಗಳಿವೆ. ನನ್ನ ತೋಟವೇ ಇದೆ. ಈ ನದಿಯ ನೀರು ನನ್ನನ್ನು ಆಲಿಂಗಿಸುವುದು. ನಾನು ಕೇಳಿದಾಗ ಪಕ್ಷಿಗಳು ನನಗೆ ಸಂಗೀತ ಹಾಡುವುವು. "ಪರ್ವತವೇ ನನ್ನ ಸಿಂಹಾಸನ" ಎಂದು ಹೇಳಿ, "ಅಭ್ಯಾಸ ಎಲ್ಲವನ್ನೂ ಒಗ್ಗಿಸುತ್ತದೆ" ಎಂದ. ಸ್ಮಿತ್ ಬರೀ ಭಾವ ಜೀವಿಯಲ್ಲ; ಕವಿ. ಮಾತನಾಡಲು ಯಾರೇಕೆ ಬೇಕು? ಕಾಗದ, ಲೇಖಣಿಯಿಲ್ಲ? ಸರಿ. ಧಾರಾಕಾರವಾಗಿ ಬಂದ ಭಾವನೆ ಗಳನ್ನು ಪದ್ಯ ರೂಪದಲ್ಲಿ ಬರೆದು ಒಂದು ದೊಡ್ಡ ಕರಡು ಪುಸ್ತಕವನ್ನೇ ನಿರ್ಮಿಸಿದ್ದಾನೆ. ನಾನು ಒಂದೆರಡು ಕವನಗಳನ್ನು ಓದಿ ಚಕಿತನಾದೆ. 'My Choice' 'My Lovely Hut' ಎಂಬ ಕವನಗಳಂತೂ ಹೃದಯ ಕರಗಿಸುವಂತಿದ್ದವು. 'ಅಂಕಲ್ ಕಮ್ಮಿ' ಎಂಬುದು ಆತನ ಕವಿ ನಾಮಧೇಯ. ಕೆಲವು ಪತ್ರಿಕೆಗಳಿಗೆ ತನ್ನ ಸರಕು ಕಳಿಸಿ, ಸ್ವಲ್ಪ ಹಣವನ್ನೂ ಗಳಿಸಿದ್ದಾನೆ. Uncle Cummy ಗೆಳೆತನ ಬೆಳಸಿ, ಆತನಿಂದ ಅನೇಕ ವಿಚಾರ ತಿಳಿದು ಕೊಂಡೆ. ಅಮೇರಿಕದಲ್ಲೂ ಇಂತಹ ತ್ಯಾಗ ಜೀವಿಗಳಿದ್ದಾರಲ್ಲ! ಎಂದು ಸಂತೋಷವಾಯಿತು. 'ನನ್ನ ಸಮಾಧಿ' ಇಲ್ಲಿಯೇ ಈ ಸೇಬು ಮರದ ಕೆಳ ಗಾಗಬೇಕು ಎನ್ನುತ್ತಾನೆ, Uncle Cummy.

ಎರಡು ಘಂಟೆಗೆ ದಣಿದು ಬಂದಿದ್ದ ನಾವೆಲ್ಲ ಊಟ ಮುಗಿಸಿದೆವು. ಅಡಿಗೆ ಮಾಡಿದ ಆಹಾರವೆಂದರೆ ಮಾಂಸದ ಸಾರೊಂದೇ. ಉಳಿದ ಆಹಾರ ಅಂಗಡಿಯಿಂದಲೇ ತೆಗೆದುಕೊಂಡು ಬಂದಿದ್ದರು. ನಮಗಾಗಿ (ಮೂವರು) ಬೇರೆ ಕಡೆ ಆಹಾರ ಇಟ್ಟಿದ್ದರು. ಬ್ರೆಡ್, ಹಣ್ಣುಗಳು, ಒಟಾಟೆಯ

ಉಪ್ಪೇರಿ, ಹಾಲು, ತರಕಾರಿ ಮುಂತಾದವುಗಳು. ಉಳಿದವರು ಮಾಂಸದ ಸಾರು ಮಾಂಸ, ತತ್ತಿ ಮುಂತಾದವುಗಳನ್ನು ಸೇವನೆ ಮಾಡಿದರು. ನಮ್ಮ ಹೊಟ್ಟೆ ತುಂಬಿತಾದರೂ, ನಮಗೆ ಊಟ ಮಾಡಿದ ತೃಪ್ತಿ ಬರಲಿಲ್ಲ. ಅಂಕಲ್ ಕಮ್ಮಿಗೆ ಸಲಾಮು ಹೊಡೆದು, ಮೂರು ಘಂಟೆಯ ವೇಳೆಗೆ ಬಸ್ಸು ಹತ್ತಿ ಓಜಾರ್ಕ್ಸ್ ಸರೋವರಕ್ಕೆ ಹೋದೆವು.

ಓಜಾರ್ಕ್ಸ್! ಮೈಸೂರಿನ ಕೃಷ್ಣರಾಜ ಸಾಗರ! ಎಲ್ಲಿ ನೋಡಿದರೂ ಥಳಥಳ ಹೊಳೆಯುವ ನಾನಾ ತರದ ವಿದ್ಯುಚ್ಛಕ್ತಿಯ ದೀಪಗಳು, ಮಕ್ಕಳಿಗೆ ಆಟವಾಡಲು ವಿಹಾರ ಕೇಂದ್ರಗಳು, ಆಹಾರ ಮಂದಿರಗಳು ವಿರಾಜಮಾನ ವಾಗಿದ್ದುವು! ಅಂದು ಭಾನುವಾರವಾದ್ದರಿಂದ ಸಾವಿರಾರು ಮಂದಿ ನಾನಾ ಕಡೆಗಳಿಂದ ಬಂದಿದ್ದರು. ಕಾರುಗಳ ಜಾತ್ರೆಯೇ ಸೇರಿದಂತಿತ್ತು–ನಮ್ಮಲ್ಲಿಯ ದನಗಳ ಪರಿಶೆಯ ಹಾಗೆ.

ಓಜಾರ್ಕ್ಸ್‌ನ ಈಜಾಡುವ ಸರೋವರಕ್ಕೆ ಹೋದೆವು. ನಮ್ಮಲ್ಲಿ ಅನೇಕರು ಈಜಾಡಲು ಸರೋವರದಲ್ಲಿಳಿದರು. ನಮ್ಮ ಕೂಡ ಬಂದ ತರುಣಿಯರೂ ಕೂಡ ಈಜಾಡಲು ಕೆಳಗಿಳಿದರು. ಹೆಂಗಸರು, ಗಂಡಸರು, ಮಕ್ಕಳು ಎಂಬ ಭೇದ ಭಾವನೆಯಿಲ್ಲದೆ ಈಜಾಡುತ್ತಿದ್ದ ಆ ಸರೋವರದ ದೃಶ್ಯ ಇನ್ನೂ ಕಣ್ಣಿಗೆ ಕಟ್ಟಿದಂತಿದೆ. ಸ್ತ್ರೀಯರೂ ಬರೀ ಒಂದು ನಿಕ್ಕರನ್ನು ತಗಲಿಸಿಕೊಂಡು ಗಂಡಸಿನ ಕೂಡ ನೀರೊಳಗಿಳಿಯುವ ಸಂದರ್ಭ, ನಮ್ಮ ಭಾರತದಲ್ಲಿ ಸಾಧ್ಯವೇ? ಕಾಡು ಜನ ಎಂದಾರು! ಅಮೇರಿಕದಲ್ಲಿಯು ಸಾಧಾರಣ ಈ ತೆರನಾದ ನಡತೆಗೆ ನೀತಿಯುಂಟಂತೆ. ದೇವರೇ ಕಾಪಾಡ ಬೇಕು.

ಈಜುವ ಪ್ರದರ್ಶನವಾದ ನಂತರ ನಮಗಾಗಿ ಕಾದಿಟ್ಟ ಬಂಗಲೆಗೆ ಹೋಗಿ ಬೇರೆಯ ಉಡುಪು ಧರಿಸಿಕೊಂಡು, ಉಳಿದಿದ್ದ ತಿಂಡಿಯನ್ನು ತೀರಿಸಿ ಕೊಲಂಬಿಯಾ ಮಾರ್ಗವಾಗಿ ಹೊರಟೆವು. ಕಾಲೇಜಿನ ಹುಡುಗಿಯರು ನಮ್ಮ ಜೊತೆಗೆ ಇದ್ದುದರಿಂದ ಅವರನ್ನು ರಾತ್ರಿ ೧೧ ಘಂಟೆಯ ಒಳಗೆ

ಕೊಲಂಬಿಯಾದಲ್ಲಿ ಬಿಡಬೇಕಾಗಿತ್ತು. ಅದು ವಿಶ್ವವಿದ್ಯಾನಿಲಯದ ನಿಯಮ. ೮|| ಘಂಟೆಗೆ ಹೊರಟ ನಮ್ಮ ಬಸ್ಸು ೧೧ ಘಂಟೆಗೆ ನಮ್ಮ ಊರು ತಲುಪಿತು.

ನಮ್ಮ ಕಡೆಯ ಇಂತಹ ಪ್ರವಾಸಗಳನ್ನು ಇಲ್ಲಿಯ ಪ್ರವಾಸಗಳಿಗೆ ಹೋಲಿಸಿದಾಗ ನನಗೆ ಕಂಡುಬಂದದ್ದು ಒಂದು: ಇವರಿಗೆ ದುಡ್ಡಿದೆ, ತಿಂದು ತೇಗುತ್ತಾರೆ. ನಮಗೆ ದುಡ್ಡಿಲ್ಲದಿದ್ದರೂ ನಮ್ಮ ಪ್ರವಾಸಗಳಲ್ಲಿ ಆತ್ಮತೃಪ್ತಿ, ಮನಶ್ಶಾಂತಿ ಆಗುತ್ತದೆ. ಇವರ ಸಂತೋಷ ಕ್ಷಣಿಕ; ನಮ್ಮದು ಸ್ಥಿರ.

---

## ಅಮೇರಿಕದಲ್ಲಿ ಪತ್ರಿಕೋದ್ಯಮ

"ಮಾನವನಿಗೆ ಸ್ವಾತಂತ್ರ್ಯವು ಹೇಗೆ ಜನ್ಮಸಿದ್ಧವಾದ ಹಕ್ಕೋ ಹಾಗೆ, ಪತ್ರಿಕಾಸ್ವಾತಂತ್ರ್ಯವೂ ಮಾನವನಿಗೆ ಸ್ವೈಸರ್ಗಿಕವಾಗಿ ಬಂದ ಬಳುವಳಿ."

ಅಮೇರಿಕಾ ದೇಶದ ಪತ್ರಿಕೋದ್ಯಮವು ಈ ಒಂದು ಶ್ರೇಷ್ಠ ತತ್ವವನ್ನನುಸರಿಸಿ ಬೆಳೆದು ಬಂದಿದೆ. ಪ್ರಪಂಚದ ಪತ್ರಿಕೋದ್ಯಮದ ಚರಿತ್ರೆಯಲ್ಲಿ ಇಂದು ಒಂದು ಗಂಭೀರವಾದ ಉನ್ನತಸ್ಥಾನವನ್ನು ಪಡೆದಿರುವ ದೇಶವೆಂದರೆ ಅಮೇರಿಕಾ ದೇಶ. ಎರಡನೆಯ ಮಹಾಯುದ್ಧದ ಪೂರ್ವದಲ್ಲಿ ಮತ್ತು ಅನಂತರ, ಯಾವ ಒಂದು ಹೆಚ್ಚಳ ಇಂಗ್ಲೆಂಡ್ ದೇಶಕ್ಕೆ ಇತ್ತೋ, ಅದು ಈಗ ಅಮೇರಿಕೆಯ ಕಡೆಗೆ ತಿರುಗಿದೆ. ನಾಗರಿಕತೆಯ ತುಟ್ಟತುದಿಯನ್ನು ಮುಟ್ಟಿ, ಪ್ರಜಾಸತ್ತಾತ್ಮಕ ರಾಜ್ಯದ ಊರುಗೋಲಾಗಿರುವ ಅಮೇರಿಕೆಯ ಪತ್ರಿಕಾವ್ಯವಸಾಯ ಕೇವಲ ಎಳೆಯದಾದರೂ, ಕಳೆದ ನೂರುವರ್ಷಗಳಲ್ಲಿ ಆದಂಥ ಅದರ ಬೆಳೆವಣಿಗೆ, ಈಗ ಪ್ರಪಂಚದ ಎಲ್ಲಾ ಭಾಗಗಳಲ್ಲಿಯೂ ತನ್ನ ಪ್ರಭಾವ ಬೀರುವಷ್ಟು ಮಟ್ಟಿಗೆ ಬೆಳೆದುಕೊಂಡು ಬಂದಿದೆ.

ಭಾರತದ ಪತ್ರಿಕೋದ್ಯಮದ ಬೆಳವಣಿಗೆಗೆ ಹೇಗೆ ಇಂಗ್ಲಿಷ್ ಪತ್ರಿಕೋದ್ಯಮವು ಮೂಲವೊ, ಹಾಗೆ ಅಮೇರಿಕೆಯ ಪತ್ರಿಕೋದ್ಯಮವೂ ಇಂಗ್ಲಿಷ್ ಪತ್ರಿಕೋದ್ಯಮದಿಂದ ಬೆಳೆದದ್ದು. ಇಂಗ್ಲೆಂಡಿನ ರಾಜನ ವಿರುದ್ಧವಾಗಿ, ಮತ್ತು ಮತವಿರುದ್ಧವಾಗಿ ಕ್ರಾಂತಿ ಎದ್ದು, ಅಲ್ಲಿ ನೆಲಸಲು ಸಾಧ್ಯವಾಗದೆ, ಇಂಗ್ಲಿಷ್ ಜನ ಅಮೇರಿಕೆಗೆ—ಮುನ್ನೂರು ವರ್ಷಗಳ ಹಿಂದೆ—ವಲಸೆ ಬಂದರಷ್ಟೆ! ಆ ಜನವೇ ಎರಡು ಮೂರು ತಿಂಗಳಿಗೊಮ್ಮೆ ಹಡಗಿನಲ್ಲಿ ಬರುವ ಲಂಡನ್ ಪತ್ರಿಕೆಗಳಲ್ಲಿ ಬಂದ, ಮತ್ತು ಪ್ರಯಾಣಿಕರು ಹೇಳಿಕೇಳಿದ ಸುದ್ದಿಯ ತುಣುಕುಗಳನ್ನು, ಒಂದೇಹಾಳೆಯ ಪತ್ರಿಕೆಯಲ್ಲಿ ಪ್ರಕಟಿಸುತ್ತಿದ್ದರು. ಅಂತಹ ಮೊದಲನೆಯ ಪತ್ರಿಕೆಯೇ ೧೬೬೫ ರಲ್ಲಿ ಹುಟ್ಟಿದ '**ಆಕ್ಸ್‌ಫರ್ಡ್ ಗ್ಯಾಝೆಟ್**' ಎಂಬುದು. ಈ ತುಣುಕುಪತ್ರಿಕೆಗಳಿಗೆ "ವೃತ್ತಪತ್ರಿಕೆ' ಎಂಬ ಅಭಿಧಾನ ಬಂದದ್ದು ೧೬೭೦ ರಲ್ಲಿಯೆ. '**ಬೆಂಜಮಿನ್ ಹ್ಯಾರಿಸ್** ಎಂಬ ಇಂಗ್ಲಿಷ್ ವೃತ್ತಪತ್ರಿಕೋದ್ಯಮಿ, Public occurences both Foreign and Domestic-ಎಂಬ ಹೆಸರಿನ ಪತ್ರಿಕೆಯನ್ನು ಬೋಸ್ಟನ್ ನಗರದಲ್ಲಿ ಹೊರಡಿಸಿದ. ಎರಡನೆಯ ದಿನಪತ್ರಿಕೆ ಪ್ರಾರಂಭವಾದದ್ದು ೧೭೦೪ ರಲ್ಲಿ. ಜಾನ್‌ಕ್ಯಾಂಬೆಲ್ ಎಂಬಾತ ಅಂಚೆಯ ಇಲಾಖೆಯಲ್ಲಿದ್ದರೂ, '**ಬೋಸ್ಟನ್ ನ್ಯೂಸ್ ಲೆಟರ್**' ಎಂಬ ಪತ್ರಿಕೆಯನ್ನು ಹೊರಡಿಸಿದನು. ಇದರನಂತರ ಸಾಗರತೀರದ ನಗರಗಳಾದ ನ್ಯೂಯಾರ್ಕ್, ಬಾಲ್ಟಿಮೋರ್ ಮತ್ತು ಹತ್ತಿರವಿದ್ದ ಫಿಲಡೆಲ್ಫಿಯಾ, ವಾಷಿಂಗ್‌ಟನ್‌ಗಳಲ್ಲಿ ಪತ್ರಿಕೆಗಳು ಪ್ರಾರಂಭವಾದುವು. ೧೭೩೩ ರಲ್ಲಿ ನ್ಯೂಯಾರ್ಕಿನಲ್ಲಿ ಸ್ಥಾಪಿತವಾದ '**ನ್ಯೂಯಾರ್ಕ್ ವೀಕ್ಲಿ ಜರ್ನಲ್**' ಎಂಬ ಪತ್ರಿಕೆಯ ಸಂಪಾದಕನಾದ **ಜಾನ್ ಪೀಟರ್ ಝೆಂಗರ್**‌ನು ಆ ಸಂಸ್ಥಾನದ ಗವರ್ನರ್ **ಕ್ರಾಸ್ಬಿಯ** ದಬ್ಬಾಳಿಕೆಯ ಆಡಳಿತವನ್ನು ಟೀಕಿಸಿದ್ದಕ್ಕಾಗಿ, ಸರ್ಕಾರದಿಂದ ಸೆರೆಹಿಡಿಯಲ್ಪಟ್ಟ. ಅಮೇರಿಕೆಯಲ್ಲಿ ಪತ್ರಿಕಾಸ್ವಾತಂತ್ರ್ಯಕ್ಕೆ ಧಕ್ಕೆ ತಗುಲಿದ್ದು ಇದೇ ಮೊದಲನೆಯ ಸಲ. ಸತ್ಯ ನುಡಿದದ್ದೇ ಆತನ ಅಪರಾಧವಾಗಿತ್ತು. ನ್ಯಾಯಾಸ್ಥಾನದಲ್ಲಿ ವಿಚಾರಣೆಯಾಗಿ, ಆತ ನಿರ್ದೋಷಿ ಎಂದು ಬಿಡುಗಡೆಯಾದ.

## ಅಮೇರಿಕದಲ್ಲಿ ಪತ್ರಿಕೋದ್ಯಮ

**ಅಮೇರಿಕೆಯ ಪತ್ರಿಕಾ ಪ್ರಪಂಚದಲ್ಲಿ ಸ್ವಾತಂತ್ರ್ಯ ಸಂಪಾದನೆ ಮಾಡಿದ ಮೊದಲನೆಯ ಘಟ್ಟವದು**

ಮೊದ-ಮೊದಲು ಪತ್ರಿಕೆಗಳಿಗಿಂತ, ಪತ್ರಿಕಾಸಂಪಾದಕರುಗಳು ವೃತ್ತಪತ್ರಿಕಾ ವ್ಯವಸಾಯದ ಘನತೆ-ಗೌರವಗಳನ್ನು ಏರಿಸಿದರು. ೧೮೩೫ ರಲ್ಲಿ **ಜೇಮ್ಸ್ ಗಾರ್ಡನ್ ಬೆನೆಟ್** ಎಂಬಾತ ಒಂದು ಪೆನ್ನಿಯ ಪತ್ರಿಕೆಯನ್ನು ಪ್ರಾರಂಭಿಸಿದನು. ಆತ ಹೊರಡಿಸಿದ ಪತ್ರಿಕೆಯ ಹೆಸರು '**ನ್ಯೂಯಾರ್ಕ್ ಹೆರಾಲ್ಡ್**' ಎಂದಿತ್ತು. ಈ ಪತ್ರಿಕೆ ಬಿಸಿಬಿಸಿ ಸುದ್ದಿಗಳನ್ನು;ಕೊಡುವುದರಲ್ಲಿ ಮತ್ತು ಬಿರುಸಾದ ಮತ್ತು ಕ್ರಾಂತಿಕಾರಕ ರಾಜಕೀಯ ಸುದ್ದಿಗಳನ್ನು ಕೊಡುವುದರಲ್ಲಿ ದಾರಿಹಾಕಿ ಕೊಟ್ಟಿತು.

೧೮೧೧ರಲ್ಲಿ ಅಮೇರಿಕೆಯ ಪತ್ರಿಕಾಪ್ರಪಂಚದ ವೃದ್ಧಪಿತಾಮಹನೆಂದು ಹೆಸರಾದ '**ಹೊರೇಸ್ ಗ್ರೀಲಿ**' ಎಂಬಾತ '**ನ್ಯೂಯಾರ್ಕ್ ಟ್ರಿಬ್ಯೂನ್**' ಎಂಬ ಪತ್ರಿಕೆಯನ್ನು ಪ್ರಾರಂಭಮಾಡಿ, ೬೦ ವರ್ಷಗಳವರೆಗೆ ನಡೆಯಿಸಿ, ತನ್ನ ಸತ್ಯವಾದ ಮತ್ತು ಕಟುವಾದ ಸಂಪಾದಕೀಯಗಳ ಮೂಲಕ ಜನರ ಅಭಿಪ್ರಾಯಗಳನ್ನು ಧೈರ್ಯದಿಂದ ಹೊರಗೆಡಹುತ್ತಿದ್ದ. ಈತ ಯಾರ ಹಂಗಿಗೂ ಬೀಳದೆ, ನಿಷ್ಪಕ್ಷಪಾತವಾಗಿ ತನಗೆ ಸರಿಕಂಡದ್ದನ್ನು ಬರೆಯುತ್ತಿದ್ದ. ಆ ಕಾರಣವೇ ಅಮೇರಿಕೆಯಲ್ಲಿ ಇಂದು ಪತ್ರಿಕೋದ್ಯಮದ ಚರಿತ್ರೆಯಲ್ಲಿ ಈತನ ಹೆಸರು ಚಿರಸ್ಥಾಯಿಯಾಗಿ ಉಳಿದಿದೆ. "ಅಮೇರಿಕದ ಪತ್ರಿಕೋದ್ಯಮದ ಜನಕ" ಎಂದು ಈತನನ್ನು ಕರೆಯುತ್ತಾರೆ.

ಇದೇ ಕಾಲದಲ್ಲಿ ಪತ್ರಿಕೆಗಳ ಗೌರವವನ್ನು ಬೆಳೆಯಿಸಿದ ಗುಂಪಿಗೆ **ನ್ಯೂಯಾರ್ಕ್ ಟೈಮ್ಸ್** ಸ್ಥಾಪಿಸಿದ **ಹೆನ್ರಿ ಜೇ ರೇಮಂಡ್ಸ್, ಸ್ಯಾಮ್ಯುಯಲ್ ಬೌಲ್ಸ್, ಎಡ್ವಿನ್ ಲಾರೆನ್ಸ್ ಗಾಡ್ಕಿನ್, ಚಾರ್ಲ್ಸ್ ಎ. ಡಾ ವಿಲಿಯಂ ರಾಕ್ಹಿಲ್ ನೆಲ್ಸನ್**, ಮುಂತಾದವರು ತಮ್ಮ ಪ್ರಭಾವವನ್ನು ಪತ್ರಿಕೋದ್ಯಮದ ನಾನಾಭಾಗಗಳಲ್ಲಿ ಬೀರಿ, ಅಮೇರಿಕೆಯ ಪತ್ರಿಕಾವ್ಯವಸಾಯವನ್ನು ನಾನಾರೀತಿಗಳಲ್ಲಿ ಬೆಳೆಯಿಸಿದರು.

ಅನಂತರ ೨೦ ನೆಯ ಶತಮಾನದ ಪತ್ರಿಕಾಕರ್ತರಲ್ಲಿ ಬಹು ಮುಖ್ಯರಾದವರು. **ಜೋಸಫ್ ಪಲಿಟ್ಜರ್, ವಿಲಿಯಂ ರಾಂಡೋಲ್ಫ್ ಹರ್ಸ್ಟ್, ಸ್ಕ್ರಿಪ್ಸ್ ಸಹೋದರರು** ಮತ್ತು **ಅಡಾಲ್ಫ್ ಎಸ್ ಓಕ್ಸ್.**

ಜೋಸಫ್ ಪಲಿಟ್‌ಜರ್ ಅಮೇರಿಕೆಯ ಪತ್ರಿಕಾಪ್ರಪಂಚದಲ್ಲಿ ಹೊಸಯುಗವೊಂದನ್ನು ಸ್ಥಾಪಿಸಿದನು. ಸುದ್ದಿ ಕೊಡುವುದರದಲ್ಲಿಯೂ, ಮತ್ತು ಸಂಪಾದಕೀಯಗಳಲ್ಲಿಯೂ ಮೊಟ್ಟ ಮೊದಲನೆಯದಾಗಿ (Crusading Element) ಸುಧಾರಣಾ ಪ್ರವೃತ್ತಿಯನ್ನು ಸೇರಿಸಿ ಬರೆಯಲಾರಂಭಿಸಿದನು, ಇದು ಜನಕ್ಕೆ ಹಿಡಿಸಿತು. ಸಾಮಾನ್ಯಜನರ ಕುಂದು ಕೊರತೆಗಳನ್ನು ನಿವಾರಿಸುವ ಕಾರ್ಯಹಿಡಿದು, ಅವು ನಿವಾರಣೆಯಾಗುವವರೆಗೂ ಪ್ರತಿದಿನವೂ, ಒಂದಲ್ಲ ಒಂದು ಬಗೆಯಾಗಿ ತನ್ನ ಪತ್ರಿಕೆಯಲ್ಲಿ ಅದೇ ವಿಷಯವಾಗಿ ಬರೆಯುತ್ತಿದ್ದ. ಈ ತೆರನಾದ (Progressive Journalism) ಸುಧಾರಣಾ ಪತ್ರಿಕೋದ್ಯಮವು ಅಂದಿನಿಂದ, ಆತನಿಂದ ಪ್ರಾರಂಭವಾಯಿತು.

ಪತ್ರಿಕೆಗಳನ್ನು ಕೊಳ್ಳುವವರ ಸಂಖ್ಯೆ ಬೆಳೆಯಲೆಂದು, ಓದುಗರಿಗೆ ರುಚಿಸುವಂತೆ ಉದ್ರೇಕಗೊಳಿಸುವಂತಹ ಸುದ್ದಿಗಳನ್ನು ಕೊಡುವುದಲ್ಲದೆ, ರಾಜಕೀಯ ವ್ಯಂಗ್ಯಚಿತ್ರಗಳನ್ನು ಪ್ರಕಟಿಸುವುದೂ, ಪ್ರಥಮತಃ ಸುದ್ದಿಗಳನ್ನು, ಕಥೆಗಳನ್ನು, ಲೇಖನಗಳನ್ನು, ಚಿತ್ರಗಳ ಮೂಲಕ ಕೊಡುವುದೂ, ಮತ್ತು ಬಣ್ಣದ ಚಿತ್ರಗಳನ್ನು ಪ್ರಕಟಿಸುವುದೂ ಮುಂತಾದ ನಾನಾಅಭಿರುಚಿಯುಳ್ಳ ಸುದ್ದಿಗಳನ್ನು ಕೊಡುವುದಕ್ಕೆ ಪ್ರಾರಂಭಿಸಿದನು. ಇದರ ಫಲವಾಗಿ ಈತನ ಪತ್ರಿಕೆಯಾದ **'ನ್ಯೂಯಾರ್ಕ್ ವರ್ಲ್ಡ್'** ಪತ್ರಿಕೆಯ ಪ್ರಸಾರ ೨|| ಲಕ್ಷಕ್ಕೆ ಏರಿತ್ತು. ಈ ಪತ್ರಿಕೆ ನ್ಯೂಯಾರ್ಕ್‌ನಲ್ಲಿತ್ತು. ತನ್ನ ಊರಾದ ಸೆಂಟ್ ಲೂಯಿಸ್‌ನಲ್ಲಿ—ಎಂದರೆ ಈಗಿನ ಅಮೇರಿಕೆಯ ಅಧ್ಯಕ್ಷರಿದ್ದಾರಲ್ಲಾ ಟ್ರೂಮನ್—ಅವರ ಹುಟ್ಟು ಸಂಸ್ಥಾನ ಮಿಸ್ಸೋರಿ—ಆ ಸಂಸ್ಥಾನದ ಕೈಗಾರಿಕೆಯ ನಗರ. ಅಲ್ಲಿ **ಸೆಂಟ್ ಲೂಯಿಸ್ ಡಿಸ್ಪ್ಯಾಚ್** ಎಂಬ ಪತ್ರಿಕೆಯನ್ನು ಸ್ಥಾಪಿಸಿದನು. ಈ ಪತ್ರಿಕೆಯನ್ನು ಈಗಲೂ ಆತನ ಮಗ

ಜೂನಿಯರ್ ಪಲಿಟ್‌ಜರ್ ನಡೆಯಿಸಿಕೊಂಡು ಬರುತ್ತಿದ್ದಾನೆ. ಇದರ ಪ್ರಸಾರ ಸಂಖ್ಯೆ ಈಗ ೩೦ ಲಕ್ಷವಿದೆ. **ಜೊಸಫ್ ಪಲಿಟ್ಜರ್,** "ಪತ್ರಿಕೋದ್ಯಮವು ಹುಟ್ಟುತ್ತಲೇ ಬಂದದ್ದು" ಎಂಬ ಮತಕ್ಕೆ ಸೇರಿದವನಲ್ಲ. ಕಾರಣ ತಾನು ಮಾಡಿದ ಹಣದಲ್ಲಿ ಬಹುಭಾಗವನ್ನು, ನ್ಯೂಯಾರ್ಕಿನಲ್ಲಿ ಒಳ್ಳೆಯ ವೃತ್ತಪತ್ರಿಕೋದ್ಯಮದ ಕಾಲೇಜೊಂದನ್ನು, ಸ್ಥಾಪಿಸಲು ಮುಡುಪಾಗಿಟ್ಟು ತೀರಿಕೊಂಡ. ಅದರ ಫಲವಾಗಿ ಇಂದು ಕೊಲಂಬಿಯಾ ವಿಶ್ವವಿದ್ಯಾನಿಲಯದಲ್ಲಿ, ಸುಪ್ರಸಿದ್ಧವಾದ ವೃತ್ತಪತ್ರಿಕೋದ್ಯಮ ಕಾಲೇಜು ಸ್ಥಾಪಿತವಾಗಿದೆ. ಇದಕ್ಕೆ ಪಲಿಟ್ಜರನ ಹೆಸರನ್ನೇ ಇಟ್ಟಿದ್ದಾರೆ.

'ನ್ಯೂಯಾರ್ಕ್ ಟೈಮ್ಸ್' ಎಂಬ ಪತ್ರಿಕೆಯನ್ನು ಹೆನ್ರಿ ಜೆ. ರೇಮಂಡ್‌ನು ಸ್ಥಾಪಿಸಿದನೆಂದು ಹಿಂದೆಯೇ ಹೇಳಿದೆನಷ್ಟೆ! ಅದರ ಸ್ಥಿತಿ ಸ್ವಲ್ಪ ದಿನಗಳ ಮೇಲೆ ಕೆಡುತ್ತಾ ಬಂದಿತು. ೧೮೯೬ ನೆಯ ಇಸ್ವಿಯಲ್ಲಿ ಅಡಾಲ್ಫ್ ಎಸ್, ಓಕ್ಸ್ ಎಂಬಾತನು ಅದನ್ನು ಕೊಂಡು ಕೊಂಡು, ಅಭಿವೃದ್ಧಿಗೆ ತಂದನು. ಇಂದು ಆ ಪತ್ರಿಕೆ ಪ್ರಪಂಚದ ಅತ್ಯುತ್ತಮವಾದ ಮತ್ತು ಹಿರಿಯದಾದ ಪತ್ರಿಕೆಯೆಂದು ಹೆಸರು ವಾಸಿಯಾಗಿದೆ. ೨೦ ನೆಯ ಶತಮಾನದಲ್ಲಿ ಕೈಯೆತ್ತಿ ತೋರಿಸುವ ಪತ್ರಿಕೆ—ಎಂದರೆ, **ನ್ಯೂಯಾರ್ಕ್ ಟೈಮ್ಸ್** ಎಂದು ಧಾರಾಳವಾಗಿ ಹೇಳಬಹುದು. "ಸುದ್ದಿಗಾಗಿ ಅಲ್ಲದೆ ಮಜಾಕ್ಕೆ ಅಲ್ಲ" (Not Entertainment but news) "ಅಚ್ಚು ಹಾಕಲು ಯೋಗ್ಯವಾದ ಸುದ್ದಿಗಳಿಗೆಲ್ಲ ಈ ಪತ್ರಿಕೆ" All the news that is fit to print) ಎಂಬ ತತ್ವಗಳನ್ನಿಟ್ಟುಕೊಂಡು, ಯಾವ ಪಕ್ಷ-ಪಂಗಡಗಳಿಗೂ ಹೊಂದಿಕೊಂಡಿರದೆ ನಡೆಯುತ್ತಿದೆ ಈ ಪತ್ರಿಕೆ. ಪ್ರಪಂಚದ ಎರಡು ಮಹಾಯುದ್ಧಗಳ ಎಲ್ಲಾ ವಿಷಯಗಳನ್ನೂ ಜಾಚೂ ತಪ್ಪದೆ ಪ್ರಕಟಿಸಿದ್ದು ಇದೇ ಪತ್ರಿಕೆ.

ನ್ಯೂಯಾರ್ಕ್ ಟೈಮ್ಸ್ ಪತ್ರಿಕೆ, ನ್ಯೂಯಾರ್ಕ್ ನಗರದ ಬಹು ಸುಪ್ರಸಿದ್ಧವಾದ ೪೨ ನೆಯ ಬೀದಿಯಲ್ಲಿ ೨೪ ಘಂಟೆಗಳೂ ಜನಸಂಚಾರವಿದ್ದು

ಸಿನಿಮಾಗಳೂ, ಅಂಗಡಿಗಳೂ, ಉಪಹಾರ ಮಂದಿರಗಳೂ, ನರ್ತನಮಂದಿರ ಗಳೂ ತೆರೆದಿರುತ್ತವೆ. ಅದಕ್ಕೆ ನಾನು ಪಾತಾಳಲೋಕದ "ಮಾಯಾ ಬಜಾರ" ಎಂದು ಹೆಸರಿಟ್ಟಿದೇನೆ. ಅ ಚೌಕಕ್ಕೆ 'ಟೈಮ್ಸ್ ಚೌಕ' ಎಂದೇ ಹೆಸರು.

'ನ್ಯೂಯಾರ್ಕ್ ಟೈಮ್ಸ್' ಪತ್ರಿಕೆ ಪ್ರತಿದಿನ ಬೆಳಗ್ಗೆ ಹೊರಡುವುದು. ಎಂದರೆ ರಾತ್ರಿ ೧ ಘಂಟೆಗೇನೆ ಅಂಗಡಿಗಳಲ್ಲಿ ಮಾರಲು ಬಂದಿರುವುದು. ಸುಮಾರು, ದಿನಕ್ಕೆ ೬೪ ಪುಟಗಳಿಂದ ಹಿಡಿದು ೯೬ ಪುಟಗಳವರೆಗೆ—ದಿನ ಪತ್ರಿಕೆಯ ಪುಟಗಳ ಸಂಖ್ಯೆಯಿರುವುದು. ಆದಿತ್ಯವಾರ ೧೫೦ ಪುಟದಿಂದ ೨೦೦ ಪುಟಗಳಷ್ಟಿರುವುದು. ಆಕಾರ ಮದರಾಸಿನ ಹಿಂದೂ ಪತ್ರಿಕೆ ಯಷ್ಟಿರುವುದು. ಸುಮಾರು ಎಂಟು ಪುಟ ನಾನಾ ರಾಷ್ಟ್ರಗಳ ಸುದ್ದಿಯಿರು ವುದು. ನ್ಯೂಯಾರ್ಕಿನ ಸುದ್ದಿಗೇನೇ ಎಂಟು ಪುಟ ಮೀಸಲು. ಅಮೇರಿಕೆಯ ಸುದ್ದಿ ಇನ್ನೆರಡು ಪುಟ. ಸಂಪಾದಕೀಯ ಪುಟಗಳು, ಆರ್ಥಿಕ ಸುದ್ದಿ, ಆಟ ಗಳ ಸುದ್ದಿ, ವ್ಯಾಪಾರೋದ್ಯಮ ಇವಕ್ಕಾಗಿ ಎಂಟೆಂಟು ಪುಟಗಳು ಕಾದಿಡಲ್ಪ ಟ್ಟಿರುತ್ತವೆ. ಜಾಹೀರಾತಿಗಾಗಿ ೧೨-೧೬ ಪುಟಗಳಿರುತ್ತವೆ. ಅಮೇರಿಕೆಯ ಪತ್ರಿಕೆಗಳು ಆರ್ಥಿಕ ದೃಷ್ಟಿಯಿಂದ ಮುಂದೆ ಬಂದಿರುವ ಕಾರಣ, ಜಾಹೀ ರಾತಿಗಿರುವ ಹೆಚ್ಚಳತೆಯೇ ಎಂದು ಧಾರಾಳವಾಗಿ ಹೇಳಬಹುದು. ನೂಯಾರ್ಕ್ ಟೈಮ್ಸ್ ನ ಪ್ರಸಾರವು ಸುಮಾರು ೪೦ ಲಕ್ಷ. ನ್ಯೂಯಾರ್ಕ್ ನಗರದಲ್ಲಿ ಆದರ ಬೆಲೆ ಮೂರು ಸೆಂಟ್ಸ್: ಎಂದರೆ ನಮ್ಮಲ್ಲಿಯ ಒಂದೂವರೆ ಆಣೆ. ಹೊರಭಾಗಕ್ಕೆ ೫ ಸೆಂಟ್ಸ್(೨|| ಆಣೆ.) ವಾರಪತ್ರಿಕೆಗೆ ೧೫|| ಸೆಂಟ್ಸ್. (೩||ಆಣೆ ಬೆಲೆ). ಅಮೇರಿಕೆಯ ಜನರ ಅಭಿಪ್ರಾಯಗಳನ್ನು ತಿದ್ದುವುದರಲ್ಲಿ ಈ ಪತ್ರಿಕೆ ಸಹಕಾರಿಯಾದಷ್ಟು ಇನ್ನಾವ ಪತ್ರಿಕೆಗಳೂ ಆಗಲಾರವು. ಅಂತೆಯೇ ನ್ಯೂಯಾರ್ಕ್ ಮತ್ತು 'ಇತರ ನಗರಗಳಲ್ಲಿ, ಬೆಳಗ್ಗೆ ಉಪಹಾರದ ಹೊತ್ತಿಗೆ ನ್ಯೂಯಾರ್ಕ್ ಟೈಮ್ಸ್ ಬಂದಿರುತ್ತದೆ. ೩೫೦೦ ಮೈಲಿ ದೂರವಿ ರುವ ಅಮೇರಿಕೆಯ ಎಲ್ಲಾ ಭಾಗಗಳಿಗೂ, ತಾವೇ ಸ್ವಂತವಾಗಿಟ್ಟಿರುವ ವಿಮಾನಗಳಲ್ಲಿ ಪತ್ರಿಕೆಗಳನ್ನು ಹಂಚುತ್ತಾರೆ. ಪ್ಯಾರಿಸ್ಸಿನಲ್ಲಿ ನಡೆಯುತ್ತಿದ್ದ

ವಿಶ್ವಸಂಸ್ಥೆ ಸಭೆಯ ಸದಸ್ಯರ ಉಪಯೋಗಕ್ಕಾಗಿ ವಿಶೇಷ ಸಂಚಿಕೆಯನ್ನು ಹೊರಡಿಸಿ, ಪ್ರತಿದಿನವೂ ಪತ್ರಿಕೆಯನ್ನು ವಿಮಾನದ ಮೂಲಕವಾಗಿ ಪ್ಯಾರಿಸ್ಸಿಗೆ ತರಲಾಗುತ್ತಿತ್ತು.

'ನ್ಯೂಯಾರ್ಕ್ ಟೈಮ್ಸ್' ಒಂದಲ್ಲದೆ, ಅಮೇರಿಕೆಯ ಇತರ ಮುಖ್ಯವಾದ ಪತ್ರಿಕೆಗಳಾವುವೆಂದರೆ, ನ್ಯೂಯಾರ್ಕ್ ಹೆರಾಲ್ಡ್ ಟ್ರಿಬ್ಯೂನ್, ವಾಷಿಂಗ್ಟನ್ ಪೋಸ್ಟ್, ಫಿಲಡೆಲ್ಫಿಯ ಎನ್‌ಕೊಯ್‌ರರ್, ಚಿಕಾಗೋ ಡೈಲಿ ಟ್ರಿಬ್ಯೂನ್, ಅಟ್ಲಾಂಟಾ ಜರ್ನಲ್, ಪೋರ್ಟ್‌ಲೆಂಡ್ ಅರೆಗಾನ್, ಸ್ಯಾನ್ ಫ್ರಾನ್‌ಸಿಸ್ಕೋ ಕ್ರಾನಿಕಲ್, ಲಾಸ್ ಏಂಜಲಿಸ್ ಜರ್ನಲ್, ಡೆಮಾನಿಸ್ ನ್ಯೂಸ್, ಸೆಂಟ್‌ಲೂಯಿಸ್ ಪೋಸ್ಟ್ ಡಿಸ್ಪ್ಯಾಚ್, ಮುತ್ತು ಇನ್ನೂ ಅನೇಕವಿವೆ.

ಅಮೇರಿಕಾ ದೇಶವನ್ನು ಆ ಜನ ಭಂಗಾರದ ದೇಶವೆಂದು ಕರೆದುಕೊಳ್ಳುತಾರೆ. ನಿಜ, ಅದು ಬಂಡವಾಳಗಾರರ ತವರುಮನೆ. "It is a land of free and plenty" ಎಂದು ಹೆಸರಾಗಿದೆ ಬಹಳಮಟ್ಟಿಗೆ ಅದು ನಿಜ. ಅಲ್ಲಿಯ ಕೈಗಾರಿಕೆಗಳೂ ಉದ್ಯಮಗಳೂ ಬಹಳವಾಗಿ ಬಂಡವಾಳಸ್ಥರ ಕೈಯಲ್ಲಿದೆ. ಹಾಗೆಂದು ಅವರಿಗೆ ತಿನ್ನಲಿಕ್ಕೆ, ಉಣ್ಣಲಿಕ್ಕೆ ಬೇಕಾದಷ್ಟಿದೆ. ಅವರು ಹೆಚ್ಚಾಗಿ ಬೇಕೆಂದು ಬೆಳೆಯುತ್ತಾರೆ. ಇಂತಹ ಪತ್ರಿಕೆಗಳ ಮೂಲಕವೇ ದೇಶದ ಜನಗಳ ಅಭಿಪ್ರಾಯವನ್ನು ಕ್ರೋಢೀಕರಿಸುವುದು. ಹೆಚ್ಚಾಗಿ ಬಂಡವಾಳಗಾರರಿರುವುದು ಅಮೇರಿಕದ ಪ್ರಮುಖ ರಾಜಕೀಯ ಪಕ್ಷಗಳಲ್ಲೊಂದಾದ 'ರಿಪಬ್ಲಿಕನ್' ಪಕ್ಷದಲ್ಲಿ. ಈ ಪಕ್ಷದವರೇ ಸೇಕಡ ೯೦ ರಷ್ಟು ಪತ್ರಿಕೆಗಳ ಒಡೆಯರಾಗಿದ್ದಾರೆ.

ಅಮೇರಿಕದ ಮುಖ್ಯ ನಗರಗಳಲ್ಲಿರುವ ನಾನಾ ಪತ್ರಿಕೆಗಳನ್ನು, ಕೇವಲ ಎಂಟು ಹತ್ತು ಜನ ವಶಮಾಡಿಕೊಂಡಿದ್ದಾರೆ. ಒಬ್ಬನೇ ನಾನಾ ನಗರಗಳಲ್ಲಿ ಪತ್ರಿಕೆಗಳನ್ನು ನಡೆಯಿಸುತ್ತಾನೆ. ಈಪ್ರಮುಖರಲ್ಲಿ ಮುಖ್ಯರಾದವರು, ಜೊಸಫ್ ಫಲಿಟ್ಜರ್, ವಿಲಿಯಂ ರಾಂಡೋಲ್ಫ್ ಹರ್ಸ್ಟ್,

ಸ್ಕ್ರಿಪ್ಸ್ ಸಹೋದರರು, ಮುಂತಾದವರು. ನಮ್ಮ ದೇಶದಲ್ಲಿಯ ಬಿರ್ಲಾ, ಗೋಯೆಂಕಾ, ಡಾಲ್ಮಿಯಾಗಳಂತೆ. ಹಾಗೆಂದು ಸ್ವತಂತ್ರವಾಗಿ ಬೇರೆ ದಿನ ಪತ್ರಿಕೆಗಳನ್ನು ಹೊರಡಿಸದೆ ಇಲ್ಲ. ಆದರೆ ಅವುಗಳ ಪ್ರಭಾವ ಕಡಿಮೆ. ಈ ಪತ್ರಿಕೆಗಳೆಲ್ಲಾ ಬಂಡವಾಳಗಾರರ ಕೈಯಲ್ಲಿದ್ದರೂ, ದೇಶದ ಎಲ್ಲಾ ಅಭಿಪ್ರಾಯಗಳನ್ನೂ ಪ್ರಕಟಿಸುತ್ತಾರೆ, ಒಂದು ಸಮಸ್ಯೆಯ ಎರಡು ಮುಖಗಳನ್ನೂ ತೋರಿಸುತ್ತಾರೆ. ಆದರೆ ಸಂಪಾದಕೀಯಗಳಲ್ಲಿ ಮಾತ್ರ ತಮ್ಮ ಧೋರಣೆ, ಯನ್ನು ವ್ಯಕ್ತಪಡಿಸುತ್ತಾರೆ.

ಇಂದು ಅಮೇರಿಕದ ಸಂಯುಕ್ತ ಸಂಸ್ಥಾನಗಳಲ್ಲಿ ಸುಮಾರು ೨೦ ಸಾವಿರ, ದಿನ, ವಾರ, ಮತ್ತು ಮಾಸಪತ್ರಿಕೆಗಳಿವೆ. ಬರೀ ದಿನ ಪತ್ರಿಕೆಗಳೇ ೨೫೦೦ ಇವೆ. ಇದರ ಸರಾಸರಿ ಪ್ರಸಾರ ದಿನಕ್ಕೆ ೫೫ ಮಿಲಿಯನ್ ಪ್ರತಿಗಳು. ಸಾಧಾರಣವಾಗಿ ಪ್ರತಿಯೊಬ್ಬರೂ ದಿನ ಪತ್ರಿಕೆಯನ್ನು ಕೊಳ್ಳುತ್ತಾರೆ. ಒಂದೊಂದು ಸಲ ತಂದೆ, ಮಗ, ತಾಯಿ, ಸೊಸೆ, ಮಗಳು—ಬೇರೆ ಬೇರೆಯ ಪತ್ರಿಕೆಗಳನ್ನು ಒಂದೇ ಮನೆಗೆ ಕೊಂಡುಕೊಂಡು ಬಂದಿರುತ್ತಾರೆ.

ಅಮೇರಿಕೆಯ ಪ್ರತಿಯೊಂದು ನಗರ-ಪಟ್ಟಣಗಳಲ್ಲಿಯೂ, ಅಂಗಡಿಗಳಲ್ಲಿ ಪತ್ರಿಕೆಗಳನ್ನು ಮಾರುವುದು ಅಲ್ಲದೆ, ಮುಖ್ಯಮುಖ್ಯ ರಸ್ತೆಯ ಕೊನೆಯಲ್ಲಿ ೧೦೦-೧೫೦ ವೃತ್ತಪತ್ರಿಕೆಗಳನ್ನು ಇಟ್ಟಿರುತ್ತಾರೆ. ಅದರ ಪಕ್ಕದಲ್ಲಿ ಹಣ ಹಾಕಲು ಒಂದು ಬಾಯಿ ತೆರೆದ ಡಬ್ಬಿಯಿರುತ್ತದೆ. ಯಾರಿಗೆ ಪತ್ರಿಕೆ ಬೇಕಾದರೂ, ಅವರು ಪತ್ರಿಕೆ ಬಗಲಲ್ಲಿಟ್ಟುಕೊಂಡು, ಅದಕ್ಕಾಗುವ ಹಣವನ್ನು ಆ ಡಬ್ಬಿಯಲ್ಲಿ ಹಾಕಿ ಹೋಗಬೇಕು. ಆ ಹಣವನ್ನು ಕಾಯ್ದುಕೊಂಡಿರಲು ಅಲ್ಲಿ ಯಾರೂ ನಿಂತಿರುವುದಿಲ್ಲ. ಒಬ್ಬರೂ ಹೆಚ್ಚು ಪತ್ರಿಕೆಗಳನ್ನು ತೆಗೆದುಕೊಂಡು ಕಡಿಮೆ ಹಣ ಹಾಕುವುದಿಲ್ಲ. ಅಥವಾ ಕಾಣದೆ ಪತ್ರಿಕೆಗಳನ್ನಾಗಲಿ, ಹಣವನ್ನಾಗಲಿ ತೆಗೆದುಕೊಂಡು ಹೋಗುವುದಿಲ್ಲ. ಇದನ್ನು ಭಾರತೀಯರಾದ ನಾವು ಅನುಕರಣ ಮಾಡುವಂತಹ ಸಂಗತಿ.

ಅಮೇರಿಕದಲ್ಲಿ ದಿನಪತ್ರಿಕೆಗಳಂತೆಯೇ ವಾರ ಮತ್ತು ಮಾಸ ಪತ್ರಿಕೆಗಳು ಜನತೆಗೆ ಓದಲು ಒಳ್ಳೆಯ ಆಹಾರವನ್ನು ಒದಗಿಸುತ್ತವೆ. ಅವುಗಳಲ್ಲಿ

ಪ್ರಮುಖವಾದವು ಟೈಂ, ಲೈಫ್, ನ್ಯೂಯಾರ್ಕರ್, ಸ್ಯಾಟರಡೇ ಈವನಿಂಗ್ ಪೋಸ್ಟ್, ಕಾಲಿಯಸ್, ರೀಡರ್ಸ್ ಡೈಜಸ್ಟ್ ಮುಂತಾದುವು. ಪ್ರತಿಯೊಂದು ಅಮೇರಿಕೆಯ ಸಂಸಾರವು, ಕೊನೆಯ ಪಕ್ಷ ಒಂದೊಂದು ವಾರ ಪತ್ರಿಕೆಯನ್ನಾದರೂ ಓದುತ್ತದೆ. ಈಗ ಸುಮಾರು ೭,೦೦೦ ವಾರ ಪತ್ರಿಕೆಗಳೇ ಇವೆ. ಟೈಂ ಮತ್ತು ಲೈಫ್ ವಾರಪತ್ರಿಕೆಗಳು ಅಮೇರಿಕೆಯ ಎಲ್ಲ ಜನರ ಬಾಯಲ್ಲೂ ಇವೆ. ಇದರ ಪ್ರಸಾರ ೫ ಲಕ್ಷದಿಂದ ೧೦ ಲಕ್ಷ ದವರೆಗಿದೆ. ಈ ಪತ್ರಿಕೆಯಲ್ಲಿ ಯುದ್ಧರಂಗದ ವಿಷಯ, ನಾನಾ ರಾಷ್ಟ್ರಗಳ ಸುದ್ದಿ, ಚಿತ್ರ ಕಲೆ, ನಾಟಕ, ಸಂಗೀತ, ಔಷಧ, ರೇಡಿಯೊ, ಧರ್ಮ, ಪತ್ರಿಕೋದ್ಯಮ, ವಿದ್ಯಾಭ್ಯಾಸ, ಪ್ರಮುಖ ವ್ಯಕ್ತಿಗಳು, ಆರ್ಥಿಕ, ವ್ಯಾಪಾರ, ಹುಟ್ಟು, ವಿವಿಧ ವಿನೋದಗಳು, ಆಟಗಳು, ಚಲನಚಿತ್ರಗಳು ಮತ್ತು ಪುಸ್ತಕ ವಿಮರ್ಶೆ ಮುಂತಾದುವು ಇರುತ್ತವೆ. ಈ ವಿಷಯಗಳ ಮೇಲಲ್ಲದೆ ತಾಂತ್ರಿಕ ವಿಷಯಗಳಿಗೆ ಸಂಬಂಧಪಟ್ಟಂತೆ ನಾನಾಭಾಗಕ್ಕೆ ಬೇರೆ ಬೇರೆಯಾಗಿ, ಆಯಾ ವಿಷಯಗಳಿಗೆ ಮಾತ್ರವೇ ಒಂದೊಂದು ಮಾಸ ಪತ್ರಿಕೆಗಳಿರುತ್ತವೆ.

ಅಮೇರಿಕಾ ದೇಶದಲ್ಲಿ ಹೊಸದಾಗಿ, ರೇಡಿಯೊ ಮೂಲಕ ಪತ್ರಿಕೋದ್ಯಮದ ಉದ್ದೇಶ ಸಾಧಿಸುವ ಕಾರ್ಯಕ್ರಮ ಬೆಳೆದುಬಂದಿದೆ. ಒಂದು ಸಂಸಾರಕ್ಕೆ ಎರಡೆರಡು ರೇಡಿಯೊಗಳಂತೆ, ಸುಮಾರು ೬ ಕೋಟಿ ರೇಡಿಯೊಗಳಿವೆ. ಅಲ್ಲಿಯ ರೇಡಿಯೊ ಆಡಳಿತ ಸಾರ್ವಜನಿಕ ಹಾಗೂ ಸ್ವಂತ ಜನರ ಆಡಳಿತದಲ್ಲಿ ಇದೆ. ಕಾರಣ ಸುಮಾರು ೧,೦೦೦ ರೇಡಿಯೊ ಸ್ಟೇಷನ್ನುಗಳಿವೆ. ಅದರಲ್ಲಿ ಮುಖ್ಯವಾದುವು ನ್ಯಾಷನಲ್ ಬ್ರಾಡ್‌ಕ್ಯಾಸ್ಟಿಂಗ್ ಕಂಪೆನಿ ಮತ್ತು ಕೊಲಂಬಿಯ ಬ್ರಾಡ್‌ಕ್ಯಾಸ್ಟಿಂಗ್ ಕಂಪೆನಿ. ದೇಶದ ತುಂಬೆಲ್ಲಾ ಇದರ ಭಾಗಗಳಿವೆ.

ಘಂಟೆ ಘಂಟೆಗೆ ಸುದ್ದಿ ಬರುವುದಲ್ಲದೆ, ದಿನಕ್ಕೆ ಎರಡು ಮೂರು ಬಾರಿ ಸುಪ್ರಸಿದ್ಧ ರಾಜಕೀಯ ವಿಮರ್ಶಕರು, ಪ್ರಮುಖರು, ಪ್ರಚಲಿತ ರಾಜಕೀಯ ವಿಷಯಗಳ ಮೇಲೆ ಮಾತನಾಡುತ್ತಾರೆ. ರೇಡಿಯೊದ

ಮೂಲಕ ಮಾಡುವ ಜಾಹಿರಾತಿನದೇ ಒಂದು ವೈಶಿಷ್ಟ್ಯ. ರೇಡಿಯೊ ಪತ್ರಿಕೋದ್ಯಮ ಬೆಳೆದರೂ, ವೃತ್ತಪತ್ರಿಕೆಗಳ ಮೇಲೆ ಅದರ ಶಾಖ ಇನ್ನೂ ವರೆಗೂ ಬಡೆದಿಲ್ಲ. ಇದರೊಂದಿಗೆ ಚಲನಚಿತ್ರಗಳ ಮೂಲಕವೂ ಸುದ್ದಿ ಪ್ರಕಟಿಸುತ್ತಾರೆ. ಪ್ರಮುಖ ಚಿತ್ರಗಳನ್ನು ತೋರಿಸುತ್ತಾ, ಪ್ರತಿ ಚಿತ್ರ ಪ್ರಾರಂಭಕ್ಕೆ ಮುಂಚೆ, ಪ್ರಪಂಚದ ಸುದ್ದಿಯನ್ನು ಬೀರುತ್ತಾರೆ.

ವೈಜ್ಞಾನಿಕ ಬೆಳೆವಣಿಗೆಯ ಫಲವಾಗಿ ಟೆಲಿವಿಷನ್, ಟೆಲಿಪ್ರಿಂಟ್ ನ್ಯೂಸ್‌ಪೇಪರ್, ಜಾರಿಗೆ ಬರುತ್ತಿವೆ. ಟೆಲಿವಿಷನ್ ಮೂಲಕ, ಸುದ್ದಿ ಕೇಳುವುದೂ ಅಲ್ಲದೆ, ಅವರ ಭಾವಚಿತ್ರಗಳನ್ನೂ ಅವರು ಭಾಷಣ ಮಾಡುತ್ತಿರುವಾಗಲೇ ನೋಡಬಹುದು, ಕೇಳಬಹುದು.

ಟೆಲಿಪ್ರಿಂಟ್ ನ್ಯೂಸ್‌ಪೇಪರ್ ಎನ್ನುವುದು ಪತ್ರಿಕೋದ್ಯಮದಲ್ಲಿ ಒಂದು ಹೊಸದಾದ ವಿಧಾನ. ನ್ಯೂಯಾರ್ಕ್‌ನಲ್ಲಿ ಪತ್ರಿಕೆಯನ್ನು ಟೆಲಿವೈಸ್ ಮಾಡಿದರೆ, ಮೈಸೂರಿನಲ್ಲಿ ಯಂತ್ರ ಇಟ್ಟುಕೊಂಡವರಲ್ಲಿ, ಆ ಪತ್ರಿಕೆ ಪ್ರಿಂಟ್ ಆಗುತ್ತದೆ. ಇದಕ್ಕೆ ಎರಡು ಕಡೆಯೂ ಬೇರೆ ಬೇರೆಯ ಯಂತ್ರಗಳನ್ನಿಟ್ಟು ಕೊಂಡಿರಬೇಕು. ಈ ತೆರನಾದ ಹೊಸ ವ್ಯವಸ್ಥೆಯನ್ನು, ನ್ಯೂಯಾರ್ಕ್ ಟೈಮ್ಸ್ ಪತ್ರಿಕೆಯು ನ್ಯೂಯಾರ್ಕಿನಲ್ಲಿಯೇ ಜಾರಿಗೆ ತಂದಿದೆ. ಇನ್ನೂ ಅನೇಕ ಕಡೆ ಇದರ ಪ್ರಯೋಗ ನಡೆಯಿಸಿದ್ದಾರೆ.

ಇನ್ನೊಂದು ಹೊಸಬಗೆಯ ಪ್ರಿಂಟಿಂಗ್ ವಿಧಾನವನ್ನು ಎರಡನೆಯ ಮಹಾಯುದ್ಧದ ಕಾಲಕ್ಕೆ ಕಂಡುಹಿಡಿದಿದ್ದಾರೆ. ಇದರ ಶಾಸ್ತ್ರದ ಪ್ರಕಾರ, ಒಂದೇ ನಿಮಿಷದಲ್ಲಿ ಒಂದು ಪುಸ್ತಕದಷ್ಟು—ಸುಮಾರು ೫೦೦೦ ಶಬ್ದಗಳನ್ನು ಪ್ರಕಟಿಸಬಹುದು. ಇದಕ್ಕೆ "**ಅಲ್ಟ್ರಾಫ್ಯಾಸ್**" ಎಂದು ಹೆಸರು. ಇವೇ ಕೆಲವು ಮುಖ್ಯವಾದ ಪ್ರಯೋಗಗಳನ್ನು ಪತ್ರಿಕಾ ಪ್ರಪಂಚದಲ್ಲಿ ಮಾಡಿದ್ದಾರೆ ಈ ಅಮೇರಿಕದ ಜನ.

ಪತ್ರಿಕೋದ್ಯಮವು ಹುಟ್ಟುವಾಗಲೇ ಕಲಿತುಬಂದದ್ದು ಎಂದು ಅನೇಕರು ವಾದಿಸುತ್ತಾರಲ್ಲವೇ ? ಆದರೆ ಅಮೇರಿಕಾದೇಶ ಆ ವಾದಕ್ಕೆ ಉತ್ತರ

ಕೊಟ್ಟದೆ. ಅಮೇರಿಕಾ ದೇಶದಲ್ಲಿ ಉಳಿದೆಲ್ಲ ವಿಷಯಗಳಲ್ಲಿ ತರಬೇತು ಕೊಟ್ಟಂತೆ ಪತ್ರಿಕಾ ವ್ಯವಸಾಯದಲ್ಲಿಯೂ ಅಭ್ಯಾಸಕ್ರಮವನ್ನೇರ್ಪಡಿಸಿದ್ದಾರೆ. ಅಮೇರಿಕದಲ್ಲಿ ಸುಮಾರು ೬೦೦ ವಿಶ್ವವಿದ್ಯಾನಿಲಯಗಳಿವೆ. ಒಂದು ನೂರು ವಿಶ್ವವಿದ್ಯಾನಿಲಯಗಳಲ್ಲಿ, ಪತ್ರಿಕೋದ್ಯಮಕ್ಕಾಗಿ ವಿಶೇಷವಾದ ಕಾಲೇಜುಗಳಿವೆ. ಮುಖ್ಯವಾಗಿ ಪತ್ರಿಕೆಗಳೇ ದೇಶದ ಜೀವನಾಡಿಗಳು. ಪ್ರಜಾಸತ್ತಾತ್ಮಕ ರಾಜ್ಯಗಳಲ್ಲಿ ಜನಗಳ ಅಭಿಪ್ರಾಯವನ್ನು ನಿರ್ಭಯವಾಗಿ ತಿಳಿಸುವ ಆಯುಧವೆಂದರೆ ವೃತ್ತಪತ್ರಿಕೆಗಳು. ವೃತ್ತಪತ್ರಿಕೆಗಳು ರಾಜ್ಯವನ್ನು ಕಟ್ಟಬಲ್ಲವು; ಹಾಗೆಯೇ ಹಾಳು ಮಾಡಲೂ ಬಲ್ಲವು. ಆದರೆ ಪತ್ರಿಕಾವ್ಯವಸಾಯದ ಘನತೆಯನ್ನು ಮತ್ತು ಜವಾಬ್ದಾರಿಯನ್ನು ಅರಿತುಕೊಂಡ ಪತ್ರಿಕೆಗಳು, ಎಂದಿಗೂ ದಾರಿತಪ್ಪಿ ಹೋಗಲಾರವು.

ಪ್ರಜಾಧರ್ಮವನ್ನು ಎತ್ತಿಹಿಡಿದು ಸೇವೆ ಮಾಡುತ್ತಿರುವ ಪತ್ರಿಕಾ ಪ್ರಪಂಚ ಬೆಳೆದು ಬರಬೇಕು. ಅದು ನಾಡನ್ನು ಬೆಳಗಿಸಬೇಕು. ರಾಷ್ಟ್ರ ಕಟ್ಟಿ ದೇಶದ ಉನ್ನತಿಗೆ ಸಹಾಯವಾಗಲು ಬೇಕಾದ ಸಹಾಯ ಸಹಕಾರವನ್ನು ಪ್ರಜಾವರ್ಗಕ್ಕೆ ಕೊಡಬೇಕು. ಅಂದೇ ನಾಡು ಬೆಳೆಯುವುದು, ಬೆಳಕು ಮೂಡುವುದು.

---

## ಅಮೇರಿಕದ ಸ್ತ್ರೀ ಪತ್ರಿಕೋದ್ಯಮಿಗಳು

ಶ್ರೀಮತಿ ಮೇರಿ ಮೆಕ್ಲೂಂಗಳು ಅಮೇರಿಕದ ಪ್ರಥಮ ಸ್ತ್ರೀ ವ್ಯವಸ್ಥಾಪಕ ಸಂಪಾದಕಳಾಗಿ ನ್ಯೂಯಾರ್ಕಿನ ಅತಿ ಹಳೆಯ ವೃತ್ತಪತ್ರಿಕೆಯಾದ ನ್ಯೂಯಾರ್ಕ್ ಪೋಸ್ಟ್ ಪತ್ರಿಕೆಯ ಯಾಜಮಾನ್ಯ ವಹಿಸಿಕೊಂಡಳು. ಅಲ್ಲಿಯವರೆಗೆ ಈ ಅಧಿಕಾರದಲ್ಲಿ ಕೆಲಸ ಮಾಡಿದವರು ಬರೀ ಗಂಡಸರೇ, ಹೀಗೆ ಪತ್ರಿಕೋದ್ಯಮದಲ್ಲಿ ಇಂತಹ ಪದವಿಗಳನ್ನು ವಹಿಸಿಕೊಂಡವರಲ್ಲಿ,

ಇದೇ ಪತ್ರಿಕೆಯ ಸಂಪಾದಕಳಾದ ಶ್ರೀಮತಿ ಡೊರಾಥಿ ಥ್ಯಾಕರ್ಸ್, ನ್ಯೂಯಾರ್ಕ್ ಹೆರಾಲ್ಡ್ ಟ್ರಬ್ಯೂನ್ ಪತ್ರಿಕೆಯ ಪ್ರಕಟನಕಾರಳಾದ ಶ್ರೀಮತಿ ಓಗ್‌ಡನ್ ರೀಡ್, ರಾಜಧಾನಿ ವಾಷಿಂಗ್‌ಟನ್ ಟೈಮ್ಸ್ ಹೆರಾಲ್ಡ್ ಪತ್ರಿಕೆಯ ಯಜಮಾನಿತಿ ಶ್ರೀಮತಿ ಇಲಿನಾಯ್ ಮೆಡಿಲ್ ಪ್ಯಾಟರ್‌ಸನ್ ಇವರು ಮುಖ್ಯರು.

## ಶ್ರೀಮತಿ ಮೇರಿ ಮೆಕ್ಲೋಂಗ್

೪೭ ವಯಸ್ಸಿನ ಮೇರಿ ಮೆಕ್ಲೋಂಗಳು ನೋಡಲು ಬಲು ಸುಂದರಳು. ಸ್ತ್ರೀಗೆ ಇರಬೇಕಾದ ಸಹಜ ಸೌಂದರ್ಯ ಸ್ವಲ್ಪವೂ ಕಡಿಮೆಯಿಲ್ಲ. ಮಾತು ಬಲು ಮಿದುವು. ಹಳ್ಳಿಯ ಹುಡುಗಿ, ದುಡಿದು ಸಣ್ಣ ಸಣ್ಣ ಕೆಲಸದಿಂದ ಈ ಹಂತಕ್ಕೆ ಏರಿದವಳು. ವ್ಯವಸ್ಥಾಪನೆಯ ಕಷ್ಟದ ಕ್ಷಣಗಳಲ್ಲಿಯೂ ಶಾಂತಳಾಗಿ ಕೆಲಸ ನೆರವೇರಿಸುತ್ತಾಳೆ. ಈ ಶಾಂತತೆಯೇ ಈಕೆಯನ್ನು ಜೀವನದಲ್ಲಿ ಜಯಶಾಲಿಯನ್ನಾಗಿ ಮಾಡಿದೆ. ದಿನದ ಕೆಲಸ ಅಂದೇ ಮುಗಿಸಿ ಮರು ದಿನದ ಕಾರ್ಯಕ್ರಮ ಹಾಕಿ, ೯ ಘಂಟೆಗಳ ಸತತ ಶ್ರಮದ ಕೆಲಸದ ನಂತರ ವಿರಾಮ ಪಡೆಯುತ್ತಾಳೆ. ಉಳಿದ ಸ್ತ್ರೀ ಪತ್ರಿಕೋದ್ಯಮಿಗಳಂತೆ, ಇವಳಿಗೆ ಮೊದಲು ಹಣದ ಸಹಾಯ ಸಿಕ್ಕಲಿಲ್ಲ.

ಪೆನ್‌ಸಿಲ್‌ವೇನಿಯಾ ಸಂಸ್ಥಾನದ **ಬಟ್ಲರ್** ನಗರದಲ್ಲಿ ಜನಿಸಿದಳೀಕೆ. ಹುಟ್ಟಿ ಐದು ವರ್ಷದ ನಂತರ ತಾಯಿಯನ್ನು ಕಳೆದುಕೊಂಡು ತಬ್ಬಲಿಯಾದಳು. ಈಕೆ ತನ್ನ ತಂದೆಯ ಆಶ್ರಯದಲ್ಲಿ ಬೆಳೆದಳು. ಗಂಡಸರ ಸಂಗಡ ಹೇಗೆ ಜೀವನದಲ್ಲಿ ಪಾರಾಗಬೇಕೆಂಬ ಅನುಭವವನ್ನು ಚಿಕ್ಕಂದಿನಲ್ಲಿಯೇ ಪಡೆದಳು. ಈಕೆ ಪ್ರೌಢ ಶಾಲೆಯಲ್ಲಿ ಕಲಿಯುತ್ತಿದ್ದಾಗಲೇ ಮುಂದಿನ ತನ್ನ ಜೀವನದ ಗೊತ್ತು ಗುರಿಯನ್ನು ನಿರ್ಧರಿಸಿ ಬಿಟ್ಟಿದ್ದಳು; ಪದವೀಧರಳಾದ ಕೂಡಲೇ ಪೆನ್‌ಸಿಲ್‌ವೇನಿಯ ಬೆಲ್ ಟೆಲಿಫೋನ್ ಕಂಪೆನಿಯ ಕೆಲಸಕ್ಕೆ ಉಮೇದುವಾರರನ್ನು ಆರಿಸುವ ಕೆಲಸವನ್ನು ವಹಿಸಿಕೊಂಡಳು. ನಂತರ ಪಿಟ್ಸ್‌ಬರ್ಗ್‌ದ ಟ್ಯಾಕ್ಸಿ ಕಂಪೆನಿಯಲ್ಲಿ ವ್ಯವಸ್ಥಾಪಕಳಾಗಿ ಸೇರಿಕೊಂಡಳು.

ಆ ಕಂಪೆನಿಯ ಜಾಹಿರಾತು ಕೆಲಸ ಇವಳ ಮೇಲೆಯೇ ಬಿದ್ದಿತು. ಆಗ್ಗೆ ಈಕೆಗೆ ಪ್ರಥಮ ಸಲ ವೃತ್ತ ಪತ್ರಿಕೆಗಳ ಅನುಭವವಾಯಿತು. ಅಂದಿನಿಂದ ಇಂದಿನ ವರೆಗೆ ವೃತ್ತಪತ್ರಿಕಾ ಪ್ರಪಂಚದಲ್ಲಿಯೇ ಕಾಲ ಕಳೆದಿದ್ದಾಳೆ.

ಪಿಟ್ಸ್‌ಬರ್ಗ್ ಪ್ರೆಸ್ಸಿನ ಜಾಹಿರಾತಿನ ವ್ಯವಸ್ಥೆಯೆಲ್ಲವೂ ಈಕೆಯದೇ ಆಯಿತು. ಈಕೆಯ ಕೆಲಸ ತುಂಬ ತೃಪ್ತಿಕರವಾದುದನ್ನು ನ್ಯೂಯಾರ್ಕಿನ ನ್ಯೂಯಾರ್ಕ್ ವರ್ಲ್ಡ್ ಟೆಲಿಗ್ರಾಮ್ ಪತ್ರಿಕೆಯು ಕೊಂಡಾಡಿತು. ೧೯೩೩ ರಲ್ಲಿ ಅದೇ ಪತ್ರಿಕೆಯಲ್ಲಿ ಕೆಲಸ ಪ್ರಾರಂಭಿಸಿ, ನಾಲ್ಕು ವರ್ಷಗಳ ನಂತರ ನ್ಯೂಯಾರ್ಕ್ ಪೋಸ್ಟಿನ ಟೆಲಿಫೋನ್ ಶಾಖೆಯ ಮತ್ತು ಜಾಹಿರಾತು ಶಾಖೆಯ ವ್ಯವಸ್ಥಾಪಕಳಾದಳು. ಮೊದಲು ಈಕೆ ಜಾಹಿರಾತಿನ ಕೆಲಸ ಪ್ರಾರಂಭಿಸಿದಾಗ, ಬರೀ ಗಂಡಸರಿರುವ ಕಚೇರಿಯಲ್ಲಿ, ತನ್ನ ಮಾತನ್ನು ಯಾರಾದರೂ ಕೇಳುವರೇ ಎಂಬ ಸಂಶಯವಿತ್ತು. ಆಕೆಯ ಸಂಶಯ ಸ್ವಲ್ಪ ದಿನಗಳಲ್ಲಿಯೇ ನಿವಾರಣೆಯಾಯಿತು. ಐದು ವರ್ಷಗಳ ಅವಧಿಯಲ್ಲಿ ಒಂದಕ್ಕೆ ಎರಡು ಪಟ್ಟು ಜಾಹಿರಾತು ಹೆಚ್ಚಿತು. ಆ ಪತ್ರಿಕೆಯ ೩ ಲಕ್ಷ ೫೪ ಸಾವಿರ ಪ್ರತಿಗಳು ದಿನವೂ ಖರ್ಚಾಗ ಹತ್ತಿದವು.

ಮೇರಿ ಮೆಕ್ಲ್ಲೊಂಗಳು ಮಿ. ಎಡ್ವರ್ಡ್ ಸಿ. ಕೆನ್ನಲಿ ಎಂಬುವರನ್ನು ಮದುವೆಯಾಗಿದ್ದಾಳೆ. ಇವರು ಮಿಚಿಗನ್ ಸಂಸ್ಥಾನದ ವೆಸ್ಟ ಬ್ರಾಂಚ ಪಟ್ಟಣದವರು; ಥಿಯೋಡರ್ ಜಾಹಿರಾತು ಕಂಪೆನಿಯ ಅಧ್ಯಕ್ಷರಾಗಿ ಕೆಲಸ ಮಾಡುತ್ತಿದ್ದಾರೆ. ನ್ಯೂಯಾರ್ಕಿನ ಪೂರ್ವ ಭಾಗದ ೬೯ನೇ ಬೀದಿ ಯಲ್ಲಿ ಅವರ ಮನೆ. ನ್ಯೂಯಾರ್ಕಿಗೆ ಸಮೀಪದ ತೋಟವೊಂದರಲ್ಲಿ ಮನೆ ಮಾಡಿಕೊಂಡು ಅಲ್ಲಿ ವಾಸಿಸಬೇಕೆಂದು ಆಕೆಯ ಅಭಿಲಾಷೆ. ತಂದೆಯ ತರ ಬೇತಿಯಲ್ಲಿ ಮನೆಗೆಲಸ ಕಲಿತಳು. ಆಕೆಯೇ ಅಂಗಡಿಗೆ ಹೋಗಿ ಸಂಸಾರದ ಸಾಮಾನು ತರುತ್ತಾಳೆ. ಅಡಿಗೆಯನ್ನು ಸಹ ಆಕೆಯೇ ಮಾಡಿಕೊಳ್ಳುತ್ತಾಳೆ. ಈಕೆಗೆ ಒಂದು ಅಭಿಲಾಷೆಯಾದರೂ ಇಲ್ಲ. ತನ್ನ ಉಡುಪಿನ ಅಂದಚಂದ ಈಕೆಗೆ ತಿಳಿಯುವುದೇ ಇಲ್ಲ. ಅಂದರೆ ಹೊಲಸು ಬಟ್ಟೆ ಹಾಕಿಕೊಳ್ಳುತ್ತಾ ಳೆಂದಲ್ಲ, ನವೀನ ರೀತಿಯ ಫ್ಯಾಷನ್ನಿಗೆ ಗಮನವನ್ನೇ ಕೊಡುವದಿಲ್ಲ.

## ಶ್ರೀಮತಿ ಡೊರಾಥಿ ಥ್ಯಾಕರ್ಸೆ

ಶ್ರೀಮತಿ ಡೊರಾಥಿ ಥ್ಯಾಕರ್ಸೆಯು ಮೇರಿಯ ಯಜಮಾನಿತಿ, ನ್ಯೂಯಾರ್ಕ್ ಪೋಸ್ಟಿನ ಸಹಸಂಪಾದಿಕೆ ಮತ್ತು ಒಡತಿ. ಈಕೆ ಸುಪ್ರಸಿದ್ಧ ದಾನಿಯೂ ಬ್ಯಾಂಕರನೂ ಆದ **ಜೇಕಬ್ ಸ್ಕಿಫ್** ಎಂಬಾತನ ಮೊಮ್ಮಗಳು. ನಗರದ ಪತ್ರಿಕೆಗಳನ್ನು ಆಶ್ರಯಿಸಿರುವ ಅಮೇರಿಕದ ಕೆಲವು ಸ್ತ್ರೀ ಪತ್ರಿಕೋದ್ಯಮಿಗಳಲ್ಲಿ ಇವಳೂ ಒಬ್ಬಳು. ಬ್ರೈನ್ ಮೂವರ್ ಕಾಲೇಜಿನಲ್ಲಿ ಅಭ್ಯಾಸ ಪ್ರಾರಂಭ ಮಾಡಿದಳು. ಸದಾ ತರಗತಿಯಲ್ಲಿ ಕೊನೆಯ ನಂಬರೇ ಈಕೆಯದು. ಕಾರಣ ಅಭ್ಯಾಸ ತನಗೆ ಸರಿಯಲ್ಲವೆಂದು ತೀರ್ಮಾನಿಸಿ ೧೯೩೧ ರಲ್ಲಿ ಸಮಾಜ ಕಾರ್ಯದಲ್ಲಿ ತೊಡಗಿದಳು. ೧೯೩೯ ರಲ್ಲಿ ಈಕೆಯೂ ಈಕೆಯ ಮೊದಲಿನ ಗಂಡ **ಜಾರ್ಜ್ ಬೇಕರರೂ** ಕೂಡಿ ನ್ಯೂಯಾರ್ಕ್ ಪೋಸ್ಟ್ ಪತ್ರಿಕೆಯನ್ನು ಕೊಂಡರು. ಕಾರ್ಯ ನಿರ್ವಾಹಿಕೆಯಾಗಿ, ಅಧ್ಯಕ್ಷಳಾಗಿ, ಖಜಾಂಚಿಯಾಗಿ ಮೂರು ವರ್ಷ ಪತ್ರಿಕೆಯನ್ನು ಚೆನ್ನಾಗಿ ನಡೆಯಿಸಿದಳು. ವಿಷಯ ಕಲಿತುಕೊಳ್ಳಬೇಕೆಂಬ ಅಭಿಲಾಷೆಯಿಂದ, ಎಲ್ಲಾ ಶಾಖೆಗಳಲ್ಲಿಯೂ ಪರಿಶ್ರಮ ಹೊಂದಿ, ೧೯೪೨ ರಲ್ಲಿ ದೇಹಾಲಸ್ಯದ ನಿಮಿತ್ತ ರಾಜಿನಾಮೆಯಿತ್ತ ತನ್ನ ಗಂಡನ ಬದಲು ತಾನೇ ಪ್ರಕಟನಕಾರಳೂ ಆದಳು. ಕೆಲವೇ ದಿನಗಳಲ್ಲಿ ಮೊದಲ ಗಂಡನಿಂದ ವಿಚ್ಛೇದಿತಳಾಗಿ, ಸಹ ಸಂಪಾದಕನಾಗಿದ್ದ **ಥಿಯೋಡರ್ ಒಲಿನ್ ಥ್ಯಾಕರ್ಸೆ** ಎಂಬವನನ್ನು ಮದುವೆಯಾದಳು. ಪತ್ರಿಕೆಯ ಅಂದವನ್ನೂ ಹೆಚ್ಚಿಸಿದ್ದಲ್ಲದೆ, ವಿಷಯಗಳ ಪ್ರಾಮುಖ್ಯವನ್ನೂ ಹೆಚ್ಚಿಸಿದಳು. ವಿಶೇಷ ಲೇಖನಗಳ ಪುಟಗಳನ್ನು ಹೆಚ್ಚಿಸಿ ಸ್ತ್ರೀಯರಿಗಾಗಿ ಹೊಸದಾದ ಪುಟ ಪ್ರಾರಂಭಿಸಿದಳು. ೧೯೪೪ ರಲ್ಲಿ ಪತ್ರಿಕೆಯ ಆಕಾರ ಇಳಿಯಿತು. ಪೋಸ್ಟ್ ಸಿಂಡಿಕೇಟ್ ಎಂಬ ಸಂಸ್ಥೆ ಏರ್ಪಟ್ಟು ಅದರ ಮುಖಾಂತರ ಉಳಿದ ಪತ್ರಿಕೆಗಳಿಗೆ ಆಕೆ ಲೇಖನಗಳನ್ನು ಮಾರಲು ಪ್ರಾರಂಭಿಸಿದಳು. ೧೯೪೫ ರಲ್ಲಿ ನ್ಯೂಯಾರ್ಕಿನ ವಸಾಹತಾದ ಬ್ರಾಂಕ್ಸದ **ಹೋಮ್ ನ್ಯೂಸ್** ಎಂಬ ಪತ್ರಿಕೆಯನ್ನು ಕೊಂಡಳು. ಇದರ

೧ ಲಕ್ಷ ಪತ್ರಿಕೆಗಳು ಖರ್ಚಾಗುತ್ತವೆ. ಇದರಲ್ಲಿ ನೂರಕ್ಕೆ ೯೮ ರಷ್ಟು ಪತ್ರಿಕೆಗಳನ್ನು ಮನೆಮನೆಗೆ ತೆಗೆದುಕೊಂಡು ಹೋಗಿ ಕೊಡುತ್ತಾರೆ.

ಈ ಎರಡು ಪತ್ರಿಕೆಗಳ ಯಾಜಮಾನ್ಯವಲ್ಲದೆ ಈಕೆ ಮೂರು ರೇಡಿಯೊ ಸ್ಟೇಷನ್ನುಗಳನ್ನೂ ನಡೆಯಿಸುತ್ತಾಳೆ. ಅಮೇರಿಕದಲ್ಲಿ ರೇಡಿಯೊ ಖಾಸಗಿ ಯವರೇ, ಸಾಮಾನ್ಯವಾಗಿ ವೃತ್ತ ಪತ್ರಿಕಾ ಒಡೆಯರೇ ನಡೆಯಿಸುತ್ತಾರೆ. ಇದಲ್ಲದೆ ಸುಪ್ರಸಿದ್ಧ ಚಲನ ಚಿತ್ರಗಳಾದ **'ಡೆಡ್ ಎಂಡ್'** ಮತ್ತು **'ಅಬ್ರಹ್ಯಾಂ ಲಿಂಕನ್'** ಎಂಬುವುಗಳಲ್ಲಿ ಪಾಲುಗಾರಳೂ ಆಗಿದ್ದಾಳೆ. ಈಕೆಗೆ ೪೪ ವರ್ಷ. ಮೂವರು ಮಕ್ಕಳಿದ್ದಾರೆ. ತನ್ನ ಪತ್ರಿಕೆಯಲ್ಲಿ ಪ್ರಕಟವಾಗುವ ಆಹಾರದ ವಿಭಾಗಕ್ಕೆ ಆಗಾಗ ಅಮೇರಿಕದ ರುಚಿರುಚಿ ತಿಂಡಿಗಳನ್ನು ಮಾಡುವ ವಿಧಾನಗಳ ಬಗ್ಗೆ ಲೇಖನ ಬರೆಯುತ್ತಾಳೆ.

## ಶ್ರೀಮತಿ ಹೆಲನ್ ರೋಜರ್ಸ್ ರೀಡ್

ಶ್ರೀಮತಿ ಥ್ಯಾಕರ್ಸೆಗಿಂತ ೨೦ ವರ್ಷ ವಯಸ್ಸಿನಲ್ಲಿ ಚಿಕ್ಕವಳು, ಅತಿ ಸುಂದರಿ, ಶ್ರೀಮತಿ ಹೆಲನ್ ರೋಜರ್ಸ್ ರೀಡಳು. ಈಕೆ ನ್ಯೂಯಾರ್ಕ್ ಹೆರಾಲ್ಡ್ ಟ್ರಿಬ್ಯೂನಿನ ಒಡತಿಯಾಗಿದ್ದಾಳೆ. ವಿಸ್‌ಕಾನ್‌ಸಿನ್ ಸಂಸ್ಥಾನದ **ಆ್ಯಪಲ್‌ಟನ್** ನಗರದ ಹುಡುಗಿ. ಅಮೇರಿಕದ ಬಹುದೊಡ್ಡದಾದ ಮತ್ತು ಪ್ರತಿಭಾಯುತವಾದ ಪತ್ರಿಕೆಯ ಯಜಮಾನಿತಿ. ಚಿಕ್ಕಂದಿನಲ್ಲಿ, ದುಡಿದು ತನ್ನ ಕಾಲೇಜ್ ಅಭ್ಯಾಸ ಸಾಗಿಸಿಕೊಂಡು ಬಂದ ತರುಣಿ ಈಕೆ. **ಶ್ರೀಮತಿ ವೈಟ್‌ಲಾಳ** ಕಾರ್ಯದರ್ಶಿನಿಯ ಕೆಲಸ ಕೈಕೊಂಡು ಅದೇ ಸಂಸಾರಕ್ಕೆ ಸಂಬಂಧಪಟ್ಟ ಶ್ರೀ ಒಗ್‌ಡನ್‌ರೀಡ್ ಎಂಬುವರನ್ನು ಮದುವೆಯಾದಳು. ಹೋದ ವರ್ಷ ಪತಿ ತೀರಿಕೊಂಡ ನಂತರ ಪತ್ರಿಕೆಯ ಎಲ್ಲ ಯಾಜಮಾನ್ಯವೂ ಈಕೆಗೆ ಬಂದಿತು.

ಈಕೆಯೂ ಪ್ರತಿಭಾಶಾಲಿನಿ. ಪತ್ರಿಕೆಯಲ್ಲಿ ೨೦ ವರ್ಷಗಳಿಂದಲೂ ಕೆಲಸ ನಡೆಸುತ್ತಿದ್ದು ಜಾಹಿರಾತು ವಿಭಾಗವನ್ನು ಚೆನ್ನಾಗಿ ಅಭಿವೃದ್ಧಿ ಪಡಿಸಿದ ಕೀರ್ತಿ ಈಕೆಯದು. ೧೫ ಮಿಲಿಯನ್ ಡಾಲರುಗಳನ್ನು ವೆಚ್ಚ

ಮಾಡಿದರೂ ಅಭಿವೃದ್ಧಿಯಾಗದ ಆ ಶಾಖೆ ಈಕೆಯ ಕೈಗೆ ಬಂದ ನಂತರ ಸಾಲವಾಗಿ ನಿಂತಿದ್ದ ೧ ಲಕ್ಷ ೫೦ ಸಾವಿರ ಡಾಲರುಗಳನ್ನು ತುಂಬಿ ತೆಗೆದು ಈಗ ಲಾಭದ ಭಾಗಕ್ಕೆ ಲಕ್ಷಾಂತರ ಡಾಲರು ಬರುವಂತೆ ಮಾಡಿದ ಕೀರ್ತಿ, ಸಾಹಸ ಈಕೆಯದೇ.

## ಶ್ರೀಮತಿ ಇಲಿನಾರ್ ಮೆಡಿಲ್ ಪ್ಯಾಟರ್ಸನ್

ಶ್ರೀಮತಿ ಇಲಿನಾರ್ ಮೆಡಿಲ್ ಪ್ಯಾಟರ್ಸನ್ನಳು ಇವರೆಲ್ಲರಿಗಿಂತ ಬೇರೆಯೇ. ಈಕೆಗೆ 'ಸಿಸ್ಸಿ' ಎಂದು ಪ್ರಿಯ ನಾಮಧೇಯ. ರಾಜಧಾನಿಯ ವಾಷಿಂಗ್‌ಟನ್ ಟೈಮ್ಸ್ ಹೆರಾಲ್ಡಿನ ಯಜಮಾನಿತಿ. ತುಂಬಾ ಕಠೋರಳು, ಮುಂಗೋಪಿ, ಆದರೆ ಬುದ್ಧಿವಂತೆ. ಈಕೆ ೪೬ನೇ ವಯಸ್ಸಿನಲ್ಲಿ ಪತ್ರಿಕಾ ವ್ಯವಸಾಯವನ್ನು ತನ್ನ ಜೀವನದ ವೃತ್ತಿಯನ್ನಾಗಿ ಮಾಡಿಕೊಂಡಳು. ಚಿಕಾಗೋ ಟ್ರಿಬ್ಯೂನ್ ಪತ್ರಿಕೆಯನ್ನು ಪ್ರಾರಂಭಿಸಿದ ಜೋಸಫ್ ಮೆಡಿಲ್‌ನ ಮೊಮ್ಮಗಳು. ಎರಡು ಸಲ ಮದುವೆಯಾಗಿದ್ದಾಳೆ. ಮದುವೆಯಾದ ಮಗಳೊಬ್ಬಳು ಈಕೆಯ ಸರ್ವಸ್ವ. ವಾಷಿಂಗ್ಟನ್ ಟೈಮ್ಸ್ ಹೆರಾಲ್ಡನ್ನು ೧೯೩೯ರಲ್ಲಿ ಕ್ರಯಕ್ಕೆ ತೆಗೆದುಕೊಂಡಳು ಸಣ್ಣದಿದ್ದ ಎರಡು ಪತ್ರಿಕೆಗಳನ್ನು ಒಂದಾಗಿ ಮಾಡಿ ರಾಜಧಾನಿಯ ಅತಿ ದೊಡ್ಡ ಪತ್ರಿಕೆಯನ್ನಾಗಿ ಮಾಡಿದಳು. ಈಕೆ ಈ ವೃತ್ತಿ ಪ್ರಾರಂಭ ಮಾಡಿದ್ದು ತನ್ನ ಹಳೆಯ ಸೇಡನ್ನು ತೀರಿಸಿಕೊಳ್ಳಲಿಕ್ಕಾಗಿ. ಅಂದಿನಿಂದ ೧೭ ವರ್ಷಗಳವರೆಗೆ ತನ್ನ ಹಗೆಯಾದ ಶ್ರೀ ಆ್ಯಲೆಸ್ ರೂಸವೆಲ್ಟ ಲಾಂಗವರ್ತನ ಮೇಲೆ ಪ್ರತಿದಿನವೂ ವಿಷ ಕಾರಿದ್ದಾಳೆ. ರಾಜಧಾನಿಯ ಜನ ಈ ಪತ್ರಿಕೆಯನ್ನು ಕೊಳ್ಳುವುದು ಈ ಒಂದು ಕಾರಣಕ್ಕಾಗಿ; ಸಿಸ್ಸಿ ಆ ದಿನ ಯಾರನ್ನು ಟೀಕೆಗೆ ತೆಗೆದುಕೊಂಡಿದ್ದಾಳೆಂದು ನೋಡಲು. ಎಲ್ಲರಿಗಿಂತ ಈಕೆಯ ಕೋಪ ಸುಪ್ರಸಿದ್ಧ ಲೇಖಕನಾದ ಡ್ರ್ಯೂ. ಪೀಯರ್ಸನನ ಮೇಲೆ. ಈಕೆಯ ಮಗಳು ಶ್ರೀಮತಿ ಫೆಲಿಕಾ ಒಂದು ಸಲ ಪೀಯರಸನ್ನನನ್ನು ಮದುವೆಯಾಗಿ ವಿಚ್ಛೇದ ಹೊಂದಿದಳು. ೧೯೪೨ರಿಂದ ಈಕೆಯ ಪತ್ರಿಕೆಯಲ್ಲಿ

ಪೀಯರಸನ್ನನಿಂದ "**ವಾಷಿಂಗ್ಟನ್ ಮೆರಿ ಗೋ ರೌಂಡ್**" ಎಂಬ ಅಭಿದಾನದಿಂದ ಬರುತ್ತಿದ್ದ ಲೇಖನಗಳು ನಿಂತ ಮೇಲೆ ತಾನೇ ತನ್ನ ಹಿಂದಿನ ಆಳಿಯನಪುಟ ಬರೆಯುತ್ತಾಳೆ. ಆಗಾಗ್ಗೆ ಪೀಯರಸನ್ನನನ್ನು "ತಲೆನೋವಿನ ಹುಡುಗ" (The Headache Boy) ಎಂದು ಟೀಕಿಸುತ್ತಾಳೆ.

ಸಿಸ್ಸಿಯಲ್ಲಿ ಪತ್ರಿಕಾ ಚತುರತೆಯೂ ಉಂಟು. ಒರಟುತನವೊಂದಲ್ಲದೆ ಪತ್ರಿಕಾ ಪ್ರಪಂಚದ ಗುಟ್ಟು ತಿಳಿದಿದ್ದಾಳೆ. ಅಧ್ಯಕ್ಷ ರೂಸವೆಲ್ಟ ತೀರಿಕೊಂಡಾಗ ಪತ್ರಿಕೆಗಳೆಲ್ಲವೂ ಬರೀ ಆತನ ಗುಣಗಾನವನ್ನೇ ಮಾಡಿದುವು. ಆಕೆಯ ಪತ್ರಿಕೆಯೂ ಹಾಗೆ ಮಾಡಬೇಕೆಂದು, ಸಂಪಾದಕರು ಸಲಹೆಯಿತ್ತರು, ಆಕೆ, "ಮೊದಲನೇ ಪುಟದ ತುಂಬಾ ದೊಡ್ಡದಾದ ರೂಸವೆಲ್ಟನ ಚಿತ್ರ ಹಾಕಿ ಎರಡನೇ ಪುಟದಲ್ಲಿ ಚಿಕ್ಕದಾಗಿ ಶ್ರದ್ಧಾಂಜಲಿಯ ಸುದ್ದಿ ಬರೆಯಿರಿ. ಉಳಿದ ಪುಟಗಳೆಲ್ಲಾ ಅಧ್ಯಕ್ಷ ಟ್ರೂಮನ್ನರಿಗೆ ಮೀಸಲಾಗಿರಲಿ. ಈಗ ಪ್ರಪಂಚದ ಮತ್ತು ಅಮೇರಿಕೆಯ ಪರದೆಯ ಮೇಲೆ ನಾಟ್ಯವಾಡುತ್ತಿರುವವರು **ಟ್ರೂಮನ್**, ರೂಸವೆಲ್ಟ್ ಅಲ್ಲ; ರೂಸವೆಲ್ಟರ ಕಥೆ ಮುಗಿಯಿತು." ಎಂದು ಹೇಳಿದಳು.

ಅಮೇರಿಕದಲ್ಲೆಲ್ಲ ತುಂಬ ವೈರಿಗಳನ್ನು ಗಳಿಸಿಕೊಂಡಾಕೆ ಈಕೆ. ಈಕೆಗೆ ಅಂದಚಂದ ಎಲ್ಲಾ ಬೇಕು. ಒಂದು ಸಲ ೨೦ ಜೊತೆ ಬೂಟುಗಳನ್ನು, ಕೊಂಡು ದಿನವೂ ಒಂದೊಂದು ಹಾಕಿಕೊಂಡು ಮೆರೆದಳು. ರಾಜಧಾನಿಯಲ್ಲಿ ಅರಮನೆಯಂತಹ ಸೊಗಸಾದ ಮನೆಯಿದೆ. **ಸರಸೋಟದಲ್ಲಿ** ನ್ಯೂಯಾರ್ಕಿನಲ್ಲಿ, ಲಾಂಗ್ ಐಲೆಂಡಿನಲ್ಲಿಯೂ ಮನೆಗಳಿವೆ. ಬೇಸರವಾದಾಗ ಅವೇ ಈಕೆಯ ಆಶ್ರಯ ಸ್ಥಾನಗಳು.

ಆಕೆ ಹೇಗೇ ಇರಲಿ, ಆಕೆಯ ಪತ್ರಿಕೆ ಇಂದು ಬಹು ಪ್ರಸಿದ್ಧವಾಗಿದೆ. ವರ್ಷಕ್ಕೆ ಒಂದು ಮಿಲಿಯನ್ ಡಾಲರ ಲಾಭ ಪಡೆಯುತ್ತಾಳೆ. ಅಧ್ಯಕ್ಷ ಟ್ರೂಮನ್ ಪ್ರತಿದಿನವೂ ಈಕೆಯ ಪತ್ರಿಕೆಯನ್ನು ಓದುತ್ತಾರೆ. ಇನ್ನೇನು ಬೇಕು?

---

# ಪತ್ರಿಕೋದ್ಯಮ ಶಾಲೆ

ಬೆಳಗಿನಿಂದ ಹಿಡಿದು ಸಂಜೆಯವರೆಗೆ **ಮಿಸ್ಸೋರಿಯ ಕೊಲಂಬಿಯ** ದಲ್ಲಿ ಸುಮಾರು ೧,೫೦೦ ವಿದ್ಯಾರ್ಥಿಗಳು ತಮ್ಮದೇ ಆದ ಒಂದು ದೈನಿಕ ಪತ್ರಿಕೆಯ ಕೆಲಸದಲ್ಲಿ ನಿರತರಾಗಿರುತ್ತಾರೆ. ಕೆಲವರು ಸುದ್ದಿಗಳನ್ನು ಸಂಪಾದಿಸುತ್ತಲೋ, ಕೆಲವರು ಪುಸ್ತಕ ಭಂಡಾರದಲ್ಲಿ ವಿಶೇಷ ಲೇಖನಗಳನ್ನು ಬರೆಯುತ್ತಲೋ ಇರುತ್ತಾರೆ. ಕೆಲವು ವಿದ್ಯಾರ್ಥಿಗಳು ನಗರಕ್ಕೆ ಬರುವ ಅಧಿಕಾರಿಗಳನ್ನೋ, ವ್ಯಾಪಾರಿಗಳನ್ನೋ ,ಅಥವಾ ನಾಯಕರನ್ನೋ, ಸಂದರ್ಶಿಸುತ್ತಲೂ, ಇತರ ವರ್ತಮಾನಗಳನ್ನು ಸಂಗ್ರಹಿಸುತ್ತಲೂ, ನಗರದಲ್ಲಿ ತಿರುಗಾಡುತ್ತಿರುತ್ತಾರೆ. ಯಾವೊಂದು ಸುದ್ದಿಯೂ ಅವರ ಗಮನಕ್ಕೆ ಬರದೇ ಹೋಗುವುದಿಲ್ಲ. ನಲ್ಲನಲ್ಲೆಯರು ಹಸಿರೆಲೆಗಳ ಮರೆಯಲ್ಲಿ ಕಳೆಯುತ್ತಿರುವ ರಸನಿಮಿಷಗಳನ್ನು ಕೂಡಾ ಅವರು ವರದಿ ಮಾಡದೆ ಬಿಡುವುದಿಲ್ಲ.

ಈ ಸಾಮೂಹಿಕ ಪ್ರಯತ್ನದಿಂದ ಪ್ರತಿ ಸಂಜೆ ೪೦,೦೦೦ ಪ್ರತಿಗಳ ಸಂಚಿಕೆಯೊಂದು ಹೊರಬೀಳುತ್ತದೆ. ಇಂಥ ಚುರುಕಾದ ಮತ್ತು ಶ್ರದ್ಧೆಯಿಂದೊಡಗೂಡಿದ ಪತ್ರಿಕೋದ್ಯೋಗಿಗಳ ತಂಡವು ಬಹುಶಃ ವಿಶ್ವಸಂಸ್ಥೆ, ವಾಷಿಂಗ್ಟನ್, ಲಂಡನ್, ಪ್ಯಾರಿಸ್, ಮಾಸ್ಕೋ ಇತ್ಯಾದಿ ಮಹತ್ವದ ರಾಜಧಾನಿಗಳಲ್ಲಿ ಕೂಡ ಇರಲಿಕ್ಕಿಲ್ಲ. ಈ ಭಾವೀ ಪತ್ರಿಕೋದ್ಯೋಗಿಗಳಿಂದ ಪ್ರಪಂಚದ ಪ್ರತಿಯೊಂದು ಸಮಸ್ಯೆಯೂ ಚರ್ಚಿಸಲ್ಪಡುತ್ತದೆ ಮತ್ತು ಅಭ್ಯಾಸಿಸಲ್ಪಡುತ್ತದೆ. ಅವರು ಪ್ರತಿಯೊಂದು ವಿಷಯದ ಮೇಲೂ ಬರೆಯುತ್ತಾರೆ. ಇದೇ ಪತ್ರಿಕೆ " **ಕೊಲಂಬಿಯಾ ಮಿಸ್ಸೋರಿಯನ್** " ೧೯೫೦ ರಲ್ಲಿ ವಿಶ್ವವಿದ್ಯಾನಿಲಯದ ಅಧ್ಯಕ್ಷ ಪಟ್ಟವನ್ನೇರಿದ **ಡೀ ವಾಲ್ಟರ್ ವಿಲಿಯಮ್ಸ್**, ಪತ್ರಿಕೋದ್ಯೋಮ ಶಿಕ್ಷಣಕ್ಕೆ ಈ ಹೊಸ ವಿಧಾನವನ್ನು ಪ್ರಥಮವಾಗಿ ಆಚರಣೆಗೆ ತಂದರು.

ಕೊಲಂಬಿಯದ '**ಸ್ಕೂಲ್ ಆಫ್ ಜರ್ನಲಿಸಂ**' ೧೯೦೮ ರಲ್ಲಿ

ವಾಲ್ಟರ್ ವಿಲಿಯಮ್ಸ್‌ರಿಂದ ಆರಂಭಿಸಲ್ಪಟ್ಟಿತು. ಅವರೇ ಆ ಶಾಲೆಯ ಮುಖ್ಯೋಪಾಧ್ಯಾಯರೂ (Dean) ಆದರು. ೧೯೧೮ರಲ್ಲಿಯೇ ಮಿಸ್ಸೋರಿಯ ಪತ್ರಿಕೋದ್ಯೋಗಿಗಳ ಸಂಘವು ಪತ್ರಿಕೋದ್ಯಮದ ಇಲಾಖೆಯೊಂದನ್ನು ವಿಶ್ವವಿದ್ಯಾಲಯದಲ್ಲಿ ನಿರ್ಮಿಸಬೇಕೆಂದು ಕೇಳಿಕೊಂಡಿತ್ತು. ೧೮೭೮–೭೯ನೆಯ ವರ್ಷದಲ್ಲಿ ಇಂಗ್ಲೀಷ್ ಪಾಠಪಟ್ಟಿಯೊಡನೆ ಪತ್ರಿಕೋದ್ಯೋಗದ ವಿಷಯವೂ ಮೊದಲಬಾರಿ ಅಡಕವಾಗಿ, ಅಂದಿನಿಂದ ಅದು ಒಂದು ಶಿಕ್ಷಣ ವಿಷಯವಾಗಿ ಮಾರ್ಪಟ್ಟಿತು. ಇಂಗ್ಲೀಷ್ ಇಲಾಖೆಯ ಮುಖ್ಯೋಪಾಧ್ಯಾಯರಾದ ಪ್ರೊಫೆಸರ್ **ಡೇವಿಡ್ ಆರ್. ಮೆಕ್‌ಅನಲ್ಲಿ 'ಜ್ಯೂ,** ರವರೂ ಮತ್ತೊಬ್ಬ ಪತ್ರಿಕೋದ್ಯೋಗಿಯೂ, ಪತ್ರಿಕೋದ್ಯಮದ ಇತಿಹಾಸದ ಬಗ್ಗೆ ಪಾಠದ ಪಟ್ಟಿಯನ್ನು ತಯಾರಿಸಿ ವಿದ್ಯಾರ್ಥಿಗಳಿಗೆ ಕಲಿಸಿದರು. ಅಲ್ಲದೆ **ಸ್ಪೆಕ್ಟೇಟರ್, ಲಂಡನ್ ಟೈಮ್ಸ್, ನ್ಯೂಯಾರ್ಕ್ ಹೆರಾಲ್ಡ್** ಮುಂತಾದ ದಿನಪತ್ರಿಕೆಗಳು ಹೇಗೆ ನಡೆಯುತ್ತವೆಂದೂ ಅವರು ಉಪನ್ಯಾಸಗಳನ್ನೀಯುತ್ತಿದ್ದರು. ಆದರೆ ವಾಲ್ಟರ್ ವಿಲಿಯಮ್ಸ್‌ರ ಸತತ ಪ್ರಯತ್ನದಿಂದಾಗಿ, ಪತ್ರಿಕೋದ್ಯಮದ ಬಗ್ಗೆ ಬಹುಮುಖ ಶಿಕ್ಷಣವನ್ನೀಯುವ ಸುಸಜ್ಜಿತ ಪತ್ರಿಕೋದ್ಯಮ ಶಾಲೆಯು ನಿರ್ಮಾಣವಾಯಿತು. ಅದರ ಸ್ಥಾಪಕ **ವಾಲ್ಟರ್ ವಿಲಿಯಮ್ಸ್** ೧೯೦೮ ರಿಂದ ೧೯೩೦ ರ ವರೆಗೂ, **ಫ್ರ್ಯಾಂಕ್‌ಲೀ ಮಾರ್ಟಿನ್ನರು** ೧೯೩೧ ರಿಂದ ೧೯೪೧ ರ ವರೆಗೂ ಮತ್ತು **ಫ್ರ್ಯಾಂಕ್ ಲ್ಯೂಥರ್ ಮಾಟ್** ಅವರು ೧೯೪೧ ರಿಂದ ೧೯೫೦ ರ ವರೆಗೂ, **ಡಾ|| ಅರ್ಲ್ ಇಂಗ್ಲೀಷರು** ಈ ವರೆಗೂ ಡೀನರಾಗಿದ್ದು ಖ್ಯಾತಿಯನ್ನು ಪಡೆದಿದ್ದಾರೆ.

ಬ್ಯಾಚಲರ್ ಆಫ್ ಜರ್ನಲಿಸಂ, ಮಾಸ್ಟರ್ ಆಫ್ ಆರ್ಟ್ಸ್ ಇನ್ ಜರ್ನಲಿಸಂ ಮತ್ತು ಡಾಕ್ಟರೇಟ್, ಈ ಮೂರು ಪದವಿಗಳಿಗಾಗಿ ಈ ಪತ್ರಿಕೋದ್ಯಮ ಶಾಲೆಯು ಶಿಕ್ಷಣ ಕೊಡುತ್ತದೆ. ಬ್ಯಾಚಲರ್ ಆಫ್ ಜರ್ನಲಿಸಂ ತರಗತಿಗೆ ಸೇರಲಿಚ್ಛಿಸುವ ವಿದ್ಯಾರ್ಥಿಯು ಮುಂಚೆ ಸಾಮಾನ್ಯ ಕಲಾ ವಿಷಯ ಮತ್ತು ಸಮಾಜ ವಿಜ್ಞಾನಗಳನ್ನು ಎರಡು ವರುಷ ಕಲಿಯಬೇಕು.

ಲೇಖನ ಬರೆಯುವುದು, ಸಂಪಾದಿಸುವುದು, ಜಾಹೀರಾತು ಮಾಡುವ ಕಲೆ, ವ್ಯಾಪಾರ ವ್ಯವಸ್ಥೆ ಮತ್ತು ಪತ್ರಿಕೋದ್ಯಮದ ನೀತಿ ಶಾಸ್ತ್ರ—ಇವಿಷ್ಟು ಪತ್ರಿಕೋದ್ಯಮ ವೃತ್ತಿಯ ಮೂಲ ಅಭ್ಯಾಸಗಳು. ಈ ವ್ಯಾಸಂಗ ಮುಗಿದ ಬಳಿಕವೇ ವಿದ್ಯಾರ್ಥಿಗಳನ್ನು ಕಾರ್ಯಕ್ಷೇತ್ರದ ಅಭ್ಯಾಸಕ್ಕೆ ಕಳುಹಿಸಲಾಗುವುದು. ಬ್ಯಾಚಲರ್ ಆಫ್ ಜರ್ನಲಿಸಂ ಅಭ್ಯಾಸಕ್ಕೆ ಪ್ರೌಢ ಶಿಕ್ಷಣ ಮುಗಿದ ಬಳಿಕ ನಾಲ್ಕು ವರುಷ ಕಾಲ ಕಲಿಯಬೇಕು.

ಮಾಸ್ಟರ್ ಪದವಿಯನ್ನು ಪಡೆಯಲು ಇನ್ನೊಂದು ವರುಷ ಹೆಚ್ಚಿಗೆ ಬೇಕು. ಪತ್ರಿಕೋದ್ಯಮದ ಇತಿಹಾಸ ಮತ್ತು ನೀತಿ ವರದಿ ಮಾಡುವುದು, ಸಂಪಾದಿಸುವುದು ಮತ್ತೆ ಜಾಹೀರಾತಿನ ತಂತ್ರಗಳನ್ನು ಈ ತರಗತಿಯಲ್ಲಿ ಕಲಿಯಬೇಕು. ಇಷ್ಟಲ್ಲದೆ ಪತ್ರಿಕೋದ್ಯಮದ ವಿಷಯವಾಗಿ ವಿದ್ಯಾರ್ಥಿಯು ತನ್ನ ಸ್ವಸಾಮರ್ಥ್ಯದಿಂದ ಒಂದು ಪ್ರಬಂಧವನ್ನು ಬರೆಯಬೇಕು. ಆಮೇಲೆ ಪರೀಕ್ಷೆಗಳು ನಡೆಯುತ್ತವೆ. ಪ್ರಬಂಧವನ್ನು ಒಂದು ವಿಶೇಷ ಸಮಿತಿಯವರು ಪರಿಶೀಲಿಸಿ, ಅದರ ಯೋಗ್ಯತೆಯನ್ನು ಗೊತ್ತುಮಾಡುತ್ತಾರೆ.

ಡಾಕ್ಟರ್ ಆಫ್ ಫಿಲಾಸಫಿ ಇನ್ ಜರ್ನಲಿಸಂ ಪದವಿಗೂ ಒಂದು ವಿಶೇಷ ಪ್ರಬಂಧನನ್ನು ಬರೆದು ಸಮಿತಿಗೊಪ್ಪಿಸಬೇಕು. ಅಲ್ಲದೆ ಡಾಕ್ಟರೇಟ್ ಪದವಿಯನ್ನು ಪಡೆಯುವ ವಿದ್ಯಾರ್ಥಿಯು ಪರದೇಶ ಭಾಷೆಯ ಪರೀಕ್ಷೆ, ವೃತ್ತಿಪರೀಕ್ಷೆ ಮುಂತಾದ ಎಲ್ಲಾ ನಿಯಮಿತ ಪರೀಕ್ಷೆಗಳಲ್ಲಿಯೂ—ತೇರ್ಗಡೆಯಾಗಬೇಕು. ಸಾಮಾನ್ಯವಾಗಿ ಈ ಅಭ್ಯಾಸದ ಅವಧಿಯು ೨ ವರ್ಷವಾಗಿದ್ದರೂ, ವಿಶೇಷ ಪಾಂಡಿತ್ಯವುಳ್ಳ ವಿದ್ಯಾರ್ಥಿ ಕೇವಲ ಒಂದೂವರೆ ವರ್ಷದಲ್ಲೇ ಡಾಕ್ಟರೇಟ್ ಪದವಿಯನ್ನು ಪಡೆಯಬಲ್ಲನು.

ಪತ್ರಿಕೋದ್ಯಮದ ೫೩ ಅಂಶಗಳಲ್ಲಿ ಇಲ್ಲಿ ತರಬೇತಿ ಕೊಡಲಾಗುತ್ತಿದೆ, ಪತ್ರಿಕೋದ್ಯಮದ ಇತಿಹಾಸ ಮತ್ತು ನೀತಿಶಾಸ್ತ್ರ, ವರದಿ ಮಾಡುವುದು ಮತ್ತು ಸುದ್ದಿಗಳನ್ನು ಸಂಪಾದಿಸುವುದು ವ್ಯಾಪಾರ ವ್ಯವಸ್ಥೆ ಮುದ್ರಣದ ಲಿಪಿಗಳ

ಜ್ಞಾನ, ಚಿತ್ರವನ್ನು ಕೊರೆದು ಪಡಿಯಚ್ಚುಗಳನ್ನು ತಯಾರಿಸುವುದು, ಛಾಯಾ ಚಿತ್ರಗ್ರಹಣ, ಅಗ್ರಲೇಖನ ಬರೆಯುವುದು ಬಾನುಲಿ, ವರ್ತಮಾನ ಪತ್ರಿಕೆಗಳ ಶೀರ್ಷಿಕೆಗಳು ಮತ್ತು ಪತ್ರಿಕಾ ವಿಚಾರ, ಇವು ಅಭ್ಯಾಸದ ಕೆಲವು ಮುಖ್ಯ ವಿಷಯಗಳಾಗಿವೆ. ಅಲ್ಲದೆ, ವಾರಪತ್ರಿಕೆ, ಚಿಕ್ಕದಾದ ದಿನಪತ್ರಿಕೆ, ಮಾಧ್ಯಮಿಕ ಶಾಲೆಯ ಪತ್ರಿಕೋದ್ಯೋಗ, ಹೊರಗಿನ ಪರಿಶೋಧನೆಗಳು ಮತ್ತು ಸಂಶೋಧನೆ ಈ ವಿಷಯಗಳನ್ನು ಕಲಿಸಲಾಗುತ್ತಿದೆ.

"**ಕೊಲಂಬಿಯಾ ಮಿಸ್ಸೋರಿಯನ್**" ಎಂಬ ಎಂಟು ಪುಟದ ದಿನ ಪತ್ರಿಕೆಯನ್ನು ವಿದ್ಯಾರ್ಥಿಗಳು, ಅಧ್ಯಾಪಕ ವರ್ಗದವರ ಸಹಾಯದಿಂದ ನಡೆಸುತ್ತಿದ್ದಾರೆ. ಇದು ಹಿಂದೆ "**ಯುನಿವರ್ಸಿಟಿ ಮಿಸ್ಸೋರಿಯನ್**" ಎಂದೂ ಕರೆಯಲ್ಪಡುತ್ತಿತ್ತು. ಪತ್ರಿಕೋದ್ಯಮವನ್ನೇ ತಮ್ಮ ಅಭ್ಯಾಸದ ಮುಖ್ಯ ವಿಷಯವನ್ನಾಗಿ ಆರಿಸಿದ ವಿದ್ಯಾರ್ಥಿಗಳಿಗೆ ಇಲ್ಲಿ ಪ್ರಾಯೋಗಿಕ ತರಬೇತಿಯನ್ನು ಕೊಡಲಾಗುತ್ತದೆ. "**ಕೊಲಂಬಿಯಾ ಡೈಲಿ ಟ್ರಿಬ್ಯೂನ್**" ಎಂಬ ಇನ್ನೊಂದು ಖಾಸಗಿ ದಿನಪತ್ರಿಕೆಯು ಇದರೊಡನೆ ಪೈಪೋಟಿ ನಡೆಸುತ್ತದೆ. ಉತ್ಕೃಷ್ಟವಾದ ವರ್ತಮಾನ ಪ್ರದರ್ಶನ ಮತ್ತು ಪುಟ ರಚನೆಗಾಗಿ, "**ಕೊಲಂಬಿಯಾ ಮಿಸ್ಸೋರಿಯನ್**" ಪತ್ರಿಕೆಯು ಎರಡು ಸಲ 'ರಾಷ್ಟ್ರೀಯ ಬಹುಮಾನ' ಎಂಬ ಪಾರಿತೋಷಿಕವನ್ನು ಪಡೆದಿದೆ.

ಪತ್ರಿಕೋದ್ಯಮ ಶಾಲೆಯ ನಾಲ್ಕು ವಿಶಾಲ ಕಡಗಳಟ್ಟೆ ಪೈಕಿ ಒಂದರಲ್ಲಿ "ಕೊಲಂಬಿಯ ಮಿಸ್ಸೋರಿಯನ್" ಪತ್ರಿಕೆಯ ಕಚೇರಿಯಿದೆ. ಅದರಲ್ಲಿ ವೃತ್ತಪತ್ರಿಕೆಗಳಿಗೆ ಬೇಕಾದ ಎಲ್ಲಾ ಸಾಮಾಗ್ರಿ ಸಲಕರಣೆಗಳೂ ಇವೆ. ಅದರಲ್ಲಿ ಛಾಯಾ ಚಿತ್ರಗಳ ರಸಾಯನ ಶಾಲೆ, ಪಡಿಯಚ್ಚುಗಳನ್ನು ಮಾಡುವ ಯಂತ್ರ, ಮೊಳೆಗಳನ್ನು ತಯಾರಿಸುವ ಪ್ರಯೋಗಶಾಲೆ, ಜಾಹೀರಾತಿನ ವಿಭಾಗ, ಜಾಹೀರಾತು ಮತ್ತು ಪತ್ರಿಕಾ ವಿವರಣೆಗಳನ್ನು ನೋಡಿಕೊಳ್ಳುವ ದೊಡ್ಡ ವ್ಯಾಪಾರ ಕಚೇರಿಯೂ ಆ ಕಟ್ಟಡದಲ್ಲೇ ಇದೆ.

ಈ ಪತ್ರಿಕೆಗೆ ಒಂದು ಆಧುನಿಕ ರೋಟರಿ ಅಚ್ಚು ಯಂತ್ರವಿದ್ದು
ರಡು ತಂತಿ ಯಂತ್ರಗಳು ಯುನೈಟೆಡ್ ಪ್ರೆಸ್ಸಿನ ಸುದ್ದಿಗಳನ್ನು ಕೊಡು
ವೆ. ಅಲ್ಲದೆ ನಾಲ್ಕು ಲಿನೋಟೈಪ್ ಮತ್ತು ೨೦ ಟೈಪ್‌ರೈಟರ್ ಯಂತ್ರ
ಳು ಮತ್ತು ಇತರ ಸಾಮಾಗ್ರಿಗಳೂ 'ಮಿಸ್ಸೋರಿಯನ್' ಪತ್ರಿಕೆಗೆ ಇವೆ.
**ಕೆ.ಎಫ್.ಆರ್.ಯು. ಕೊಲಂಬಿಯ**" ಎನ್ನುವ ಬಾನುಲಿ ಕೇಂದ್ರವೂ
ಶಾಲೆಗೆ ಸೇರಿಸಲ್ಪಟ್ಟಿದ್ದು, ಅಲ್ಲಿ ಬಾನುಲಿ ಭಾಷಣವನ್ನು ಮಾಡುವ
ರಬೇತಿಯನ್ನು ವಿದ್ಯಾರ್ಥಿಗಳಿಗೀಯಲಾಗುತ್ತಿದೆ.

ಅಮೇರಿಕದ ಪತ್ರಿಕೋದ್ಯಮ ಪುಸ್ತಕ ಭಂಡಾರಗಳ ಪೈಕಿ ಅಗ್ರ
ಣ್ಯವಾದ ಮಿಸ್ಸೋರಿಯ ಪತ್ರಿಕೋದ್ಯಮ ಶಾಲೆಯ ಪುಸ್ತಕ ಭಂಡಾರಕ್ಕೆ
ೀನ್ ಆಗಿದ್ದ ಫ್ರಾಂಕ್‌ಲೀ ಮಾರ್ಟನ್ನರ ಹೆಸರನ್ನು, ಅವರ ಸೇವೆಯು
ಜ್ಞಾಪಕಾರ್ಥವಾಗಿ ಇಡಲಾಗಿದೆ. ಇದರಲ್ಲಿ ಪತ್ರಿಕೋದ್ಯಮಕ್ಕೆ ಸಂಬಂಧಿ
ಸ ೯,೦೦೦ ಗ್ರಂಥಗಳಿವೆ. ಅಲ್ಲದೆ ಅಮೇರಿಕದಲ್ಲಿ ಪ್ರಕಟವಾಗುವ
ಸುಮಾರು ೮೦೦ ವರ್ತಮಾನ ಪತ್ರಿಕೆಗಳೂ ಅಲ್ಲಿಗೆ ಬರುತ್ತವೆ. ಮತ್ತೆ
ರದೇಶಗಳಿಂದ ಸುಮಾರು ೨೫೦ ವೃತ್ತ ಪತ್ರಿಕೆಗಳೂ, ಅಷ್ಟೇ ಮಾಸ
ತ್ರಿಕೆಗಳೂ ಬರುತ್ತವೆ. ವಿಶ್ವವಿದ್ಯಾಲಯದ ಸಾಮಾನ್ಯ ಪುಸ್ತಕ ಭಂಡಾರ
ಂದ ಸುಮಾರು ೫೦೦,೦೦೦ ಪುಸ್ತಕಗಳನ್ನು ಈ ಪುಸ್ತಕ ಭಂಡಾರಕ್ಕೆ
ಗರ್ಾಯಿಸಲಾಗಿದೆ.

ಅಲ್ಲದೆ, ಪತ್ರಿಕೋದ್ಯಮದ ವಿಷಯಗಳಲ್ಲಿ ಲೇಖನಗಳನ್ನು ತಯಾ
ಸಿ, ಈ ಶಾಲೆಯು ಪತ್ರಿಕೋದ್ಯೋಗಿಗಳಿಗೆ ಉಚಿತವಾಗಿ ಅವುಗಳ ಪ್ರತಿ
ಳನ್ನು ಹಂಚುತ್ತದೆ. ಈ ತನಕ ಇಂಥಹ ೧೫೦ ಲೇಖನ ಸಂಗ್ರಹಗಳು
ಪ್ರಕಟವಾಗಿವೆ.

ವಿದ್ಯಾರ್ಥಿ ವೇತನ, ಸಹಾಯಕ ವೇತನ, ಪಾರಿತೋಷಿಕ, ವಿದ್ಯಾರ್ಥಿ
ಾಲಗಳು ಮತ್ತು ಕೆಲಸಗಳನ್ನೊದಗಿಸುವುದೇ ಮೊದಲಾದ ಆರ್ಥಿಕ
ಹಾಯಗಳು ವಿಶ್ವವಿದ್ಯಾಲಯದಿಂದ ಈ ಶಾಲೆಯ, ವಿದ್ಯಾರ್ಥಿಗಳಿಗೂ

ಕೊಡಲ್ಪಡುತ್ತವೆ. ಇತರ ಸಾಮಾನ್ಯ ವಿದ್ಯಾರ್ಥಿ ವೇತನಗಳಲ್ಲದೆ, ಈ ಶಾಲೆಯೇ ೧೨ ವಿಶೇಷ ವಿದ್ಯಾರ್ಥಿ ವೇತನಗಳನ್ನೂ ಬಹುಮಾನಗಳನ್ನೂ ಕೊಡುತ್ತದೆ.

ಹಣ ಸಹಾಯದ ಆವಶ್ಯಕತೆಯುಳ್ಳ ವಿದ್ಯಾರ್ಥಿಗಳಿಗೆ ವಿದ್ಯಾರ್ಥಿ ನಿಧಿ ಸಂಸ್ಥೆಗಳು ಸಾಲ ಕೊಡುತ್ತವೆ. ಮತ್ತೆ ವ್ಯಾಸಂಗ ಮಾಡುವಾಗಲೇ ತಮ್ಮ ಖರ್ಚಿನ ಹಣಕ್ಕಾಗಿ ದುಡಿಯಲು, ಉಪವೃತ್ತಿಯನ್ನು ಕಲ್ಪಿಸಿ ಕೊಡುವ ನೌಕರಿ ಸಂಸ್ಥೆಯೊಂದನ್ನೂ ವಿಶ್ವವಿದ್ಯಾಲಯವು ನಡೆಸುತ್ತಿದೆ.

ಅಲ್ಲದೆ ವಿದ್ಯಾರ್ಥಿಗಳು ಪರಸ್ಪರ ವಿಚಾರ ವಿನಿಮಯಗಳನ್ನು ಮಾಡಿ ಕೊಂಡು ತಮ್ಮೊಳಗೆ ಹಿತ ಸಂಬಂಧವನ್ನು ಬೆಳೆಸಲು ಅವಕಾಶವನ್ನುಂಟು ಮಾಡುವ ಅನೇಕ ವಿದ್ಯಾರ್ಥಿ ಸಂಸ್ಥೆ-ಸಂಘಗಳಿವೆ. ಇವು ವಿದ್ಯಾರ್ಥಿಗಳಿಗೆ ಸಾಕಷ್ಟು ಬೌದ್ಧಿಕ ಆಹಾರವನ್ನೂ ಒದಗಿಸುತ್ತವೆ.

**ಪತ್ರಿಕೋದ್ಯಮ ಸಪ್ತಾಹವು** ವಿಶ್ವವಿದ್ಯಾಲಯದ ಮುಖ್ಯವಾದ ಮತ್ತು ಜನಪ್ರಿಯವಾದ ವಾರ್ಷಿಕ ಉತ್ಸವ ಸಮಾರಂಭಗಳಲ್ಲೊಂದಾಗಿದೆ. ಅದನ್ನು ಪ್ರತಿವರುಷ ಮೇ ತಿಂಗಳ ಮೊದಲನೆ ವಾರದಲ್ಲಿ ಆಚರಿಸಲಾಗುತ್ತಿದೆ. ಈ ವಾರ್ಷಿಕೋತ್ಸವದಲ್ಲಿ ಅಮೇರಿಕದ ಅನೇಕ ಪ್ರಸಿದ್ಧ ವ್ಯಕ್ತಿಗಳೂ, ಪರ ದೇಶಗಳಿಂದ ಬಂದ ಪ್ರವಾಸಿಗಳೂ ಭಾಗವಹಿಸುತ್ತಾರೆ. ಸುಪ್ರಸಿದ್ಧ ಪತ್ರಿ ಕೋದ್ಯೋಗಿಗಳು ತಮ್ಮ ತಮ್ಮ ಅನುಭವಗಳಮೇಲೆ ರಸಮಯ ಉಪ ನ್ಯಾಸಗಳನ್ನೀಯುತ್ತಾರೆ. ಪತ್ರಿಕೋದ್ಯಮದ ಕೆಲಸದಲ್ಲಿ ವಿಶೇಷ ಪಾಂಡಿತ್ಯ ವನ್ನು ಪ್ರದರ್ಶಿಸಿದವರಿಗೆ ಪದಕಗಳ ಬಹುಮಾನವನ್ನೀಯಲಾಗುತ್ತದೆ. ಇದೇ ವಾರದಲ್ಲಿ ಅಮೇರಿಕದ ಅನೇಕ ಸಂಸ್ಥಾನಗಳಲ್ಲೂ ಅಲ್ಲಲ್ಲಿನ ಪತ್ರಿಕೋ ದ್ಯೋಗಿ ಸಂಸ್ಥೆಗಳು ತಮ್ಮ ತಮ್ಮ ವಾರ್ಷಿಕ ಸಭೆಗಳನ್ನು ನಡೆಸುವುವು.

ಮಿಸ್ಸೋರಿಯ ಪತ್ರಿಕೋದ್ಯಮ ಶಾಲೆ ಪ್ರಪಂಚದ ಎಲ್ಲಾ ಕಡೆಗಳ ವಿದ್ಯಾರ್ಥಿಗಳನ್ನೂ ಆಕರ್ಷಿಸುತ್ತದೆ. ಪ್ರತಿ ವರುಷವೂ ನೂರಿನ್ನೂರು ವಿದೇಶೀ ವಿದ್ಯಾರ್ಥಿಗಳು ಇಲ್ಲಿ ಪತ್ರಿಕೋದ್ಯಮ ಶಿಕ್ಷಣವನ್ನು ಪಡೆಯುತ್ತಾರೆ.

# ಪತ್ರಿಕೋದ್ಯೋಗಿಯ ಪ್ರತಿಜ್ಞೆ

(ಅಮೇರಿಕದ ಮಿಸ್ಸೋರಿ ವಿಶ್ವವಿದ್ಯಾನಿಲಯದಲ್ಲಿಯ ಪತ್ರಿಕೋದ್ಯೋಗಕಲಾಶಾಲೆಯ ಸ್ಥಾಪಕನಾದ ವಾಲ್ಟರ್ ವಿಲಿಯಮ್ಸ್ ಎಂಬ ಮಹಾಶಯನು ರಚಿಸಿದ ಈ ಪ್ರತಿಜ್ಞೆಯನ್ನು ಮಿಸ್ಸೋರಿ ವಿಶ್ವವಿದ್ಯಾನಿಲಯದ ಜೆ. ಎಚ್. ನೆಫ್ ಜ್ಞಾಪಕ ಸಭಾಮಂದಿರದ ಒಂದು ಗೋಡೆಯಲ್ಲಿ ಸ್ಥಾಪಿಸಿರುವ ಕಂಚಿನ ಹಲಗೆಯ ಮೇಲೆ ಕೆತ್ತಿದೆ.)

(೧) ನಾನು ನಂಬಿದ್ದೇನೆ– ಪತ್ರಿಕೋದ್ಯೋಗವು ಯೋಗ್ಯವೃತ್ತಿಯೆಂದು.

(೨) ನಾನು ನಂಬಿದ್ದೇನೆ—ಸಾರ್ವಜನಿಕ ಪತ್ರಿಕೆಯು ಸರ್ವಜನಕ್ಕೂ ಸೇರಿದ ನ್ಯಾಸಸ್ವತ್ತು (Trust) ಎಂದು ; ಅದಕ್ಕೆ ಸಂಬಂಧಪಟ್ಟವರೆಲ್ಲ, ತಮತಮಗೆ ಸೇರಿರುವ ಜವಾಬ್ದಾರಿಯು ವಿಸ್ತಾರದಮಟ್ಟಿಗೆ, ಮಹಾಜನಪರರಾದ ನ್ಯಾಸಪಾಲಕರೆಂದು ; ಸಾರ್ವಜನಿಕ ಸೇವೆಗಿಂತ ಅಲ್ಪವಾದ ಸೇವೆಯನ್ನು ಮಾಡಲೊಪ್ಪುವುದು ಸಾರ್ವಜನಿಕ ನ್ಯಾಸವಿಷಯದಲ್ಲಿ ದ್ರೋಹವೆಂದು.

(೩) ನಾನು ನಂಬಿದ್ದೇನೆ—ಸರಳವಾದ ವಿಚಾರ ಕ್ರಮ, ಸರಳವಾದ ನಿರೂಪಣೆ,—ನಿಷ್ಕರ್ಷೆ, ನ್ಯಾಯನಿಷ್ಠೆ—ಇವು ಒಳ್ಳೆಯ ಪತ್ರಿಕೋದ್ಯೋಗಿಯ ಮೂಲ ಲಕ್ಷಣಗಳೆಂದು.

(೪) ನಾನು ನಂಬಿದ್ದೇನೆ—ಪತ್ರಿಕೋದ್ಯೋಗಿಯು ತನ್ನ ಹೃದಯದಲ್ಲಿ ತಾನು ನಿಜವೆಂದು ದೃಢಪಡಿಸಿಕೊಂಡದ್ದನ್ನೇ ಬರೆಯಬೇಕೆಂದು.

(೫) ನಾನು ನಂಬಿದ್ದೇನೆ—ಸಮಾಜಕ್ಷೇಮ ಒಂದರ ಹೊರತು ಮತ್ತಾವ ಕಾರಣಕ್ಕಾಗಿಯೂ ಪತ್ರಿಕಾಕರ್ತನು ಯಾವ ವರ್ತಮಾನವನ್ನೂ ಮುಚ್ಚಿಡುವುದು ಯುಕ್ತವಲ್ಲವೆಂದು.

## ಪತ್ರಿಕೋದ್ಯೋಗಿಯ ಪ್ರತಿಜ್ಞೆ

(೬) ನಾನು ನಂಬಿದ್ದೇನೆ—ದೊಡ್ಡ ಮನುಷ್ಯನಾದವನು ನುಡಿಯ ಬಾರದಂಥ ಮಾತನ್ನು ಪತ್ರಿಕೋದ್ಯೋಗಿಯು ಬರೆಯಬಾರದೆಂದು; ಅವನು ಇತರರ ಜೇಬಿನಿಂದ ಹೇಗೋ, ತನ್ನ ಜೇಬಿನಿಂದಲೂ ಹಾಗೆ ಲಂಚವನ್ನು ವರ್ಜಿಸತಕ್ಕದ್ದೆಂದು ; ಅವನು ಇನ್ನೊಬ್ಬರ ಪ್ರೇರಣೆಯಿಂದ ಅಥವಾ ಲಾಭ ಕಾರಣದಿಂದ ತಾನು ನಡೆದುಕೊಂಡೆನೆಂದು ಹೇಳಿ ತನ್ನ ಸ್ವಂತ ಜವಾಬ್ದಾರಿ ಯನ್ನು ತಪ್ಪಿಸಿಕೊಳ್ಳಲಾಗದೆಂದು.

(೭) ನಾನು ನಂಬಿದ್ದೇನೆ—ವ್ಯಾಪಾರದ ಪ್ರಕಟನೆಯಾಗಲಿ, ವರ್ತ ಮಾನವಾಗಲಿ, ಸಂಪಾದಕೀಯ ಲೇಖನವಾಗಲಿ, ಅದು ವಾಚಕರ ಪರಮೋತ್ತಮ ಹಿತಕ್ಕೆ ಸಾಧಕ ವಾಗಿರಬೇಕೆಂದು ; ಸತ್ಯದ ಮತ್ತು ನಿರ್ಮಲತೆಯ ಏಕರೀತಿಯ ಪ್ರಮಾಣವು ಎಲ್ಲರ ವಿಷಯದಲ್ಲೂ ಬೆಳಗು ವಂತಿರಬೇಕೆಂದು ; ಒಳ್ಳೆಯ ಪತ್ರಿಕೋದ್ಯೋಗದ ಉತ್ಕೃಷ್ಟ ನಿದರ್ಶನವು ಅದರಿಂದಾಗುತ್ತಿರುವ ಮಹಾ ಜನಸೇವೆಯ ಮೇಲ್ಮಟ್ಟದಲ್ಲಿ ಕಾಣಬರುತ್ತದೆ ಯೆಂದು.

(೮) ನಾನು ನಂಬಿದ್ದೇನೆ—ಯಾವ ಬಗೆಯ ಪತ್ರಿಕೋದ್ಯೋಗವು ಅತ್ಯಂತ ಜಯಶಾಲಿಯೋ,—ಮತ್ತು ಎಂಥಾದ್ದಕ್ಕೆ ಜಯವು ಅತ್ಯಂತವಾಗಿ ಸಲ್ಲುತ್ತದೆಯೋ—ಅದು ದೇವರಲ್ಲಿ ಭಯವೂ ಮನುಷ್ಯನಲ್ಲಿ ಗೌರವವೂ ಉಳ್ಳದ್ದೆಂದು ; ಅದು ಗಟ್ಟಿ ಸ್ವಾತಂತ್ರ್ಯವುಳ್ಳದ್ದೆಂದು, ಅದು ಅಭಿಪ್ರಾಯದ ಗರ್ವದಿಂದಲಾಗಲಿ ಅಧಿಕಾರದ ಆಶೆಯಿಂದಲಾಗಲಿ ಅಲುಗಾಡದೆಂದು; ಅದು ಹಿತಕಾರಕವೂ ಸಹನೆಯುಳ್ಳದ್ದೂ ಆಗಿರುವುದೆಂದು ; ಆದರೂ ಅದು ಎಂದಿಗೂ ಅಜಾಗ್ರತೆಯಿಂದ ನಡೆಯುವುದಿಲ್ಲವೆಂದು ; ಅದು ಆತ್ಮಸಂಯಮವುಳ್ಳದ್ದೂ ತಾಳ್ಮೆಯುಳ್ಳದ್ದೂ ವಾಚಕರಲ್ಲಿ ಗೌರವವುಳ್ಳದ್ದೂ ಅಂತೆಯೇ ಅಂಜಿಕೆಯಿ ಲ್ಲದ್ದೂ ಆಗಿರುವುದೆಂದು ; ಅನ್ಯಾಯವನ್ನು ಕಂಡೊಡನೆ ಅದು ಕೆರಳುವು ದೆಂದು ; ಅದು ಪ್ರತಿಷ್ಠಾವಂತರ ಪ್ರೇರಣೆಯಿಂದಲಾಗಲಿ ದೊಂಬಿಕೂಟದ ಕೂಗುಗಳಿಂದಲಾಗಲಿ ದಾರಿ ತಪ್ಪಲಾರದೆಂದು; ಅದು ಪ್ರತಿಯೊಬ್ಬ ವ್ಯಕ್ತಿಗೂ

ಒಂದು ಜೀವನಾವಕಾಶವನ್ನು ಕೊಡಿಸುವುದೆಂದು; ಮತ್ತು ಕಾನೂನು (ಶಾಸನ) ಗಳಿಂದಲೂ ಪ್ರಾಮಾಣಿಕ ಮಟ್ಟದ ಸಂಬಧದಿಂದಲೂ ಮತ್ತು ಮಾನವ ಸೋದರತ್ವದ ಅಂಗೀಕಾರದಿಂದಲೂ ಸಾಧ್ಯವಾಗುವಷ್ಟರ ಮಟ್ಟಿಗೆ ಆ ಅವಕಾಶವನ್ನು ಸರ್ವಸಮಾನವಾಗಿ ದೊರಕಿಸ ಯತ್ನಿಸುವುದೆಂದು; ಅದು ಆಳವಾದ ಸ್ವದೇಶ ಪ್ರೇಮವುಳ್ಳದ್ದೆಂದು; ಹಾಗೆಯೇ ಅದು ದೇಶ ವಿದೇಶ ಸೌಹಾರ್ದವನ್ನೂ ಸಕಲಲೊಕ ಸಹಭಾಗಿತೆಯನ್ನು ಅಭಿವೃದ್ಧಿ ಪಡಿಸುವು ದೆಂದು; ಅಂಥಾದ್ದು ಇಂದಿನ ಪ್ರಪಂಚಕ್ಕಾಗಿ, ನಡೆಯುವ ಮಾನವ ಸಮಷ್ಟಿಯ ಪತ್ರಿಕೋದ್ಯೋಗವೆಂದು;—ಹೀಗೆಂದು ನಾನು ನಂಬಿದ್ದೇನೆ.

(ಗೋಖಲೆ ಸಾರ್ವಜನಿಕ ವಿಚಾರ ಸಂಸ್ಥೆಯ ಕನ್ನಡ ಮಾಸಪತ್ರಿಕೆ 'ಸಾರ್ವಜನಿಕ ದಿಂದ ಆಯ್ದುಕೊಳ್ಳಲಾಗಿದೆ.)

---

## ಕಾಲೇಜಿನ ಕೊನೆಯ ದಿನಗಳು

ತಮವೆಂಬ ಬಿರುಗಾಳಿಗೆ ಸಿಕ್ಕಿ ನನ್ನ ಜೀವನದ ಹಡಗು ಶಾಂತಿ ಸಮುದ್ರವನ್ನು ದಾಟಿ ದಡ ಮುಟ್ಟುವ ಚಿನ್ಹೆಗಳು ಕಾಣಬಂದವು. ಆದರೂ ಮಧ್ಯೆ ಬಿರುಸಾದ ಅಲೆಗಳು ಎಲ್ಲಿ ಬಂದು ನನ್ನ ಜೀವನದ ಹಡಗನ್ನು ಮುಳುಗಿಸುವುದೋ ಎಂಬ ಹೆದರಿಕೆ ಇತ್ತು.

ಕಾಲೇಜಿಗೆ ಸೇರಿದೊಡನೆ ನನ್ನ ಪಾಠ ಕ್ರಮವನ್ನು ನಿರ್ಧರಿಸಿಕೊಂಡು ಪತ್ರಿಕೋದ್ಯಮದಲ್ಲಿ ಎಂ.ಎ., ಪರೀಕ್ಷೆಗೆ ಓದಲು ಪ್ರಾರಂಭ ಮಾಡಿದೆನು. ಎಂ.ಎ. ಪರೀಕ್ಷೆಗಾಗಿ ನಾನೊಂದು ವ್ಯಾಸವನ್ನು ಬರೆಯಬೇಕಾಗಿತ್ತು. **"ಭಾರತಕ್ಕೊಂದು ರಾಷ್ಟ್ರೀಯ ಪತ್ರಿಕೋದ್ಯಮ"**(A National press for India) ಎಂಬ ವಿಷಯವನ್ನು ಆರಿಸಿಕೊಂಡು, ಭಾರತದಿಂದ ಸಾಹಿತ್ಯ

ವನ್ನು ತರಿಸಿಕೊಂಡು, ಆ ವ್ಯಾಸವನ್ನು ಬರೆದೆನು. ಡಾ|| ಫ್ರ್ಯಾಂಕ್ ಲ್ಯೂಥರ್ ಮಾಟ್ ಎನ್ನುವವರು ನಮ್ಮ ಹಿರಿಯ ಪ್ರಾಧ್ಯಾಪಕರು ಮತ್ತು ಮಿಸ್ಸೋರಿ ವಿಶ್ವವಿದ್ಯಾನಿಲಯದ ಪತ್ರಿಕೋದ್ಯಮ ಶಾಲೆಯ ಯಜಮಾನರು. ತುಂಬಾ ಒಳ್ಳೆಯವರು. ಭಾರತೀಯ ವಿದ್ಯಾರ್ಥಿಗಳನ್ನು ಕಂಡರೆ ವಿಶೇಷ ಗೌರವ. ಅವರು ಅನೇಕ ಪುಸ್ತಕಗಳನ್ನು ಬರೆದು ಬಹುಮಾನಿತರಾಗಿದ್ದಾರೆ. "**ಅಮೇರಿಕದ ಪತ್ರಿಕೋದ್ಯಮ**" ಮತ್ತು "**ಅಮೇರಿಕದ ವಾರ ಮತ್ತು ಮಾಸ ಪತ್ರಿಕೆಗಳ ಚರಿತ್ರೆ**" ಎಂಬ ಪ್ರೌಢ ಗ್ರಂಥಗಳನ್ನು ಬರೆದು, ನೋಬೆಲ್ ಪಾರಿತೋಷಕಕ್ಕೆ ಸರಿಸಮಾನವಾದ ಪಲಿಟ್ಜರ್ ಬಹುಮಾನವನ್ನು ಪಡೆದಿದ್ದಾರೆ.

ನಮ್ಮ ಕಾಲೇಜು ಪತ್ರಿಕೋದ್ಯಮಕ್ಕೆ ಹೆಸರಾದದ್ದು. ಅಮೇರಿಕೆಯ ವಿಶ್ವವಿದ್ಯಾನಿಲಯಗಳಲ್ಲೆಲ್ಲಾ ಮೊದಲು ಪತ್ರಿಕೋದ್ಯಮವನ್ನು ಅಭ್ಯಾಸ ವಿಷಯವಾಗಿ ಹೇಳಿಕೊಡಲು ಪ್ರಾರಂಭಮಾಡಿದ್ದು ಇಲ್ಲಿಯೇ. ಇಲ್ಲಿ ಸುಮಾರು ೧೫೦೦ ವಿದ್ಯಾರ್ಥಿಗಳು ಬರೀ ಪತ್ರಿಕೋದ್ಯಮವನ್ನೇ ಓದುತ್ತಿದ್ದಾರೆ. ನಾನಾ ದೇಶಗಳಿಂದ ಈ ವಿಷಯವನ್ನು ಓದಲು ವಿದ್ಯಾರ್ಥಿಗಳು ಇಲ್ಲಿಗೆ ಬಂದಿದ್ದಾರೆ. ಬೆಳಿಗ್ಗೆ ೭-೩೦ ರಿಂದ ಸಾಯಂಕಾಲ ೬ ಗಂಟೆಯ ವರೆವಿಗೂ ತರಗತಿಗಳು ನಡೆಯುತ್ತಿರುತ್ತವೆ. ಇಲ್ಲಿ ನಮಗೆ ವಾರಕ್ಕೊಮ್ಮೆ ಪರೀಕ್ಷೆ. ಪರೀಕ್ಷೆ ಇಂಥಾ ದಿವಸವೆಂದು ಹೇಳುವುದೇ ಇಲ್ಲ. ವಿಷಯವನ್ನೂ ತಿಳಿಸುವುದಿಲ್ಲ. ನಾವು ಎಲ್ಲದಕ್ಕೂ ತಯಾರಾಗಿರಬೇಕು. ಈ ಪರೀಕ್ಷೆಗಳಲ್ಲಿ ಬಂದ ನಂಬರುಗಳೂ ಕೊನೆಯ ಪರೀಕ್ಷೆಗೆ ಸಹಾಯ ಮಾಡುತ್ತವೆ. ಆದ್ದರಿಂದ ನಾವು ತುಂಬಾ ಜಾಗರೂಕರಾಗಿರಬೇಕಾಗುತ್ತದೆ. ಪತ್ರಿದಿನವೂ ಏನಾದರೊಂದು ಬರೆಯಲು ಕೊಟ್ಟಿರುತ್ತಾರೆ. ಆ ದಿನದ ಪಾಠ ಅಂದೇ ಓದಿಕೊಳ್ಳದಿದ್ದರೆ ತುಂಬಾ ಕಷ್ಟ.

ಕಾಲೇಜಿಗೆ ಬಿಡುವಿದ್ದಾಗಲೆಲ್ಲಾ ನಾನು ಅಕ್ಕಪಕ್ಕದ ನಗರಗಳನ್ನು ಮತ್ತು ಶ್ರೇಷ್ಠ ವ್ಯಕ್ತಿಗಳನ್ನೂ ನೋಡಿಕೊಂಡು ಬರುತ್ತಿದ್ದೆ. ಅಮೇರಿಕದ

ಉಪಾಧ್ಯಕ್ಷರಾಗಿದ್ದ **ಹೆನ್ರಿ ವಾಲೇಸರು** ಸೆಂಟ್ ಲೂಯಿಸ್ ಪಟ್ಟಣಕ್ಕೆ ಬಂದಿದ್ದರು. ೧೯೪೭ನೇ ಇಸ್ವಿ ನವೆಂಬರ್ ೯ಕ್ಕೆ ಹೆನ್ರಿ ವಾಲೇಸ್‌ರನ್ನು ಭೇಟಿ ಮಾಡಿದೆ. ನನ್ನ ಜೊತೆಗೆ ಜಗದೀಶಚಂದ್ರ ಅರೋರಾ ಎನ್ನುವ ಭಾರತೀಯ ವಿದ್ಯಾರ್ಥಿ ಗೆಳೆಯರೂ ಬಂದಿದ್ದರು. ಕೊಲಂಬಿಯಾದಿಂದ ವಿದ್ಯಾರ್ಥಿ ತಂಡವೊಂದು ಸ್ಪೆಷಲ್ ಬಸ್ಸು ಮಾಡಿಕೊಂಡು ಬಂದಿತ್ತು. ಸೆಂಟ್ ಲೂಯಿಸ್‌ನ **ಸ್ಟ್ಯಾಟ್ಲರ್** ಹೊಟೇಲಿನಲ್ಲಿ **೧೨೧೬**ನೇ ನಂಬರಿನ ಕೊಠಡಿಯಲ್ಲಿ ಪತ್ರಿಕಾ ಸಂದರ್ಶನ ನಡೆಯಿತು. ನಾವೂ ಆಹ್ವಾನಿತರಾಗಿದ್ದೆವು. ವಾಲೇಸ್ ಆಗತಾನೆ ಪ್ಯಾಲೆಸ್ಟೈನಿಗೆ ಹೋಗಿ ಬಂದಿದ್ದರು. ಆ ದೇಶಕ್ಕೆ ಸಂಬಂಧಪಟ್ಟಂತೆ ಪ್ರಶ್ನೋತ್ತರ ಪ್ರಾರಂಭವಾಯಿತು. ನನ್ನ ಗಾಂಧೀ ಟೋಪಿಯನ್ನು ನೋಡಿ "ಗಾಂಧೀ ದೇಶದಿಂದ ಬಂದವರೊಬ್ಬರಿದ್ದಾರೆ, ಇಲ್ಲಿ" ಎಂದು ಉದ್ಗಾರ ತೆಗೆದರು. "ಗಾಂಧೀಜಿಯವರು ಪ್ರಪಂಚದ ಶಾಂತಿಗೆ ಇತ್ತ ಪರಿಹಾರಗಳ ಬಗ್ಗೆ ನೀವು ಗಾಂಧೀ ಸಾಹಿತ್ಯ ಓದಿದ್ದೀರಾ" ಎಂದು ಕೇಳಿದ್ದಕ್ಕೆ, ಗಾಂಧೀಜಿಯ ಬಗ್ಗೆ ತಮಗೆ ವಿಶೇಷವಾದ ಗೌರವವಿರುವುದಾಗಿಯೂ ಆದರೆ ಅವರ ತತ್ವಗಳನ್ನು ತಾವು ಅಭ್ಯಾಸ ಮಾಡಿಲ್ಲವೆಂದೂ ತಿಳಿಸಿದರು. ಹಿಂಸೆಯನ್ನು ತೊಡೆದುಹಾಕುವುದು ಅಹಿಂಸೆಯಿಂದ ಸಾಧ್ಯ ಎಂದು ಗಾಂಧೀಜಿ ಹೇಳಿದ್ದಾರಲ್ಲಾ, ಅದರ ಬಗ್ಗೆ ತಮ್ಮ ಪ್ರತಿಕ್ರಿಯೆ ಏನು ಎಂದು ಕೇಳಿದ್ದಕ್ಕೆ, ಅದನ್ನು ನಾನು ಒಪ್ಪಲಾರೆ ಎಂದುಬಿಟ್ಟರು.

ಆಗ ವಾಲೇಸ್ ತನ್ನ ಪಕ್ಷಕ್ಕೆ ಜನ ಕಟ್ಟುತ್ತಿದ್ದರು. ಅವರ ಚಲನವಲನಗಳನ್ನು ನೋಡಿ, ವಿರುದ್ಧ ಪಕ್ಷದವರು ಅವರನ್ನು "ಸ್ವಲ್ಪ ಕೆಂಪು" ಎನ್ನುತ್ತಿದ್ದರು. ಆ ಸಂಜೆ ಸೆಂಟ್ ಲೂಯಿಸ್‌ನ ನಗರ ಭವನದಲ್ಲಿ ಒಂದು ಬಹಿರಂಗ ಸಭೆ ಸೇರಿತ್ತು. ವಾಲೇಸ್ ಮಾತನಾಡಿದರು. ೨೦,೦೦೦ ಜನ ಸೇರಿದ್ದರು. ಅವರ ಭಾಷಣಾನಂತರ ಅವರ ಪಕ್ಷದ ಕೆಲಸಕ್ಕೆ ಅಲ್ಲಿ ನೆರೆದಿದ್ದ ಜನ ೧೦,೦೦೦ ಡಾಲರು ಕೂಡಿಸಿಕೊಟ್ಟರು.

ಸೆಂಟ್ ಲೂಯಿಸ್‌ನಿಂದ ಬಂದಕೂಡಲೇ **ಶ್ರೀಮತಿ ಜೆನ್ನಿ ಫ್ಲೆಮಿಂಗ್ಸ್**

ಎಂಬುವರು ನನಗೊಂದು ಔತಣ-ಕೊಟ್ಟು ಕಾಗದ ಬರೆದಿದ್ದರು. ಅಮೇರಿಕದಲ್ಲಿ '**ವಂದನಾ ಸಮರ್ಪಣ**' (Thanks Giving Day) ದಿನವನ್ನು ಬಹಳ ವಿಜೃಂಭಣೆಯಿಂದ ಆಚರಿಸುತ್ತಾರೆ. ಭಾರತೀಯ ವಿದ್ಯಾರ್ಥಿಗಳೆಲ್ಲರಿಗೂ ಆಕೆ ಊಟಕ್ಕೆ ಆಹ್ವಾನಿಸಿದ್ದರು. ಫ್ಲೆಮಿಂಗ್ಸ್ ಭಾರತದಲ್ಲಿ, ನಾಗಪುರದ ಗುಡ್ಡಗಾಡಿನ ಜನರ ಅಭಿವೃದ್ಧಿಯ ಬಗ್ಗೆ ೪೦ ವರ್ಷ ದುಡಿದ ಅಮೇರಿಕದ ಮಹಿಳೆ.

'ವಂದನಾ ಸಮರ್ಪಣ' ದಿನದಲ್ಲೇ ಭಾರತೀಯ ವಿದ್ಯಾರ್ಥಿಗಳೆಲ್ಲರೂ ಸೇರಿ, ನನ್ನನ್ನು ಅಲ್ಲಿಯ ಭಾರತೀಯ ವಿದ್ಯಾರ್ಥಿ ಸಂಘದ ಕಾರ್ಯದರ್ಶಿಯನ್ನಾಗಿ ಚುನಾಯಿಸಿದರು. ತಕ್ಷಣವೇ ನಾನು ಕಾರ್ಯೋನ್ಮುಖನಾಗಿ, ಪ್ರಪಂಚ ವಿದ್ಯಾರ್ಥಿ ಕಾಂಗ್ರೆಸ್ಸಿನ ಕಾರ್ಯದರ್ಶಿಗಳಾಗಿದ್ದ ಭಾರತೀಯರಾದ ಡಾ|| ಪ್ಯಾಲ್ಕಂ ಆದಿಶೇಷಯ್ಯನವರಿಂದ ಸಂಘದ ಆರಂಭ ಭಾಷಣ ಮಾಡಿಸಿದೆನು.

ಚಳಿ, ಮಂಜು ಪ್ರಾರಂಭವಾಗಿಬಿಟ್ಟಿತ್ತು. ಡಿಸೆಂಬರ್ ರಜೆಯನ್ನು ರಾಜಧಾನಿಯಾದ ವಾಷಿಂಗ್ಟನ್ನಿನಲ್ಲಿ ಕಳೆಯಬೇಕೆಂದು ನಿರ್ಧರಿಸಿ, ಬಸ್ಸಿನಲ್ಲಿ ೧೫೦೦ ಮೈಲಿ ಪ್ರವಾಸ ಹೊರಟೆನು. **ಅಧ್ಯಕ್ಷ ಟ್ರೂಮನ್ನರನ್ನು ಭೇಟಿ** ಮಾಡಲು ಮೊದಲೇ ಅಪ್ಪಣೆ ದೊರಕಿತ್ತು. ಡಿಸೆಂಬರ್ ೨೪ನೇ ತಾರೀಖು ಪ್ರಾತಃಕಾಲ ಇತರ ವಿದೇಶಿ ಪತ್ರಿಕೋದ್ಯಮಿಗಳೊಂದಿಗೆ ಶ್ವೇತ ಭವನದಲ್ಲಿ ಅಧ್ಯಕ್ಷ ಟ್ರೂಮನ್ನರನ್ನು ಭೇಟಿಮಾಡಿದೆನು

ವಾಷಿಂಗ್ಟನ್ನಿನಿಂದ ನ್ಯೂಯಾರ್ಕಿಗೆ ಪ್ರಯಾಣ ಬೆಳೆಯಿಸಿ, ಅಲ್ಲಿಯ ಜನ ಡಿಸೆಂಬರ್ ೩೧ನೇ ತಾರೀಖನ್ನು ಕಳೆಯುವುದನ್ನು ಟೈಮ್ಸ್ ಚೌಕದಲ್ಲಿ ನಿಂತು ನೋಡಿ, ನಾನೂ ಅವರೊಂದಿಗೆ ಆನಂದಪಟ್ಟೆನು.

೧೯೪೮ನೇ ಇಸ್ವಿ ಜನವರಿ ೩ನೇ ತಾರೀಖು ನನ್ನ ಕಾಲೇಜಿನ ಎರಡನೆಯ ಟರ್ಮು ಪ್ರಾರಂಭವಾಯಿತು. ಇನ್ನೇನು ಅಭ್ಯಾಸ ಪ್ರಾರಂಭ ಮಾಡಬೇಕೆನ್ನುವಷ್ಟರಲ್ಲಿಯೇ, ಗಾಂಧೀಜಿಯ ಘೋರ ಉಪವಾಸದ ಸುದ್ದಿ ಬಂತು.

ಅದನ್ನು ಅವರು ಮುಕ್ತಾಯಮಾಡಿ, ಚೇತರಿಸಿಕೊಳ್ಳುವಷ್ಟರಲ್ಲಿಯೇ ಅವರ ನಿಧನದ ಸುದ್ದಿಯೂ ಬಂದಿತು. ಗಾಂಧೀಜಿ ಸಾವಿನಿಂದಾದ ದುಃಖದ ಬಗ್ಗೆ ಬೇರೊಂದು ಕಡೆ ಒಂದು ದೊಡ್ಡ ಅಧ್ಯಾಯವನ್ನೇ ಬರೆದಿದ್ದೇನೆ. ಇಲ್ಲಿ ಸಂಕ್ಷೇಪವಾಗಿ ಪುನಃ ಅದನ್ನೇ ತಿಳಿಸುತ್ತೇನೆ.

ಆಗ ವಿಪರೀತ ಛಳಿ ಅಲ್ಲಿ. ಮಂಜು ಹೇರಳವಾಗಿ ಬಿದ್ದಿರುತ್ತದೆ. ಅಂಥದುರಲ್ಲೇ ಫೆಬ್ರುವರಿ ೩ನೇ ತಾರೀಖು ಗಾಂಧೀಜಿಯ ಬಗ್ಗೆ ದುಃಖ ಸೂಚಕ ಸಭೆ ಸೇರಿಸಿದ್ದೆವು. ಭಾರತೀಯ ವಿದ್ಯಾರ್ಥಿ ಸಂಘ, ಅಂತರ ರಾಷ್ಟ್ರೀಯ ಸಂಘ, ಜೊತೆಗೆ ಕೊಲಂಬಿಯಾದ ಸಾರ್ವಜನಿಕರು ಎಲ್ಲರೂ ಸೇರಿ ಈ ಸಭೆಯನ್ನು ಕರೆದಿದ್ದೆವು, ನಮ್ಮ ವಿಶ್ವವಿದ್ಯಾನಿಲಯದ ಉಪ ಸ್ಥಾನಪತಿಗಳಾದ ಡಾ|| ಥಾಮಸ್ ಎ. ಬ್ರ್ಯಾಡಿಯವರು ಅಧ್ಯಕ್ಷತೆ ವಹಿಸಿ, ಗಾಂಧೀಜಿಯ ಭಾವಚಿತ್ರ ಅನಾವರಣ ಮಾಡಿದರು. ಗಾಂಧೀಜಿಯ ಭಕ್ತರಾದ ಪ್ರೊ|| ಜೆಸ್ಸಿ ರೆಂಚರು ಗಾಂಧೀಜಿಯ ಬಗ್ಗೆ ಮಾತನಾಡಿದರು. ಭಾರತೀಯರ ಪರವಾಗಿ ಗಾಂಧೀಜಿಯ ಮೇಲೆ ಚರಮ ಸಂದೇಶ ಓದಿ, ಬಾಪುವಿನ ಬಗ್ಗೆ ನಾನು ಮಾತನಾಡಿದೆ. ಕೊರೆಯುವ ಚಳಿಯನ್ನೂ ಲೆಕ್ಕಿಸದೆ ಅಲ್ಲಿಯ ಜನರು, ಗಾಂಧೀಜಿಗೆ ಗೌರವ ತೋರಿಸಲು ಬಂದಿದ್ದರು.

ಫೆಬ್ರವರಿ ೧೯ನೇ ತಾರೀಖಿನ ದಿನ ನವದೆಹಲಿಯಿಂದ ನನಗೊಂದು ಲಕ್ಕೋಟೆ ಬಂತು. ನಾನದನ್ನು ನಿರೀಕ್ಷಿಸಿರಲಿಲ್ಲ. ಶ್ರೀ ರಂಗನಾಥ ರಾಮಚಂದ್ರ ದಿವಾಕರರು ಅದನ್ನು ಕಳುಹಿಸಿದ್ದರು. ಆ ಲಕ್ಕೋಟೆ ಸ್ವಲ್ಪ ದಪ್ಪವಾಗಿತ್ತು. ಅದನ್ನು ಒಡೆದೆ, ಕಾಗದವಿತ್ತು. ಕಾಗದವನ್ನು ಇನ್ನೊಂದು ಸಣ್ಣ ಲಕ್ಕೋಟೆಗೆ ಸುತ್ತಿತ್ತು. ಆ ಲಕ್ಕೋಟೆಯಲ್ಲಿ ಭಾರವಾದ ವಸ್ತುವಿತ್ತು. ಒಣಗಿದ ಹೂವಿನ ದಳಗಳು ತೆಳ್ಳನೆ ಲಕ್ಕೋಟೆಯ ಒಳಗಿಂದ ಕಾಣತೊಡಗಿದವು. ಕಾಗದ ಓದುವ ಅವಸರಕ್ಕಿಂತ ಆ ಲಕ್ಕೋಟೆಯಲ್ಲಿ ಏನಿರುವುದೆಂದು ನೋಡುವ ಕುತೂಹಲ ಜಾಸ್ತಿಯಾಗಿತ್ತು. ಕಾಗದವನ್ನು ಓದಿದೆ. '' **ನನ್ನ ನಿನ್ನ ಬಾಂಧವ್ಯದ ಕುರುಹೆಂದು ಪವಿತ್ರವಾದ ಗಾಂಧೀಜಿಯ**

**ಚಿತೆಯ ಮೇಲೇರಿಸಿದ ಹೂಗಳನ್ನೂ, ಅವರ ನಿರ್ಮಲವಾದ ಚಿತೆಯ ಭಸ್ಮವನ್ನೂ ಕಳುಹಿಸಿದ್ದೇನೆ, ಸ್ವೀಕರಿಸು. ಇತಿ ನಿನ್ನವ, ದಿವಾಕರ**—ಎಂದಿತ್ತು.

ನನ್ನ ಕೈ ಥರಥರನೆ ನಡುಗಿದವು. ಪವಿತ್ರವಾದ ಆ ವಸ್ತು ನನ್ನ ಕೈಯಲ್ಲಿ! ಪಕ್ಕದ ಮೇಜಿನ ಮೇಲಿಟ್ಟೆ. 'ಸಮಾಧಿ'ಯ ರೀತಿಯಲ್ಲಿ ಅಲಂಕಾರ ಮಾಡಿದೆ. ನನ್ನ ಭಾರತೀಯ ಗೆಳೆಯರಿಗೆ ತಿಳಿಸಿದೆ. ಊರಲ್ಲೆಲ್ಲಾ ಮಿಂಚಿನ ವೇಗದಲ್ಲಿ ಸುದ್ದಿ ಹರಡಿತು, ನೂರಾರು ಜನ ನನ್ನ ರೂಮಿಗೆ ಬರ ತೊಡಗಿದರು. ೩೦೧ ಮೆಲ್ಬೋರ್ನ್ ಬೀದಿಯು, ಕೆಲವು ದಿನ ಯಾತ್ರಾಸ್ಥಳ ಆದಂತೆಯೇ ಆಯಿತು. ಎಂತಹ ಗಂಭೀರ ಜನ ಅವರು! ಒಬ್ಬೊಬ್ಬರಾಗಿ ಬಂದು ತಮ್ಮ ಗೌರವವನ್ನು ಸೂಚಿಸಿ ಹೋಗುತ್ತಿದ್ದರು. ಕೆಲವರು ಹೂವು ಹಣ್ಣುಗಳನ್ನು ಸಮರ್ಪಿಸಿದರು. ಕೆಲವರು ಅಲ್ಲಿ ಬಂದು ಕುಳಿತು ಬೈಬಲ್‌ನ ಕೆಲವು ಶ್ಲೋಕಗಳನ್ನು ಹೇಳಿ. ತಮ್ಮ ಮನಸ್ಸನ್ನು ಸಂತೈಸಿಕೊಂಡರು. ಮತ್ತೆ ಕೆಲವರು ಏನೂ ಮಾತನಾಡದವರಾಗಿ, ಅಲ್ಲಿಯೇ ನಿಂತುಬಿಟ್ಟರು. ಆ ದೃಶ್ಯ ನೋಡಿದ ನಾನು ಚಕಿತನಾಗಿಹೋದೆ. ಗಾಂಧೀಜಿ ಪುಣ್ಯ ಪುರುಷರು. ನಮ್ಮ ನಾಡು ಭಾಗ್ಯನಾಡು, ಎಂದುಕೊಂಡೆ. ಅಮೇರಿಕಾದ ಪತ್ರಿಕಾ ಪ್ರತಿನಿಧಿಗಳನ್ನು ಕೇಳಬೇಕೆ! ಕೆಲವರು ಸುದ್ದಿ ಕೇಳಿ ಬರೆದುಕೊಂಡರು. ಇನ್ನು ಕೆಲವರು ಗಾಂಧೀಜಿಯ ಚಿತೆಯ ಭಸ್ಮದ ಚೀಲದ ಭಾವಚಿತ್ರವನ್ನು ತೆಗೆದುಕೊಂಡರು. ಮರುದಿನ ಪತ್ರಿಕೆಗಳಲ್ಲಿ, "ಅಮೇರಿಕಾದಲ್ಲಿ ಮಹಾತ್ಮರ ಅಸ್ಥಿಶೇಷವನ್ನು ಪಡೆದ ಭಾರತೀಯರಲ್ಲಿ ಪ್ರಥಮರು" (**First Indian to receive Mahatma's ashes in America**) ಎಂದು ಸುದ್ದಿ ಪ್ರಕಟಿಸಿದರು. ಆ ದಿನ ಸಂಜೆ ಪುನಃ ನನ್ನ ಕೊಠಡಿ ಯಾತ್ರಾಸ್ಥಳವೇ ಆಯಿತು.

ಗಾಂಧೀಜಿ ತೀರಿಕೊಂಡಾಗಿನಿಂದ ಮಿಸ್ಸೋರಿ ಸಂಸ್ಥಾನದಲ್ಲಿ ಗಾಂಧೀಜಿಯ ಮೇಲೆ ಅನೇಕ ಭಾಷಣಗಳನ್ನು ಮಾಡಿದೆ. ಅದರ ಪರಿಣಾಮವಾಗಿ, ಗಾಂಧೀಜಿಯ ಮೇಲೆ ಒಂದು ಚಿಕ್ಕ ಪುಸ್ತಕವನ್ನೇ ಬರೆದೆ. **ಶ್ರೀಯುತ**

**ದಿವಾಕರರು,** ಅದಕ್ಕೊಂದು ಮುನ್ನುಡಿಯನ್ನು ಬರೆದು ಕೊಟ್ಟು ಹರಸಿದರು. **ಪಂಡಿತ ಜವಹರಲಾಲರು,** ಗಾಂಧೀಜಿಯ ಮೇಲೆ ಪರಿಚಯ ಲೇಖನ ಬರೆದು ಕಳುಹಿಸಿಕೊಟ್ಟರು. " **ಮಹಾತ್ಮ ಗಾಂಧಿ ಮತ್ತು ಇತರ ಹುತಾತ್ಮರು**." ಎಂದು ಪುಸ್ತಕಕ್ಕೆ ನಾಮಕರಣಮಾಡಿದೆ. ಹದಿನೆಂಟು ತಿಂಗಳ ಅಮೇರಿಕೆಯ ಪ್ರವಾಸದ ಕೊನೆಯಲ್ಲಿ ನನ್ನ ಕಾಣಿಕೆಯಾಗಿ ದೇಶಕ್ಕೆ ಅರ್ಪಿಸಿದ ನನ್ನ ಸೇವೆಯದು. ಕನ್ನಡಿಗರ ಬೆಂಬಲದಿಂದ ಅಲ್ಲಿಗೆ ಹೋಗಿ ನನ್ನ ದೇಶದ ಬಗ್ಗೆ ನಾನು ಸ್ವಲ್ಪವಾದರೂ ಸೇವೆ ಸಲ್ಲಿಸಿದೆನಲ್ಲಾ ಎಂಬ ತೃಪ್ತಿ ನನಗಾಯಿತು.

ಮಾರ್ಚ್ ಕೊನೆಯ ವಾರದಲ್ಲಿ **ಈಸ್ಟರ್** ರಜಾ ದಿನಗಳು ಬಂದವು. ಆ ದಿನಗಳನ್ನು ಕಳೆಯಲು ಮಾರ್ಚ್ ೨೯ನೇ ತಾರೀಖು ಅಮೇರಿಕಾದ ಎರಡನೆಯ ಮುಖ್ಯ ನಗರವಾದ **ಚಿಕಾಗೋ** ನಗರಕ್ಕೆ ಭೇಟಿ ಕೊಟ್ಟಿದ್ದೆ. ಚಿಕಾಗೋ ನಗರ ಯಾವಾಗಲೂ ಹೊಗೆಯಿಂದ ತುಂಬಿಕೊಂಡಿರುವಂತೆ ಕಾಣುತ್ತದೆ. ಊರು ಬಹಳ ಗಲೀಜು. ಹುಬ್ಬಳ್ಳಿ ಜ್ಞಾಪಕಕ್ಕೆ ಬರುತ್ತದೆ. ಕಳ್ಳತನ, ದರೋಡೆ ಇವುಗಳಿಗೆ ಹೆಸರಾದ ಊರು ಚಿಕಾಗೋ.

ಚಿಕಾಗೋ ನಗರದಲ್ಲಿ ರಾಕ್‌ಫೆಲರ್ ಮಹಾಶಯ ಕಟ್ಟಿಸಿದ ಅಂತರ ರಾಷ್ಟ್ರೀಯ ಭವನವೊಂದಿದೆ. ಅಲ್ಲಿ ಆಗ ಸುಮಾರು ೫೦ ಜನ ಭಾರತೀಯ ವಿದ್ಯಾರ್ಥಿಗಳಿದ್ದರು. ಹನ್ನೆರಡು ಜನ ಕನ್ನಡಿಗ ವಿದ್ಯಾರ್ಥಿಗಳಿದ್ದರು. ನಾವು ಕನ್ನಡಿಗರೆಲ್ಲರೂ ಬೊಂಬಾಯಿನ ಕೈಗಾರಿಕಾ ನಿಪುಣರು **ಶ್ರೀ ಆರ್. ಡಿ. ಚಾರ್**‌ರವರ ಅಧ್ಯಕ್ಷತೆಯಲ್ಲಿ ಸಭೆ ಸೇರಿದ್ದೆವು. ಅಂದು ಬರೀ ಕನ್ನಡದಲ್ಲಿಯೇ ಮಾತನಾಡಿಕೊಂಡು ಮನೆಯ ನೆನಪನ್ನೂ ಮಾಡಿಕೊಂಡೆವು. ಶ್ರೀ ಚಾರ್‌ರವರು ಕನ್ನಡದ ಭಿಕ್ಷಾಪಾತ್ರೆಯನ್ನು ಅಲ್ಲಿಗೂ ಹಿಡಿದುಕೊಂಡು ಬಂದಿದ್ದರು. ಬೊಂಬಾಯಿನ ಮಾತುಂಗಾದಲ್ಲಿರುವ ಕನ್ನಡ ಶಾಲೆಯೊಂದಕ್ಕೆ ಹಣ ಬೇಕೆಂದು ಕೇಳಿದರು. ಕನ್ನಡಿಗರಾದ ನಾವು ಸಂತೋಷದಿಂದ ಒಂದು ನೂರು ರೂಪಾಯಿ ನಿಧಿಯನ್ನು ಎತ್ತಿ ಕೊಟ್ಟೆವು.

ಅಲ್ಲಿ ಬೆಂಗಳೂರಿನನಗರ ಸಭೆಯ ಇಂಜಿನಿಯರಾಗಿದ್ದ ಶ್ರೀ **ಮಾಣಿಕ್ಯಂ** ಎಂಬುವರು ಮನೆ ಮಾಡಿಕೊಂಡಿದ್ದರು. ಅವರು (Town Planning) "**ನಗರ ನಿರ್ಮಾಣ**" ಎಂಬ ವಿಷಯದಲ್ಲಿ ಅಭ್ಯಾಸ ನಡೆಸುತ್ತಿದ್ದರು. ಅವರ ಮನೆಗೆ " **ಮೈಸೂರು ಹೌಸ್** " ಎಂದು ನಾಮಕರಣ ಮಾಡಿದ್ದರು.

ಮೈಸೂರಿನವರಾರೇ ಬರಲಿ ಮೈಸೂರಿನ ರಸಕವಳ ಇಲ್ಲಿ ಸಿಕ್ಕುತ್ತಿತ್ತು.

ಏಪ್ರಿಲ್ ೯ನೆಯ ತಾರೀಖು ಇಲ್ಲಿ ಮಹಿಳೆಯರ ಸಮ್ಮೇಳನವೊಂದು ನಡೆಯಿತು. ಗಾಂಧೀಜಿಯ ಬಗ್ಗೆ ಮಾತನಾಡಬೇಕೆಂದು ನನ್ನನ್ನು ಕೇಳಿ ಕೊಂಡಿದ್ದರು. ಅಲ್ಲಿಯ ಜನ, ಅದರಲ್ಲೂ ಅಮೇರಿಕದ ಮಹಿಳೆಯರು ಗಾಂಧೀಜಿಯ ಬಗ್ಗೆ ಅಷ್ಟು ಆಸಕ್ತಿ ವಹಿಸುತ್ತಿದ್ದುದನ್ನು ಕಣ್ಣಾರೆ ಕಂಡೆ. ಅಂದಿನ ಸಭೆಯಲ್ಲಿ ನೆರೆದಿದ್ದ ಸಾವಿರಾರು ಮಹಿಳೆಯರು ಉತ್ಸುಕತೆಯಿಂದ ಗಾಂಧೀಜಿಯ ಬಗ್ಗೆ ಹಲವಾರು ಪ್ರಶ್ನೆಗಳನ್ನು ಕೇಳಿ ತಿಳಿದುಕೊಂಡರು.

ನಮ್ಮ ಎಂ.ಎ. ಪರೀಕ್ಷೆಯು ಮುಗಿಯಿತು. ಮೊದಲು 'ಬರವಣಿಗೆಯ ಪರೀಕ್ಷೆ ಮಾಡಿದರು. ಆಮೇಲೆ ಬಾಯಿ ಪರೀಕ್ಷೆಯಾಯಿತು. ಎರಡರ ಲ್ಲಿಯೂ ತೇರ್ಗಡೆಯಾದೆನು. ಪರೀಕ್ಷೆಯು ಮೇ ೨೭, ೨೮ ರಲ್ಲಿ ಮುಗಿ ಯಿತು. ಜೂನ್ ಒಂದನೆಯ ತಾರೀಖು ಫಲಿತಾಂಶ ಅಧಿಕೃತವಾಗಿ ಹೊರ ಬಿತ್ತು. ಜೂನ್ ನಾಲ್ಕನೆಯ ತಾರೀಖು ಪದವೀದಾನ ಸಮಾರಂಭವು ನಡೆಯಿತು. ಪದವೀದಾನ ಸಮಾರಂಭದಲ್ಲಿ ನಾನೂ ಭಾಗವಹಿಸಿದೆನು. ನನಗೆ ಇದೇ ಪ್ರಥಮ ಪದವೀದಾನ ಸಮಾರಂಭ. ಮೈಸೂರು ವಿಶ್ವವಿದ್ಯಾ. ನಿಲಯದ ಬಿ.ಎ. ಪದವಿ ನನಗೆ ದೊರಕಿದ್ದರೂ, ಆಗಸ್ಟ್ ಸ್ವಾತಂತ್ರ್ಯ ಚಳುವಳಿಯ ನಿಮಿತ್ತ ಆ ವರ್ಷ ಪದವೀದಾನ ಸಮಾರಂಭವನ್ನು ಮೈಸೂರಿ ನಲ್ಲಿ ನಡೆಸಲಿಲ್ಲ.

ಜೂನ್ ಎಂಟನೆಯ ತಾರೀಖು ಕೊಲಂಬಿಯಾನಗರವನ್ನು ಬಿಟ್ಟೆನು. ಮನಸ್ಸು ಭಾರವಾಗಿತ್ತು. ಆತ್ಮೀಯರಾಗಿ ಹೊಂದಿಕೊಂಡಿದ್ದ ಕೊಲಂಬಿ ಯಾದ ಜನರು ನನ್ನನ್ನು ಬೀಳ್ಕೊಡಲು ಬಸ್ಸು ನಿಲ್ದಾಣಕ್ಕೆ ಬಂದಿದ್ದರು.

ಆಪ್ತ ಗೆಳೆಯರಾದ **ಶ್ರೀ ಮತ್ತು ಶ್ರೀಮತಿ ಮೊಲ್ವಿನ್‌ಸ್ಪ್ರೈಡ್**ರವರು ಗದ್ಗದ ಕಂಠದಿಂದ ನನಗೆ ಸುಖಪ್ರಯಾಣವನ್ನು ಕೋರಿ ಪುನಃ ಕೊಲಂಬಿಯಾಕ್ಕೆ ಬರಬೇಕೆಂದು ಆಹ್ವಾನವಿತ್ತರು. ಆ ದಿನವೆಲ್ಲಾ ನನ್ನ ಪ್ರೊಫೆಸರುಗಳು, ಬಳಕೆಯಾಗಿದ್ದ ಊರಿನ ಜನರು ಮತ್ತು ಸ್ನೇಹಿತರುಗಳನ್ನು ನೋಡುವುದರಲ್ಲಿಯೇ ಕಾಲ ಕಳೆದೆ. ಒಂದು ವರ್ಷ ಈ ನಗರದಲ್ಲಿದ್ದು ಅಲ್ಲಿಯ ನಾನಾ ಚಟುವಟಿಕೆಗಳಲ್ಲಿ ಭಾಗ ತೆಗೆದುಕೊಂಡು ನನ್ನ ಜೀವನದಲ್ಲಿಯೇ ಚಿರಸ್ಥಾಯಿಯಾಗಿ ನಿಲ್ಲತಕ್ಕ ಆ ಊರಿನಲ್ಲಿ ಕಳೆದ ದಿನಗಳಿಗಾಗಿ ನೆನಪು ಬಿಚ್ಚಿಬಿಚ್ಚಿ ಬಂದಾಗ ಮನಸ್ಸಿನ ಭಾರ ತುಂಬಾ ಜಾಸ್ತಿಯಾಯಿತು.

ಕವಿ ರವೀಂದ್ರರು ಹೇಳಿದ ಮಾತು 'ಅಗಲುವಿಕೆಯು ಯಾವಾಗಲೂ ದುಃಖವಾದದ್ದು ('Parting is always sad'), ಆಗ ಚೆನ್ನಾಗಿ ಜ್ಞಾಪಕಕ್ಕೆ ಬಂತು. ಆದರೆ ಎಲ್ಲಕ್ಕಿಂತ ಹಿರಿದಾದ ಸಂತೋಷ ನನ್ನ ಅಗಲಿಕೆಯ ಭಾರವನ್ನು ಕಡಿಮೆಮಾಡಿಸಿತು. ಹೋ! ಒಂದು ವರ್ಷದ ಹಿಂದೆ! ನೆನಪು ಮಾಡಿಕೊಳ್ಳಲು ಸಹ ಹೆದರಿಕೆಯಾಗುತ್ತದೆ. ಭಾರತದ ನನ್ನ ಜನ ನನ್ನ ವಿಷಯದಲ್ಲಿಟ್ಟಿದ್ದ ನಂಬಿಕೆಗೆ ಅಪಾತ್ರನಾಗುವಷ್ಟು, ಅಮೇರಿಕೆಗೆ ನಾನು ಬಂದ ಗುರಿಯನ್ನು ಸಾಧಿಸದೆ, ಹಿಂತಿರುಗಿ ಬಿಡುತ್ತಿದ್ದೆನಲ್ಲಾ! ಆ ಚಿತ್ರ ನನಗಿನ್ನೂ ಕಣ್ಣಿಗೆ ಕಟ್ಟಿದಂತಿದೆ. ಒಂದು ವರ್ಷದನಂತರ! ಪತ್ರಿಕೋದ್ಯಮದಲ್ಲಿ ಯಶಸ್ವಿಯಾಗಿ ಎಂ.ಎ., ಡಿಗ್ರಿಯನ್ನು ಪಡೆದು, ನನಗೆ ಸಿಕ್ಕಿದ ವೇಳೆಯಲ್ಲಿ ಭಾರತದ ಬಗ್ಗೆ ಸಾಕಷ್ಟು ಸೇವೆ ಮಾಡಿ, ಯಾವ ನನ್ನ ಜನ ನನ್ನನ್ನು ಹರಸಿ ಕಳುಹಿಸಿದ್ದರೋ, ಆ ಜನರ ಆಸೆಯನ್ನು ಸಂಪೂರ್ಣಗೊಳಿಸಿದ ಮನಃ ತೃಪ್ತಿ ನನಗಾಯಿತಲ್ಲಾ, ಆ ಚಿತ್ರ. ಕಳೆದ ವರ್ಷದ ಚಿತ್ರ, ಈ ಚಿತ್ರದ ಎದುರು ಮಾಸಿಹೋಗಿ ನನ್ನ ಮುಂದಿನ ಕೆಲಸಕ್ಕೆ ಪುನಃ ಸ್ಫೂರ್ತಿಯನ್ನು ತಂದೊಡ್ಡಿತು.

ಬಸ್ಸಿನ ನಿಲ್ದಾಣದಲ್ಲಿ ನೂರಾರು ಜನ ಕೊಲಂಬಿಯನ್ನರು, 'Cheer you, Mr: Murthy, Good luck; Wish you the best of life; Wish you a happy journey Mr: Murthy, So long' ಎಂದು

ಹೇಳಿದ ಒಂದೊಂದು ಮಾತೂ ಈಗಲೂ ಕೇಳಿಸುತ್ತಿದೆ. ಆ ದೃಶ್ಯ ನಾನು ಎಂದೂ ಮರೆಯುವಂತಿಲ್ಲ. ಬಸ್ಸು ಹೊರಡುವ ಸಮಯ ಬಂದೇಬಿಟ್ಟಿತು. ಎಂಟು ಘಂಟೆ ಢಣ್ ಎಂದು ಹೊಡೆಯುತ್ತಲೇ ಬಸ್ಸಿನ ಸಾರಥಿ ಆ ಜನರ ಹರ್ಷೋದ್ಗಾರಗಳ ಮಧ್ಯೆ ಚಿಕಾಗೋ ಮಾರ್ಗವಾಗಿ ನಡೆಸಿಬಿಟ್ಟನು ಅಂದಿಗೆ ನನ್ನ ಒಂದು ವರ್ಷದ ರಸವತ್ತಾದ ಜೀವನದ ಒಂದು ಅಧ್ಯಾಯವೂ ಮುಗಿಯಿತೆಂದರೆ ತಪ್ಪೇನಿಲ್ಲ.

ಬಸ್ಸಿನಲ್ಲಿ ಹಾಗೆಯೇ ಮಲಗಿಬಿಟ್ಟೆ. ಬೆಳಿಗ್ಗೆ ನಾನು ಕಣ್ಣುಬಿಟ್ಟಾಗ ಚಿಕಾಗೋನಗರ ಬಂದುಬಿಟ್ಟಿತ್ತು.

ಚಿಕಾಗೋವಿನಿಂದ **ಡಿಟ್ರಾಯಿಟ್** ನಗರಕ್ಕೆ ಪ್ರಯಾಣ ಮಾಡಿದೆನು. ಡಿಟ್ರಾಯಿಟ್, '**ಫೋರ್ಡ್**' ಕಾರುಗಳ ನಗರ. ಬೆಳಿಗ್ಗೆಯಲ್ಲಾ ಸುಪ್ರಸಿದ್ಧವಾದ **ಎಡಿಸನ್ ಸಂಸ್ಥೆ** (Edison Institute) ಗೆ ಭೇಟಿಯಿತ್ತೆ. ಪ್ರಪಂಚದಲ್ಲಿ ವೈಜ್ಞಾನಿಕ ಬೆಳವಣಿಗೆ ಪ್ರಾರಂಭವಾದಾಗಿನಿಂದ ನಿನ್ನೆಯ ವರೆಗಿನ ಎಲ್ಲ ಯಂತ್ರ ಸಾಮಗ್ರಿಗಳನ್ನೂ ಈ ಪ್ರದರ್ಶನಾಲಯದಲ್ಲಿ ಇಟ್ಟಿದ್ದಾರೆ. **ಎಡಿಸನ್ನರ** ಕೈ ಬರಹದ ಕಾಗದಗಳನ್ನು ಜೋಪಾನವಾಗಿ ಇಟ್ಟಿದ್ದಾರೆ. ಈ ಪ್ರದಶನಾಲಯದ ಪಕ್ಕದಲ್ಲಿಯೇ ಎಡಿಸನ್ ಮಂದಿರ (Edison Cattage) ಎಂಬ ಮಾದರಿಯ ಹಳ್ಳಿಯೊಂದಿದೆ. ಇದು ಎಡಿಸನ್ನನು ತಯಾರಿಸಿದ ಮಾದರಿ ಹಳ್ಳಿ. ಅಮೇರಿಕೆಗೆ ಬಂದವರೆಲ್ಲಾ ಈ ಸಂಸ್ಥೆಯನ್ನು ನೋಡದೆ ಹೋಗಬಾರದು.

**ಡಿಟ್ರಾಯಿಟ್** ನಗರದ ಮಧ್ಯಭಾಗದಲ್ಲಿ ಡಿಟ್ರಾಯಿಟ್ ನದಿ ಹರಿಯುತ್ತದೆ. ಈಚೆ ದಡ ಅಮೇರಿಕಾಕ್ಕೆ ಸೇರಿದ್ದು. ಆಚೆ ದಡ ಕೆನಡಾಕ್ಕೆ ಸೇರಿದ್ದು. ಡಿಟ್ರಾಯಿಟ್‌ನಿಂದ ನೇರವಾಗಿ ಟೋರಾಂಟೋವಿಗೆ ಬಸ್ಸಿದೆ. ನಾನು ಮರುದಿನ ಟೋರಾಂಟೋವಿಗೆ ಟಿಕೆಟ್ಟನ್ನು ತೆಗೆದುಕೊಂಡು ಬಸ್ಸಿನಲ್ಲಿ ಕುಳಿತೆ. ಬಸ್ಸು ನದಿಯನ್ನು ದಾಟಿದ ಕೂಡಲೇ ಕೆನಡಾದ ಗಡಿಯಲ್ಲಿ ನಿಲ್ಲುತ್ತದೆ. ಅಲ್ಲಿ ಕೆನಡಾ ಸರ್ಕಾರದವರು ಎಲ್ಲರನ್ನೂ ಶೋಧಿಸುತ್ತಾರೆ. ನನ್ನ ರಹದಾರಿಯ ಚೀಟಿ ಬ್ರಿಟಿಷ್ ಸರ್ಕಾರದವರಿಂದಲೇ ಕೊಡಲ್ಪಟ್ಟಿದ್ದುದ

ರಿಂದಲೂ ಕೆನಡ ಸರ್ಕಾರವು ಬ್ರಿಟಿಷರಿಗೆ ಅಧೀನದಲ್ಲಿದ್ದುದರಿಂದಲೂ ಈ ರಹದಾರಿಯೇ ಸಾಕೆಂದು ನನ್ನ ಅಭಿಪ್ರಾಯವಾಗಿತ್ತು. ಪೋಲೀಸರು ನನ್ನೆಡೆಗೆ ಬಂದು ರಹದಾರಿಯನ್ನು ಶೋಧಿಸಿದಾಗ ರಹದಾರಿ ಸರಿಯಾಗಿಲ್ಲ ವೆಂದು ನಾನು ಅಕ್ರಮವಾಗಿ ಕೆನಡಾದೇಶಕ್ಕೆ ಕಾಲಿಟ್ಟಿರುವೆನೆಂದೂ ಹೇಳಿ ನನ್ನನ್ನು ಅಲ್ಲಿಯೇ ದಸ್ತಗಿರಿ ಮಾಡಿದರು. ನಾನು ನಿರುಪಾಯನಾಗಿ ಬಸ್ಸಿನಿಂದ ಮಧ್ಯ ರಾತ್ರಿಯಲ್ಲಿ ಇಳಿಯಬೇಕಾಯಿತು. ನನ್ನನ್ನು ಪೋಲೀಸ್ ಸ್ಟೇಷನ್ನಿಗೆ ಕರೆದೊಯ್ದರು. ರಾತ್ರಿ ಮೂರು ಘಂಟೆಯವರೆಗೆ ನನ್ನನ್ನು ಅಲ್ಲಿಟ್ಟಿದ್ದು ನನ್ನ ಬಗ್ಗೆ ವಿವರಣೆಗಳನ್ನೆಲ್ಲಾ ತಿಳಿದುಕೊಂಡಮೇಲೆ ನನ್ನನ್ನು ಕೆನಡಾ ಸಂಸ್ಥಾನದಿಂದ ಗಡೀಪಾರು ಮಾಡಿ ಪುನಃ ಡಿಟ್ರಾಯಿಟ್‌ಗೆ ಕರೆದು ಕೊಂಡುಬಂದು ಬಿಡುಗಡೆ ಮಾಡಿದರು. ನನ್ನ ಜೊತೆಗೆ ಒಬ್ಬ ಪೋಲೀಸ್ ಅಧಿಕಾರಿಯೂ ಬಂದಿದ್ದರು. ನಾನು ಕೆನಡಾಕ್ಕೆ ಪ್ರವೇಶ ಮಾಡಿದಂದಿನಿಂದ ಬಿಡುಗಡೆಯಾಗುವವರೆಗಿನಷ್ಟು ಕಾಲದಲ್ಲಿಯೂ ಪೋಲೀಸರು ತುಂಬಾ ಚೆನ್ನಾಗಿ ನೋಡಿಕೊಂಡರು.

**ಡಿಟ್ರಾಯಿಟ್**‌ನಿಂದ **ಕ್ಲೀವ್‌ಲೆಂಡ್**‌ಗೆ ಬಂದೆನು. ಅಲ್ಲಿ ಬೆಳಗ್ಗೆ ಬಸ್‌ಸ್ಟ್ಯಾಂಡಿನ ಸ್ನಾನಗೃಹದಲ್ಲಿ ಸ್ನಾನ ಮಾಡಿಕೊಂಡು ನೇರವಾಗಿ **ಬಫೆಲೋ** ನಗರಕ್ಕೆ ಪ್ರಯಾಣ ಬೆಳೆಸಿದೆನು.

ಸಾಗರದಿಂದ ಜೋಗದ ಜಲಪಾತಕ್ಕೆ ಹದಿನೆಂಟು ಮೈಲಿ ದೂರವಿರು ವಂತೆ ಬಫೆಲೋವಿನಿಂದ **ನಯಾಗರ** ಜಲಪಾತಕ್ಕೆ ಅಷ್ಟೇ ದೂರವಿದೆ. ನಯಾಗರ ಅಮೇರಿಕೆಯ ಸೌಂದರ್ಯದ ಖಣಿ. ಮನುಷ್ಯ ಮಾತ್ರದವರು ಚಿತ್ರಿಸಿದ ಅದ್ಭುತದ ಒಂದು ಪ್ರತೀಕ. ವೈಜ್ಞಾನಿಕ ಬೆಳವಣಿಗೆಯ ಒಂದು ಮಹಾ ಪ್ರಯೋಗ. ಇದನ್ನು ಜೋಗದ ಜಲಪಾತಕ್ಕೆ ಹೋಲಿಸಬೇಕು. ಪ್ರಕೃತಿ ಸೌಂದರ್ಯದ ಬೀಡು ಜೋಗದ ಜಲಪಾತ. ಶರಾವತಿಯ ಮಡ ಲಿನಲ್ಲಿ ನೈಸರ್ಗಿಕ ಸಂಪತ್ತು ದತ್ತವಾಗಿ ಬಂದಿದೆ ಜೋಗದ ಜಲಪಾತಕ್ಕೆ. ಈ ದೃಷ್ಟಿಯಲ್ಲಿ ಜೋಗಕ್ಕೂ ನಯಾಗರಕ್ಕೂ ಅಜಗಜಾಂತರ.

———

# ಮರಳಿ ಭಾರತಕ್ಕೆ

ನಯಾಗರ ಜಲಪಾತವನ್ನು ನೋಡಿಕೊಂಡು, ನ್ಯೂಯಾರ್ಕಿಗೆ ಬಂದೆನು. ಫಿಲಡೆಲ್ಫಿಯಾದಲ್ಲಿ ಅಮೇರಿಕದ ಮುಖ್ಯ ಪಕ್ಷಗಳಲ್ಲಿ ಒಂದಾದ **ರಿಪಬ್ಲಿಕನ್** ಪಕ್ಷದ ರಾಷ್ಟ್ರಕೂಟವು, ೧೯೪೮ನೇ ಇಸ್ವಿಯ ಅಧ್ಯಕ್ಷ ಚುನಾವಣೆಗೆ ರಿಪಬ್ಲಿಕನ್ ಪಕ್ಷದ ಉಮೇದುವಾರನನ್ನು ನಿಲ್ಲಿಸಲು ಸೇರುವುದಿತ್ತು. ಪಕ್ಷದ ಅಧ್ಯಕ್ಷರಾದ **ಮಿ|| ಕೆರೋಲ್ ರೀಸ್**ರು ನನ್ನ ಉತ್ಸಾಹವನ್ನು ಮೆಚ್ಚಿ ನನಗೊಂದು ವಿಶೇಷ ಔತಣ ಕೊಟ್ಟಿದ್ದರು. ಆ ರಾಷ್ಟ್ರಕೂಟಕ್ಕೆ ಬಂದಿದ್ದ ಭಾರತೀಯ ಪತ್ರಿಕೋದ್ಯಮಿ ನಾನೊಬ್ಬನೇ ಆಗಿದ್ದೆನು. ರಿಪಬ್ಲಿಕನ್ ಪಕ್ಷದ ನಾಯಕರುಗಳಾದ, **ಗವರ್ನರ್ ಡ್ಯೂಯಿ, ಅಧ್ಯಕ್ಷ ಹೂವರ್, ರಾಬರ್ಟ್ ಟ್ಯಾಫ್ಟ್, ಗವರ್ನರ್ ವಾರೆನ್, ಹೆರಾಲ್ಡ್ ಸ್ಟ್ಯಾಸಿನ್, ವ್ಯಾಂಡೆನ್ ಬರ್ಗ್**, ಮುಂತಾದವರನ್ನು ನೋಡಿದೆನು. ಆಗ ನಡೆದ ರಾಷ್ಟ್ರಕೂಟದಲ್ಲಿ ಗವರ್ನರ್ ಡ್ಯೂಯಿಯವರು, ಅಧ್ಯಕ್ಷತನಕ್ಕೆ ಉಮೇದುವಾರರಾಗಿ ನಿಯಮಿಸಲ್ಪಟ್ಟರು. ಅವರು ಡೆಮಾಕ್ರಟಿಕ್ ಪಕ್ಷದ ಹ್ಯಾರಿ ಟ್ರೂಮನ್ನರ ವಿರುದ್ಧ ನಿಂತು ಸೋತುಹೋದರು.

ನ್ಯೂಯಾರ್ಕಿನ ಗೆಳೆಯರನ್ನು, ಭಾರತೀಯ ಹಿರಿಯರಾದ, ಸ್ವಾಮಿ ನಿಖಿಲಾನಂದ, ಶ್ರೀ ಮೋಡಕ್, ಶ್ರೀ ಪೆಕಾನ್, ಶ್ರೀ ಮರಾಠೆ, ಶ್ರೀ ಜೆ. ಜೆ. ಸಿಂಗ್, ಮುಂತಾದವರನ್ನು ನೋಡಿಕೊಂಡು, **ಮೊರೀನ್ ಎಸ್. ಎಸ್. ಪ್ಲ್ಯಾಷರ್** ಎಂಬ ಹಡಗಿನಲ್ಲಿ, ಜುಲೈ ಎರಡನೆಯ ತಾರೀಖು, ಶ್ವೇತನಾಡಿನಿಂದ, ಸಾಮ್ರಾಜ್ಯನಾಡಿಗೆ ಪ್ರಯಾಣ ಬೆಳೆಸಿದೆನು.

ನ್ಯೂಯಾರ್ಕಿನಲ್ಲಿರುವ, ಇನ್ಸ್ಟಿಟ್ಯೂಟ್ ಆಫ್ ಇಂಟರ್‌ನ್ಯಾಷನಲ್ ಎಜುಕೇಷನ್ ಸಂಸ್ಥೆಯವರು, ಲಂಡನ್ ವಿಶ್ವವಿದ್ಯಾನಿಲಯದಲ್ಲಿ ಬೇಸಿಗೆಯಲ್ಲಿ ಇಂಗ್ಲೀಷ್ ಸಾಹಿತ್ಯ ಅಭ್ಯಾಸ ಮಾಡಲು ಒಂದು ವಿದ್ಯಾರ್ಥಿವೇತನವನ್ನು ಕೊಟ್ಟಿದ್ದರು. ಅದರ ಸದುಪಯೋಗ ಮಾಡಿಕೊಳ್ಳುವ ಸಲುವಾಗಿ ಲಂಡ

ಸ್ಸಿನಲ್ಲಿ ಕೆಲವು ತಿಂಗಳಿದ್ದು, ಆ ಅಭ್ಯಾಸವನ್ನು ಪೂರ್ತಿಮಾಡಿ ಡಿಪ್ಲೋಮ ಪಡೆದೆನು.

ಲಂಡನ್ನಿಗೂ ಮತ್ತು ನ್ಯೂಯಾರ್ಕಿಗೂ ವಿಪರೀತ ವ್ಯತ್ಯಾಸ ಕಾಣುತ್ತದೆ. ಅಲ್ಲಿ ಹೊಟ್ಟೆ ತುಂಬಲು ಸಾಕಷ್ಟು ಆಹಾರ, ಬಟ್ಟೆ ಯಿಲ್ಲ. ಸೌಖ್ಯವೂ ಇಲ್ಲ. ಯುದ್ಧದ ಪರಿಣಾಮ ಅವರ ಮೇಲೆ ಚೆನ್ನಾಗಿ ಆಗಿದೆ. ಆದರೆ ಆ ಜನರಲ್ಲಿ ಕೆಚ್ಚಿದೆ. ಮುಖದ ಮೇಲೆ ಕಳೆ ಯಿದೆ. ಕಷ್ಟ ಸಹಿಷ್ಣುತೆಯನ್ನು ಕಾಣಬಹುದು. ಲಂಡನ್ ನಗರದಲ್ಲೆಲ್ಲಾ ಬಾಂಬಿನ ಸಿಡಿತದಿಂದ ಸುಟ್ಟು ಭಸ್ಮವಾದ ಪ್ರದೇಶಗಳು ಅಲ್ಲಲ್ಲಿ ಕಾಣುತ್ತವೆ. ಒಂದೊಂದು ಸಲ ಈ ಜನರನ್ನು ನೋಡಿದರೆ ಮನಸ್ಸು ಕರಗುತ್ತದೆ.

ಇಂಗ್ಲಿಷ್ ಜನ ಎಂದಿನಂತೆಯೇ. ನಮ್ಮನ್ನು ಇನ್ನೂ ಗುಲಾಮಗಿರಿ ಭಾವನೆಯಿಂದಲೇ ನೋಡುತ್ತಾರೆ. ಎಲ್ಲರೂ ಹಾಗಲ್ಲ. ಈ ಜನಕ್ಕೆ ಉಳಿದೆಲ್ಲ ಪರಕೀಯ ಜನಾಂಗಗಳ ಮೇಲೂ ಒಂದು ತರಹೆಯ ಹೆಮ್ಮೆ. ಸವಿ ಮಾತು. ಬಿಗಿ ಹೃದಯ. ಹಾಗೆಂದೇ ಸಾಮ್ರಾಜ್ಯ ಕಟ್ಟಿದರಲ್ಲವೇ! ಯುದ್ಧದ ಬಿಸಿ ತಗಲಿ ಜನ ಬಳಲಿ ಬೆಂದುಹೋಗಿದ್ದಾರೆ. ಆಸಾಮ್ರಾಜ್ಯಸೂರ್ಯನ ವೈಖರಿ ಲಂಡನ್ನಿಗೆ- ಇಂಗ್ಲೆಂಡಿಗೆ ಇಂದಿಲ್ಲ. ಆಹಾರ, ಬಟ್ಟೆ ಸೌಕರ್ಯ, ಎಲ್ಲ ರೀತಿಗಳಲ್ಲಿಯೂ ಕಷ್ಟ ವಿದೆ. ಆದರೂ ಇಂಗ್ಲಿಷ್ ಜನ ಕಲ್ಲೆದೆಯವರು. ಧೈರ್ಯದಿಂದ ಆ ಕಷ್ಟಗಳನ್ನು ಅನುಭವಿಸುತ್ತಿದ್ದಾರೆ. ಅದೇ ಆ ಜನರ ಜೀವನದ ಗುಟ್ಟು.

**ಜಾರ್ಜ್ ಬರ್ನಾರ್ಡ್ ಷಾ**ರವರನ್ನು ನೋಡಲು **ಸೆಂಟ್‌ಲಾರೆನ್ಸ್** ನಲ್ಲಿರುವ **ಅಯುಟ್**‌ಗೆ ಹೋಗಿದ್ದೆ. ಅಂದು ಸಂಜೆ ಅವರು ತೋಟದಲ್ಲಿ ಕುಳಿತುಕೊಂಡಿದ್ದರು ನಾನು ಗಾಂಧೀಜಿ ಮೇಲೆ ಬರೆದ ಪುಸ್ತಕವೊಂದನ್ನು ಅವರ ಹುಟ್ಟಿದ ಹಬ್ಬಕ್ಕೆ ಬಹುಮಾನವಾಗಿ ಕೊಟ್ಟೆ. ಮುಗುಳ್ನಗೆಯಿಂದ ಸ್ವೀಕರಿಸಿದರು ಅಷ್ಟೆ. ಮಾತನಾಡಲಿಲ್ಲ.

ಇಂಗ್ಲೆಂಡಿನ ಸುಪ್ರಸಿದ್ಧ ವಿಶ್ವವಿದ್ಯಾನಿಲಯಗಳಾದ **ಆಕ್ಸ್‌ಫರ್ಡ್** ಮತ್ತು **ಕೇಂಬ್ರಿಡ್ಜ್** ವಿಶ್ವವಿದ್ಯಾನಿಲಯಗಳಿಗೂ ಹೋಗಿದ್ದೆನು. ಕೇಂಬ್ರಿಡ್ಜ್

ನಲ್ಲಿ, **ಶ್ರೀ ಭರತರಾಜಸಿಂಗ್** ಮತ್ತು **ಸಿ. ಡಿ. ನರಸಿಂಹಯ್ಯ**ನವರನ್ನು ಭೇಟಿಮಾಡಿ, ಅವರ ಅತಿಥಿಯಾಗಿದ್ದೆನು. ಕೇಂಬ್ರಿಡ್ಜ್ ವಿಶ್ವವಿದ್ಯಾನಿಲಯ, ಆಕ್ಸ್‌ಫರ್ಡ್‌ಗಿಂತ ಚೆನ್ನಾಗಿದೆ. ಪ್ರಕೃತಿ ಸೌಂದರ್ಯ ಇಲ್ಲಿ ತುಳುಕುತ್ತಿದೆ. ವಿಶ್ವವಿದ್ಯಾನಿಲಯದ ಮಧ್ಯದಲ್ಲಿಯೇ ಸಣ್ಣ ನದಿಯೊಂದು ಹರಿಯುತ್ತದೆ. ಶ್ರೀ ಸಿಂಗ್, ಅವರ ಕಾಲೇಜಾದ **ಕಿಂಗ್ಸ್** ಕಾಲೇಜಿಗೆ ಕರೆದೊಯ್ದಿದ್ದರು. ಅಲ್ಲಿ **ರುಡ್ಯಾರ್ಡ್ ಕಿಪ್ಲಿಂಗ್** ಸೇತುವೆ ಇದೆ. ಆತ ಅಲ್ಲಿಯೇ ನಿಂತು ಸ್ಫೂರ್ತಿ ಪಡೆದನಂತೆ. ನಾವಿಬ್ಬರೂ ಅಲ್ಲಿ ನಿಂತು ಒಂದು ಸಲ ಕುಣಿದೆವು ಸ್ಫೂರ್ತಿಗಾಗಿ. ಪಂಡಿತ ಜವಹರಲಾಲರು ಓದಿದ **ಟ್ರನಿಟಿ** ಕಾಲೇಜಿಗೆ ಹೋಗಿದ್ದೆವು. ಅವರು ಓದುತ್ತಿದ್ದ, ವಾಸಿಸುತ್ತಿದ್ದ ಕೊಠಡಿಯನ್ನು ನೋಡಿಕೊಂಡು ಬಂದೆವು.

ಲಂಡನ್ನಿನಲ್ಲಿ ಕನ್ನಡಿಗರ ಸಭೆಯೊಂದನ್ನು ಸೇರಿಸಿದ್ದೆನು. ಸುಮಾರು ಐವತ್ತು ಕನ್ನಡಿಗರು ಬಂದಿದ್ದರು. ಕೇಂಬ್ರಿಡ್ಜ್‌ನಿಂದ ಶ್ರೀ ಭರತರಾಜ ಸಿಂಗ್ ಬಂದಿದ್ದಿರು. ಆಕ್ಸ್‌ಫರ್ಡ್‌ನಿಂದ **ಶ್ರೀಮತಿ ಶಾರದಾಬಾಯಿ** ಬಂದಿದ್ದರು. ಇವರು ಬೆಂಗಳೂರಿನ ಮಹಾರಾಣಿ ಕಾಲೇಜಿನಲ್ಲಿ ಚರಿತ್ರೆಯ ಅಧ್ಯಾಪಕಿ.

ಲಂಡನ್ನಿನ **ಪಿಕೆಡೆಲ್ಲಿ ಸರ್ಕಸ್**‌ನಲ್ಲಿ **ಧಿಲ್‌ದಾರ್** ಎಂಬ ಹೆಸರಿನ ಉಪಹಾರ ಗೃಹವಿದೆ. ಇದನ್ನು ನಡೆಸಿಕೊಂಡು ಬರುತ್ತಿರುವವರು ಒಬ್ಬ ಕನ್ನಡಿತಿ. ಮೈಸೂರು ಪುಳಿಯೋಗರೆ, ರಸಂ, ಮಜ್ಜಿಗೆ ಹುಳಿ, ಎಲ್ಲಾ ಮಾಡುತ್ತಾರೆ ಇಲ್ಲಿ. ಅಂದು ನಾವೆಲ್ಲ ಸೇರಿ ಅಲ್ಲಿಯೇ ಊಟ ಮಾಡಿದೆವು.

ಸೆಪ್ಟಂಬರ್ ೨೫ನೇ ತಾರೀಖು '**ಜಲ್-ಅಜಾದ್**' ಎಂಬ ಭಾರತೀಯ ಹಡಗಿನಲ್ಲಿ ಭಾರತಕ್ಕೆ ಹಿಂತಿರುಗಬೇಕೆಂದು ನಿರ್ಧರಿಸಿದೆನು. ಈ ಮಧ್ಯೆ, ಫ್ರಾನ್ಸಿನ ಸುಂದರ ನಗರವಾದ **ಪ್ಯಾರಿಸ್**, ಬೆಲ್ಜಿಯಂನ ರಾಜಧಾನಿ **ಬ್ರಸೆಲ್ಸ್**, ಸುಂದರನಾಡು **ಸ್ವಿಟ್ಜರ್ಲೆಂಡ್**, ಧರ್ಮಭೂಮಿ **ರೋಂ**, ನಗರಗಳನ್ನು ನೋಡಿಕೊಂಡು ಬಂದೆನು. ಬಂದಕೂಡಲೇ ಒಂದು ಸಂತೋಷದ ಕೆಲಸ ನನಗಾಗಿ ಕಾದಿತ್ತು.

ಅದೇ ಸಾಗರದಾಚೆ ನನ್ನ ಕೊನೆಯ ಕಾರ್ಯಕ್ರಮ. ಕನ್ನಡನಾಡಿನ ಹಿರಿಯ ನಾಯಕರೊಬ್ಬರನ್ನು ಸತ್ಕರಿಸುವುದೇ ಆಗಿತ್ತು. ಗಾಂಧೀಜಿಯ ನಿಸ್ಸೀಮ ಭಕ್ತರೂ, ಭಾರತದ ನಾಯಕರೂ, ಹಿರಿಯಸಾಹಿತಿಗಳೂ ಆದ **ಶ್ರೀ ರಂಗನಾಥ ರಾಮಚಂದ್ರ ದಿವಾಕರರು,** ರೋಮ್ ನಗರದಲ್ಲಿ ನಡೆದ ಅಂತರ ರಾಷ್ಟ್ರೀಯ ಪಾರ್ಲಿಮೆಂಟರಿ ಸಮ್ಮೇಳನವನ್ನು ಮುಗಿಸಿಕೊಂಡು **ಡಾ|| ಬಾಲಕೃಷ್ಣ ಕೇಸ್ಕರ** ರೊಂದಿಗೆ ಲಂಡನ್ನಿಗೆ ಬಂದಿದ್ದರು. ಈ ಅವಕಾಶವನ್ನು ಉಪಯೋಗಿಸಿಕೊಂಡು ಭಾರತೀಯ ವಿದ್ಯಾರ್ಥಿ ಸಂಘದ ಆಶ್ರಯದಲ್ಲಿ ಸತ್ಕಾರಕೂಟವೊಂದನ್ನು ಏರ್ಪಡಿಸಿದ್ದೆವು. ಮೈಸೂರಿನ ಕಲಾವಿದರಾದ **ಶ್ರೀ ನಾಗರಾಜರಾಯರು** ವೀಣೆಯನ್ನು ಬಾರಿಸಿ ಕನ್ನಡಿಗರ ಹೃದಯದ ತಂತಿಯನ್ನೂ ಮಿಾಟಿದರು. ಈ ಸಭೆಗೆ ಬಹಳ ಜನ ಕನ್ನಡಿಗರು ಬಂದಿದ್ದರು.

ಸೆಪ್ಟಂಬರ್ ೨೫ನೇ ತಾರೀಖು ಒಂದೇಬಿಟ್ಟಿತು. ಲಂಡನ್ನಿನ ಟಿಲ್‌ಬರಿ ಡಾಕಿನಿಂದ, 'ಜಲ್-ಅಜಾದ್' ಎಂಬ ಭಾರತೀಯ ಹಡಗು, ಒಂದು ನೂರು ಭಾರತೀಯ ವಿದ್ಯಾರ್ಥಿಗಳನ್ನು ಹೊತ್ತುಕೊಂಡು ಬೊಂಬಾಯಿಗೆ ಪ್ರಯಾಣಮಾಡಿತು. ೧೯ ದಿನಗಳ ಪ್ರವಾಸದ ನಂತರ ಅಕ್ಟೋಬರ್ ೧೫ನೇ ತಾರೀಖು ಬೆಳಿಗ್ಗೆ ನಮ್ಮ ಹಡಗು ಬೊಂಬಾಯಿ ಬಂದರನ್ನು ತಲುಪಿತು.

**" ಸಾಗರದಾಚೆ "** ಹೋಗಿದ್ದ ನಾನು ಪುನಃ ತಾಯಿನಾಡಿಗೆ ೨೨ ತಿಂಗಳ ನಂತರ ಮರಳಿ ಬಂದೆನು. ನನ್ನ ಗೆಳೆಯರಾದ ಶೌರಿ, ಸಂಜೀವ, ನಮ್ಮಣ್ಣ ಶ್ರೀ ಪ್ರಲ್ಹಾದರಾಯರು, ನಮ್ಮೂರಿನ ಅಧ್ಯಕ್ಷ, ಟೇಂಬೆ ಕೃಷ್ಣರಾಯರು, ನನ್ನ ಬಾಲ್ಯ ಗೆಳೆಯರಾದ ಶ್ರೀಗಳಾದ ವೆಂಕೋಬ ರಾವ್, ಮೂಡಿ ಈಶ್ವರಪ್ಪ, ವೆಂಕಟರಮಣಪ್ಪ, ಪರಶುರಾಮಪ್ಪ, ನನ್ನನ್ನು ಸ್ವಾಗತಿಸಲು ಬೊಂಬಾಯಿಗೆ ಬಂದಿದ್ದರು.

ಹಡಗಿನಿಂದಿಳಿದು ಶೌರಿಯಲ್ಲಿ ಸ್ವಲ್ಪ ವಿಶ್ರಮಿಸಿಕೊಂಡು, ಸಂಜೀವನ ಕೃಷ್ಣಕುಂಜಕ್ಕೆ ತೆರಳಿದೆನು. ಅಲ್ಲಿಗೆ ನನ್ನ ಸಾಗರದಾಚೆಯ ಪ್ರವಾಸವು ಮುಕ್ತಾಯವಾಯಿತು.

---

Printed at theSreevathsa Press,Madras-14.